

ಮಳೆಯಿಂದ ತೊಯ್ದು ಮಣ್ಣು ವೈಶಾಖದ ಬಿಸಿ ಹವೆಗೆ ಕಟುವಾಸನೆ ಕೂಡಿಸಿತು. ಹೊರಗಡೆ ಗಾಳಿ ಸುಂಯ್‌ಗುಡುತ್ತಿತ್ತು.

ಗಂಟೆ ಬಾರಿಸಿತು. ವಾದ್ಯ ಸಂಗೀತ ಏರಿದಂತೆ ಪ್ರೇಕ್ಷಕರ ಕಣ್ಣುಗಳು ಮಧ್ಯಸ್ಥ ಕಂಬದ ಮೇಲೆ ಕೇಂದ್ರೀಕರಿಸಿದವು.

ದಂತದ ಮೈಬಣ್ಣದ ಹೆಣ್ಣು ಹತ್ತು ಅಡಿ ಎತ್ತರದ ಕಂಬ ಏರಿಮಣೆಯ ಮಧ್ಯೆ ಎರಡು ಶೀಷೆಗಳ ಮೇಲಿನ ಹಲಗೆಯಲ್ಲಿ ಸರಿದಾಡುತ್ತಾ ನಿಂತಳು. ಮತ್ತೊಂದು ಹೆಣ್ಣು ಅವಳ ಹೆಗಲೇರಿ ತಲೆ ಕೆಳಗುಮಾಡಿ ನಿಧಾನವಾಗಿ ಹಿಂದಕ್ಕೆ ಜಾರಿ ಶೀಷೆಗಳ ನಡುವಿನ ಹಳದಿ ಚೆಂಡನ್ನು ಹಲ್ಲುಗಳಿಂದ ಕಚ್ಚಿ ಮೇಲಕ್ಕೆ ಬಂದಳು.

ಉಸಿರು ಕಟ್ಟಿ ಕುಳಿತ ಪ್ರೇಕ್ಷಕವೃಂದ ಕಿವಿ ಮರಗಟ್ಟುವಂತೆ ಕರತಾಡನ ಮಾಡಿತು. ಮುಂದಿನ ಸಾಲಿನಲ್ಲಿ ದಢೂತಿ ಹೆಂಗಸಿನ ಭುಜ ಹಿಡಿದು ಕುಳಿತ ಹುಡುಗಿ ನೀಳವಾಗಿ ಉಸಿರು ಹಾಕಿದಳು.

ಕಾರ್ತೀಕ ಹಿಡಿ ಇಲ್ಲದ ಹಳೆಯ ಕುರ್ಚಿಯಲ್ಲಿ ಬೇಸರದಿಂದ ಮೈ ಹೊರಳಿಸಿ ಆಕಳಿಸಿದ. ವಿದ್ಯುತ್ ದೀಪಗಳು ಮತ್ತೆ ಆರಿಹೋದವು. ಜನ 'ಹೋ....' ಎಂದು ಹುಯಿಲೆಬ್ಬಿಸಿದರು.

ರಿಂಗ್ ಮಾಸ್ಟರ್ ಆತುರದ ಗಟ್ಟಿ ಸ್ವರದಲ್ಲಿ ಬೇಡಿದ :

"ಐದು ನಿಮಿಷ ಅವಕಾಶ ಕೊಡಿ, ಮಹಾ ಜನಗಳೇ....ಐದೇ ನಿಮಿಷ."

ಅಕಾಲ ಮಳೆಯಿಂದ ಆವರೆಗೆ ಮೂರನೆ ಬಾರಿಗೆ ದೀಪ ಆರಿತ್ತು. ಕಾರ್ತೀಕ

ಬೇಸರಗೊಳ್ಳಲಿಲ್ಲ. ಸ್ನೇಹಿತನ ಒತ್ತಾಯಕ್ಕೆ ಸರ್ಕಸ್ ಪ್ರದರ್ಶನಕ್ಕೆ ಬಂದಿದ್ದವನು ತನ್ನ ಬಗೆಗೇ ನಿರಾಸಕ್ತನಾಗಿದ್ದ.

ಕತ್ತಲು ಆವರಿಸಿದ ನೂರಾರು ರಂಧ್ರಗಳ ಕ್ಯಾನ್ವಾಸ್ ಚಾವಣಿಯ ಸರ್ಕಸ್ ಡೇರೆ. ಪಕ್ಕದಲ್ಲಿ ಕುಳಿತವನು ತಲೆ ಚಿಟ್ಟು ಹಿಡಿಸುವ ವಾಚಾಳಿ ಸ್ನೇಹಿತ ಮಲ್ಲಿಕಾರ್ಜುನ.

ದೀಪಗಳು ಕ್ಷಣಕಾಲ ಮಿಂಚಿ ಜನಗಳಿಗೆ ಕಚಗುಳಿ ಇಟ್ಟು ಮತ್ತೆ ಆರಿಹೋದವು. ತಾಳ್ಮೆಗೆಟ್ಟ ಹಾರಂಗಿ ಜಲಾಶಯದ ಕೂಲಿಕಾರರ ಸಿಳ್ಳು, ಬೈಲುಗುಪ್ಪೆಯ ಟಿಬೆಟಿಯನ್ನರ ಅರ್ಥವಾಗದ ಭಾಷೆಯ ಗುಜುಗುಜು, ಪ್ರದರ್ಶನಕ್ಕೆ ಉತ್ಸಾಹದಿಂದ ಬಂದು ನಿರಾಶರಾಗಿ ಕುಳಿತ ಹೆಂಗಸರ ಗೊಣಗು, ಮಕ್ಕಳು ಗಲಭೆ ಎಲ್ಲವೂ ಒಂದಾದವು. ಝೇಂಕಾರದಲ್ಲಿ ಕಿಕ್ಕಿರಿದು ತುಂಬಿತ್ತು ಹಳೆಯ ಸರ್ಕಸ್ ಡೇರೆ.

ಕಾರ್ತೀಕನ ಮಧುಚಂದ್ರದ ನಾಲ್ಕನೆಯ ರಾತ್ರಿಯಾಗಬೇಕಿತ್ತು ಅಂದು ವ್ಯಗ್ರ ಮನಸ್ಸಿಗೆ ಪ್ರದರ್ಶನ ಮುಂದುವರಿದರೆ ಸಾಕು ಎನಿಸಿತ್ತು. ಮುಂದಿನ ಸಾಲಿನ ದಪ್ಪ ಹೆಂಗಸು ಗಡಸು ಗಂಟಲಿನಲ್ಲಿ ಹುಡುಗಿಯೊಂದಿಗೆ ಚರ್ಚೆ ನಡೆಸಿದ್ದಳು. ಜನರ ಅವಾಚ್ಯ ಶಬ್ದಗಳ ಕಡೆ ಕಿವಿಗೊಡದೆ ಸರ್ಕಸ್ ತಂಡ ಟಾರ್ಚು, ವಿದ್ಯುತ್ ತಂತಿಗಳನ್ನು ಹಿಡಿದು ಹರಿದಾಡಿತು.

ಕಾರ್ತೀಕನಿಗೆ ಕತ್ತಲು ಅಸಹನೀಯವಾಯಿತು. ಅವನಿಗೆ ಕತ್ತಲಿನಲ್ಲೂ ಸಮೀಪದಲ್ಲಿ ಸ್ಪಷ್ಟವಾಗಿ ಕಾಣುತ್ತಿದ್ದ ನೋಟ ಅದು. ಗಂಡುಹೆಣ್ಣುಗಳ ಪ್ರಣಯ ಸಲ್ಲಾಪ, ಚೇಷ್ಟೆ! ಡೇರೆಯ ಸುತ್ತಲಿನ ಪೊದೆಗಳ ವಾಸನೆ ಅವನ ಎದೆಯಲ್ಲಿ ನೋವಿನ ಹೊಗೆ ಎಬ್ಬಿಸಿತು. ಹೃದಯದಲ್ಲಿ ಮುಳ್ಳಾಡಿಸಿದ ಕಹಿ ನೆನಪು!

ಆರು ದಿನಗಳ ಹಿಂದೆ, ವಿವಾಹಕ್ಕೆ ಎರಡೇ ದಿನಗಳಿಗೆ ಮೊದಲು ಶರ್ಮಿಳಾ ಮೂರು ಪಂಕ್ತಿಗಳ ಚೀಟಿ ಬರೆದು ಹನ್ನೊಂದು ತಿಂಗಳ ತನ್ನ ಪ್ರಣಯ ನಾಟಕಕ್ಕೆ ಮುಕ್ತಾಯದ ತೆರೆ ಎಳೆದಿದ್ದಳು. ಬದುಕಿನ ಅತ್ಯುತ್ತಮ ಸಂಗಾತಿ ಎನಿಸಿದ ಪ್ರದೀಪನೊಂದಿಗೆ ಹೊರಟುಹೋಗಿದ್ದಳು. ಕಾರ್ತೀಕ ಬರೆಯುತ್ತಿದ್ದ 'ಪ್ರಣಯ ದೋಣಿ' ಕಾದಂಬರಿಯ ವಸ್ತು ಬದಲಿಸಿತು. ಭಗ್ನ ಪ್ರಣಯದ ತನ್ನ ಕಥೆಯನ್ನು ಅದಕ್ಕೆ ಅಳವಡಿಸಿ 'ಮಣ್ಣಿನ ದೋಣಿ'ಯನ್ನು ಹಾರಂಗಿ ಜಲಾಶಯದ ಹಿನ್ನೆಲೆಯಲ್ಲಿ ಪೂರೈಸಲು ಬಂದಿದ್ದ.

ತೂಗುದೀಪಗಳು ಒಮ್ಮೆಗೇ ಜನರ ಕಣ್ಣುಗಳನ್ನು ಕುಕ್ಕಿ ಅರಳಿಸಿದವು. ಗಂಟೆಯ ಕಿಂಕಿಣಿ ನಾದದೊಂದಿಗೆ ಪ್ರದರ್ಶನ ಸಾಗಿತು. 'ಹಾರುವ ಭೂತಗಳು' ಎಡಬಲದ ಉಯ್ಯಾಲೆಗಳಿಂದ ತೂಗಾಡಿದವು. ಜೋಕರ್ ಎದುರಿನ ಉಯ್ಯಾಲೆ ಸೇರಲಿಲ್ಲ. ಕಳಚಿದ ಅವನ ಪಟ್ಟೆ ರಂಗಿನ ಪಾಯಿಜಾಮ ಎದುರಾಳಿಯ ಕೈಗೆ ಸಿಕ್ಕಿತು. ಪ್ರೇಕ್ಷಕ

ವೃಂದದ ನಗೆ ಭೋರ್ಗರೆಯಿತು.

ಮುಂದಿನ ಸಾಲಿನ ಹುಡುಗಿ ಚಪ್ಪಾಳೆ ಹಾಕಿ ಸಶಬ್ದವಾಗಿ ನಕ್ಕಳು. ಡೇರೆಯ ಮೇಲೆ ಪಟಪಟಿಸುತ್ತಿದ್ದ ಮಳೆ ಬಿರುಸಾದ ಕೂಡಲೇ ಜನರ ತಾಳ್ಮೆ ಪರೀಕ್ಷಿಸುವಂತೆ ನಾಲ್ಕನೆಯ ಬಾರಿಗೆ ದೀಪಗಳು ಆರಿದವು.

"ಹಾಳು ಸರ್ಕಸ್‌ನಲ್ಲಿ ಪಕ್ಷಿಗಳೇ ಇಲ್ಲ" ಎನ್ನುತ್ತಾ ಎದ್ದು ನಿಂತ ಕಾರ್ತೀಕ.

"ಪಕ್ಷಿ ಕಾಣೋಕೆ ಇದು ರಂಗನತಿಟ್ಟಲ್ಲ....ಕೂತ್ಕೊಳ್ಳೋ, ಸನ್ಯಾಸಿ ಹುಡುಗ!"

ಸನ್ಯಾಸಿಯಲ್ಲದ, ಹುಡುಗನೂ ಅಲ್ಲದ ಪಕ್ಷಿ ಪ್ರೇಮಿಯ ಕೈಹಿಡಿದು ಜಗ್ಗಿ ಕೂಡಿಸಿದ ಮಲ್ಲಿಕಾರ್ಜುನ.

ಕತ್ತಲಿನಲ್ಲಿ ಜಿಗಿ ಜಿಗಿ ನೆರೆದು ಗೊಂದಲ ಹೂಡಿದ ಆಕಾರರಹಿತ ಅಸ್ಪಷ್ಟ ಆಕೃತಿಗಳು, ಮಿನುಗುವ ಬೀಡಿ, ಸಿಗರೇಟುಗಳ ಉರಿಬಿಂದುಗಳು.

ಮುಂದಿನ ಸಾಲಿನಲ್ಲಿ ದಪ್ಪ ಹೆಂಗಸಿನ ಮಾತು ನಿಂತಿತ್ತು. ಜನಪದದ ಗುನುಗುನು ರಾಗ ಇಂಪಾಗಿ ಕೇಳಿಸಿತು.

'ತಲೆಯಲಿ ಒಯ್ದಳು ಗುಲಾಬಿ ಹೂವ

ಉಳಿಸಿಹೋದಳು ಮುಳ್ಳು ಕಾಂಡವ'

ಮನದಲ್ಲಿ ಭುಗಿಲೇಳುತ್ತಿದ್ದ ಭಾವನೆಗಳು, ಆ ಎರಡು ಪಂಕ್ತಿಗಳಲ್ಲಿ ಮೂರ್ತವಾದಾಗ ಕಾರ್ತೀಕ ರೋಮಾಂಚನಕ್ಕೆ ಸಿಕ್ಕಿದ.

ಅನುಭವ ಕಾಣದ ಬಾಲಿಶ ಕಂಠದಲ್ಲಿ ಅರ್ಥವಿದೆ. ಹಾಡಿನಲ್ಲಿ ತನ್ನದೇ ಪರಿಸ್ಥಿತಿಯ ಚಿತ್ರಣ. ಸದ್ಯದ ಬದುಕಿಗೆ ಅನುಕಂಪದ ಸೇಚನ.

ಗುಜುಗುಜು ಮುಂದುವರಿದಿತ್ತು. ಮುಂದಿನ ಸಾಲಿನ ತಗ್ಗಿನಲ್ಲಿದ್ದ ಹಾಡಿನ ಹುಡುಗಿ ಸರಿಯಾಗಿ ಕಾಣುತ್ತಿರಲಿಲ್ಲ. ಬೆಳಕು ಕತ್ತಲಿನ ಕಣ್ಣುಮುಚ್ಚಾಲೆ ಸಾಗಿ ಬೆಳಕು ಭಿಮ್ಮನ ಅರಳಿಬಂತು. ಜನಸ್ತೋಮದ ಆಕಾರ ಸ್ಫುಟಗೊಂಡು, ಸಮಾಧಾನದ ಹೂಂಕಾರ ಹೊರಬಂತು.

ಸುತ್ತಲಿನ ವರ್ತುಳಾಕಾರದ ಕ್ಯಾನ್ವಾಸ್ ಗಾಳಿಗೆ ಉಬ್ಬಿತ್ತು. ಪ್ರದರ್ಶನ ಮುಗಿಸುವ ಆತುರದಲ್ಲಿ ರಿಂಗ್ ಚಾವಟಿ ಝಳಪಿಸಿ ಏನೋ ಹೇಳಿದ ವಾದ್ಯ ಸಂಗೀತದ ನೀಳರಾಗ ಪ್ರಾರಂಭವಾಯಿತು.

ಕಾರ್ತೀಕ ತುಟಿಕಚ್ಚಿದ. ಹಾರಂಗಿಗೆ ಬರುವಾಗ ತಾನು ಬುಲ್‌ಬುಲ್ ತರಂಗ್ ತರುವುದನ್ನು ಮರೆತೆ ! ಬರೆಯುವುದು ನಿಂತಾಗ ಬೆಂದ ಹೃದಯಕ್ಕೆ ತಂಪು ಹಾಕುವ ಸಾಧನವಾದ ಆ ವಾದ್ಯವನ್ನು ಜೊತೆಗೆ ತರದಿದ್ದುದು ತಪ್ಪು.

ಕೆಳಸಾಲಿನ ಕಡೆ ಕಣ್ಣೆಳಿಸಿದಾಗ ಹಾಡಿನ ಹುಡುಗಿಪೂರ್ಣವಾಗಿ ಕಂಡಳು.

ನಿರಾಶೆ ಒಡ್ಡುವ ನೋಟ ! ಆ ದೂರಕ್ಕೂ ಸ್ಫುಟವಾಗಿ ಕಡೆದಂತೆ ಕಾಣುವ ನಸುಗಪ್ಪು ಶಿಶುಮುಖ. ತಲೆಯಲ್ಲಿ ಇಬ್ಬರಿಗಾಗುವಷ್ಟು ಸೊಂಪಾದ ಕೂದಲು. ಎರಡನೆಯ ಸಾರಿಗೆ ದೃಷ್ಟಿ ಹಾಯಿಸುವಂತಹ ಯಾವ ಸೆಳೆತವೂ ಶೋಢಶಿಯಲ್ಲಿ ಕಾಣದು. ಆ ವಯಸ್ಸಿಗೆ ಮೀರಿದ ಕಂಠಸಿರಿ! ತನ್ನ ಲೇಖನದ ಯಾವ ವ್ಯಕ್ತಿತ್ವಕ್ಕೂ ಕೂಡಿಸಲಾಗದವಳು. ಧರಿಸಿದ ಕೆಂಪು ಹೂವುಗಳ ಬಿಳುಪು ಫ್ರಾಕ್ ಅಗ್ಗದ ಬೆಲೆಯದು. ಸಾಧಾರಣ ರೂಪಿನ ನಸುಗಪ್ಪು ದೇಹಕ್ಕೆ ಅದು ಸಮಂಜಸ ಉಡುಗೆ. ಅಂತಹ ಸರಳ ಉಡುಪು ಶರ್ಮಿಳಾ ಧರಿಸುವುದಿರಲಿ, ಅದರತ್ತ ಕಣ್ಣೆತ್ತಿ ನೋಡುವವಳೂ ಅಲ್ಲ !

ಹುಡುಗಿಯ ದಿಕ್ಕಿಗೆ ದೃಷ್ಟಿ ಹೂಡಿದ್ದರೂ ಹೃದಯದಲ್ಲಿ ಕಪ್ಪು ದ್ರವ ತುಂಬಿ ಭಾರವಾಯಿತು.

ವಂಚಕಿ ಶರ್ಮಿಳಾ ! ತಾನು ಪ್ರೇಮವಂಚಿತ !

'ಪ್ರಣಯ ದೋಣಿ'ಯ ಕಥಾನಾಯಕಿ ನಿಜಕ್ಕೂ ರೂಪಸರ್ಪಿಣಿ ! ಸರ್ಕಸ್ ದೃಶ್ಯಾವಳಿಯಿಂದ ದೂರವಾಗಿದ್ದ ಮನಕ್ಕೆ ಹುಲಿಗಳ ಗರ್ಜನೆ ಭಂಗ ತಂದಿತು. ಶರ್ಮಿಳಾ ಎಂದಿಗೂ. ಇಂತಹ ನಾಲ್ಕನೆ ದರ್ಜೆಯ ಸರ್ಕಸ್ ಪ್ರದರ್ಶನಕ್ಕೆ ಬರುವವಳಲ್ಲ. ಅವಳಿಗೆ ಬಣ್ಣದ ಕನಸು. ಚಂಚಲ ಪ್ರವೃತ್ತಿಯವಳಿಗೆ ತನ್ನದೇ ಒಂದು ಕಲ್ಪನಾ ಪ್ರಪಂಚ, ಕನಸು ತೇಲಾಡಿದ ಅವಳ ಕಣ್ಣು ಗಳನ್ನು ಹಾಸ್ಯಮಾಡಿ ಛೇಡಿಸಿದ್ದುಂಟು. ಅವಳ ತಂದೆಯ ಜಮೀನಿನಲ್ಲಿ ಹರಿದಾಡುವ ನೂರಾರು ಕುರಿಗಳು. ಆ ಕುರಿಗಳಿಂದ ಬರುವ ಉತ್ಪನ್ನ ಅಗಾಧವೆಂದು ಅವಳ ಹೇಳಿಕೆ. ಕುರಿಗಳು ಆವರಣದ ಜೀವನವೂ ಅವಳಿಗೆ ಹಿಡಿಸದು !

ಮೂವತ್ತೊಂಬತ್ತು ವರ್ಷಗಳು ಕಳೆದರೂ ಕಾರ್ತೀಕ ವಿವಾಹವನ್ನು ಕಲ್ಪನೆಗೂ ತಂದುಕೊಳ್ಳದ ವಿರಕ್ತ. ಸಂಯಮಿ. ಲೇಖಕನ ದೃಢ ಹೃದಯ ಕದಲಿಸಿ ಅದರಲ್ಲಿ ಕಾವು ತುಂಬಿದಳು ಶರ್ಮಿಳಾ. ಅವನಲ್ಲಿ ಮೋಹಕ ಭಾವನೆ ಮೂಡಿಸಿದಳು. ಮೋಹದ ಗಾಳಕ್ಕೆ ಸಿಲುಕಿದ ಮೀನು, ಚಂಚಲೆಯ ಹೃದಯದಲ್ಲಿ ಪ್ರೇಮದ ಬೇರು ಇಳಿಸಲು ಶಕ್ತವಾಗಲಿಲ್ಲ.

ತಲೆಯಿಂದ ದೂರ ಸರಿಯಲಿಲ್ಲ ಶರ್ಮಿಳಾ. ಮರೆಯಲು ಯತ್ನಿಸಿದಷ್ಟೊ ರಬ್ಬರಿನಂತೆ ಪುಟಿದು ಬಂದಳು. ಅವಳ ಮೋಹಕ ನಡಿಗೆ, ಕುಡಿನೋಟದ ಮಿಂಚು, ಅವನ ಕೈ ಹಿಡಿಯಲು ಮುಂದಾಗುವ ಉದ್ದನೆಯ ಅಂದದ ಬೆರಳುಗಳು, ಅಮಲು ಹತ್ತಿಸುವ ಸುಗಂಧ.... ಅವನ ಚುಂಬನಕ್ಕೆ ಸೋಲುತ್ತಿದ್ದ ಅವಳ ಬಳುಕು ದೇಹ!

ಕಾರ್ತೀಕ ಕಣ್ಣು ಮುಚ್ಚಿ ದೀರ್ಘ ಉಸಿರು ಹೊಮ್ಮಿಸಿದ. ಡೇರೆಯ ಮೇಲೆ

ಭಾರವಾದ ಹನಿಗಳು ಡೋಲು ಬಾರಿಸಿದವು. ಸರ್ಕಸ್ ಬ್ಯಾಂಡ್ ಸಂಗೀತವನ್ನು ಪೂರ್ಣವಾಗಿ ಅಡಗಿಸಿದ ಮಳೆ ಬಡಿತ. ಸುತ್ತಲಿನ ಡೇರೆ ಹಾರಿಹೋಗುವಂತೆ ಉಬ್ಬಿತು. ತೇವದ ಗಾಳಿಯಲ್ಲಿ ಸಸ್ಯಗಳ ವಾಸನೆ ನುಸುಳಿ ಬಂತು. ಅದನ್ನು ಸೀಳಿ ಹರಿಯಿತು ಸರ್ಕಸ್ ಪ್ರಾಣಿಗಳ ದುರ್ಗಂಧ.

ಪ್ರೇಕ್ಷಕವರ್ಗ ದಾಳಿ ಇಡುವಂತೆ 'ಹೋ!' ಎಂದು ಒಂದೇ ಸಾರಿಗೆ ಎದ್ದು ನಿಂತಿತು. ಚಾವಣಿಯ ಶತರಂಧ್ರಗಳಿಂದ ಮಳೆಯ ದಪ್ಪ ಹನಿಗಳು ಟಪಟಪ ಸೋರತೊಡಗಿತು. ಜನ ತರಾತುರಿಯಿಂದ ಬಾಗಿಲ ದಿಕ್ಕು ಹಿಡಿದರು.

"ಮಹಾ ಜನಗಳೇ..."

ಮ್ಯಾನೇಜರ್‌ನ ಅಸ್ಪಷ್ಟ ಬೇಡಿಕೆ ಗಾಳಿಗೆ ತೂರಿಹೋಯಿತು. ಕಾತರಿಸಿ ಬಂದ ಜನರ ಮನರಂಜನೆಯ ಸಂಜೆ ಪೂರ್ಣವಾಗಿ ಹಾಳಾಗಿತ್ತು.

"ಹೊರಡುವಾಗ್ಲೇ ನಿನಗೆ ಇಷ್ಟ ಇರ್ಲಿಲ್ಲ. ನಡಿ, ಹೊರಡೋಣ... ನಾನು ಟ್ಯಾಕ್ಸಿ ತರ್ತೀನಿ."

ಮಲ್ಲಿಕಾರ್ಜುನ ಗೇಟ್‌ನಲ್ಲಿ ಹರಡಿ ನಿಂತ ನೀರಿನಲ್ಲಿ ಎಚ್ಚರಿಕೆಯಿಂದ ತುದಿಗಾಲ ಹೆಜ್ಜೆ ಇಟ್ಟು ಹೊರಕ್ಕೆ ಧಾವಿಸಿದ. ಮೆಲ್ಲನೆ ಸರಿದ ಕಾರ್ತೀಕನನ್ನು ಎಡಬಲ ತಳ್ಳಿಕೊಂಡು ಜನಗುಂಪು ಹೊರಬೀಳತೊಡಗಿತು. ಮಳೆ ಮತ್ತಷ್ಟು ತೀವ್ರಗೊಳ್ಳುತ್ತದೆಯೆಂಬ ಭೀತಿಯಲ್ಲಿ ಗಂಡು ಹೆಣ್ಣುಗಳು ಆತುರದಿಂದ ಸರಿದುಹೋದರು.

ತುಂಬಿದ ವಾಹನಗಳು ನೀರು ಚಿಮ್ಮಿಸಿ ಪಕ್ಕದಲ್ಲಿ ಚಲಿಸಿದಾಗ ಕಾರ್ತೀಕ ಹಿಂದಕ್ಕೆ ಸರಿದು ನಿಂತ.

ಲಾರಿ ಹಾರನ್ ಮಾಡಿತು. ಎರಡು ಹೆಜ್ಜೆ ಮುಂದೆ ಬಂದ ಹಾಡಿನ ಹುಡುಗಿ ವಾಹನದ ಕಡೆ ಕೈ ತೋರಿ ಮತ್ತೆ ಡೇರೆಯೊಳಕ್ಕೆ ಬಂದಳು. ಗುಂಪಿನ ಮಧ್ಯೆ ನೆಲಕ್ಕೆ ಕೈ ಹೂಡಿ ಚಪ್ಪಲಿ ಎಳೆದು ಪಾದಕ್ಕೆ ಸೇರಿಸಿದಳು.

ವೇಗವಾಗಿ ಚಲಿಸಿದ ಲಾರಿಯ ದಿಕ್ಕಿನಲ್ಲಿ ಓಡಿ ನಿರಾಶಳಾಗಿ ನಿಂತ ಹುಡುಗಿ ಕಾರ್ತೀಕನಿಗೆ ಚೆನ್ನಾಗಿ ಕಾಣಿಸಿದಳು.

"ಡೇರಾ ಪೂರ್ತಿ ಖಾಲಿ ಅದ್ರೂ ನಿನಗೆ ಬರಲಿಕ್ಕೆ ದಾರಿ ಸಿಗಲಿಲ್ಲೇನು? ಕಾದಂಬರಿಗೆ ವಸ್ತು ಸಿಕ್ತೇನು?"

ಟ್ಯಾಕ್ಸಿಯಲ್ಲಿ ಕುಳಿತ ಮಲ್ಲಿಕಾರ್ಜುನ ಸ್ನೇಹಿತನಿಗೆ ಕೂಗಿ ಹೇಳಿದ. ಪಾದರಕ್ಷೆ ಕೈಲಿ ಹಿಡಿದು ನೀರಿನಲ್ಲಿ ನಾಜೂಕಿನಿಂದ ಹೆಜ್ಜೆ ಸರಿಸಿದ ಹೆಂಗಸರು, ಪ್ಯಾಂಟಿನ ತಳ ಮಡಿಸಿ ನೀರಿನ ಹಳ್ಳಗಳನ್ನು ಹಾರುತ್ತಿದ್ದ ಗಂಡಸರ ಕಡೆ ನೋಡುತ್ತ ನಿಂತಿದ್ದ ಲೇಖಕ. ಮಳೆಯ ಹನಿ ಭರ್ರನೆ ಗಾಳಿಯಲ್ಲಿ ಅವನ ಮೇಲೆ ಸಿಂಪರಿಸಿದಾಗ ಬೆಚ್ಚಿ

ಟ್ಯಾಕ್ಸಿಯತ್ತ ಓಡಿದ. ಬಾಗಿಲಿನ ಪಿಡಿ ಹಿಡಿದು ಹಾಗೆಯೇ ತಿರುಗಿ ನಿಂತ.

ಹಾಡಿನ ಹುಡುಗಿ ಏಕಾಂಗಿಯಾಗಿ ರಸ್ತೆಯ ಪಕ್ಕ ನಿಂತಿದ್ದಳು.

"ಎಲ್ಲಿಗೆ ಹೋಗ್ಬೇಕು ನೀನು?"

ಕೂಗಿ ಕೇಳಿದ ಮಲ್ಲಿಕಾರ್ಜುನ. ಹುಡುಗಿ ಬೆದರಿದಳು. ಅವನತ್ತ ನೋಡಿ ಎಡಬಲ ಕತ್ತು ಹೊರಳಿಸಿದಳು. ವಾಚಾಳಿ ಮತ್ತೆ ಗಟ್ಟಿಯಾಗಿ ಹೇಳಿದ.

ಹಾರಂಗಿ ಆಗಿದ್ರೆ ಬಂದು ಕೂಡು."

ಹುಡುಗಿ ನಿಧಾನವಾಗಿ ಕತ್ತು ಹೊರಳಿಸಿದಳು. ಬೆಳಕಿಗೆ ಸಮೀಪವಾಗಿ ನಿಂತವಳ ಸೊಂಪಾದ ಕೂದಲು ಕಂಡು ಬೆರಗಾದ ಕಾರ್ತೀಕ ಅವಳನ್ನು ಸಮೀಪಿಸಿ ನಯವಾಗಿ ನುಡಿದ.

"ಯಾರಿಗಾದ್ರು ಕಾಯ್ತಾ ಇದ್ದೀಯಾ?... ಹಾಂ, ನಿನ್ನ ಪಕ್ಕದಲ್ಲಿ ಒಬ್ಬ ಹೆಂಗಸರು ಇದ್ಲು....ನಿನ್ನ ತಾಯಿ ಇರ್ಬೇಕು."

ತುಟಿ ಬಿಗಿಸಿದ ಬಾಲೆ ನಕಾರದಲ್ಲಿ ತಲೆ ಆಡಿಸಿದಳು.

"ಅವಳು ನನ್ನ ಆಂಟಿ... ನನ್ನ ಹುಡುಕಿ ಸಾಕಾಗಿ ಲಾರಿ ಹಿಡಿದು ಹೋಗಿಬಿಟ್ಲು... ಗುಂಪಿನಲ್ಲಿ ನನ್ನ ಚಪ್ಪಲಿ ಜಾರಿಹೋಯ್ತು. ಅದನ್ನ ಎತ್ಕೊಂಡು ಬರೋದ್ರಲ್ಲಿ ಲಾರಿ ಹೊರಟುಹೋಯ್ತು."

ಮಧುರವಾಗಿತ್ತು ಅವಳ ಸ್ವರ.

"ಹಾರಂಗಿಗೆ ಹೋಗ್ಬೇಕೇನು?" ಗಂಭೀರವಾಗಿ ಕೇಳಿದ.

"ಹುಂ."

ತೂರಿ ಬಂದ ತೆಳು ಮಳೆಯ ಹನಿಗಳಿಂದ ಮೈ ಅವಚಿ ನಿಂತಳು. ವಾಚಾಳಿ ಇಂಜಿನಿಯರ್ ಟ್ಯಾಕ್ಸಿಯಿಂದ ಗದರು ಸ್ವರ ಹಾಕಿದ.

"ಮಳೇಲಿ ಚಕ್ಕಂದ ಆಡ್ತಿಯೇನು? ಬಂದ ಕೂಡು. ನಿಮೋನಿಯ ಅಂಟಿಬಿಡುತ್ತೆ ನಿನಗೆ."

ಗಾಬರಿಯಲ್ಲಿದ್ದವಳಿಗೆ ಮಳೆಯಲ್ಲಿ ತೋಯುತ್ತಿರುವುದರ ಅರಿವು ಬಂತು. ತುಟಿಯಲ್ಲಿ ನಗೆ ಕಂಡಿತು. ತೆರೆದ ಬಾಗಿಲಿನಿಂದ ನಿಧಾನವಾಗಿ ಹಿಂದಿನ ಸೀಟು ಏರಿದಳು. ಕಾರ್ತೀಕ ಅವಳ ಪಕ್ಕಕ್ಕೆ ಕುಳಿತ. ಅಪರಿಚಿತರಿಬ್ಬರನ್ನೂ ಬೆದರಿದ ಮೊಲದಂತೆ ನೋಡಿದಳು.

"ಹೆದರ್ಬೇಡ, ಹುಡುಗಿ, ನಾವು ಹೊತ್ಕೊಂಡ್ಹೋಗೋದಿಲ್ಲ ನಿನ್ನ."

ಮಲ್ಲಿಕಾರ್ಜುನ ಹಾಸ್ಯದ ದಾಟಿಯಲ್ಲಿ ಹೇಳಿ ಡ್ರೈವರ್ ಕಡೆ ಗಹಗಹಿಸಿ ಹುಬ್ಬು ಕುಣಿಸಿದ.

ಕುಶಾಲನಗರ ಬಿಟ್ಟ ಟ್ಯಾಕ್ಸಿ ಹಾರಂಗಿ ಜಲಾಶಯದ ರಸ್ತೆ ಹಿಡಿಯಿತು.

"ಚೆನ್ನಾಗಿ ಹಾಡ್ತೀಯ ನೀನು."

ಕಾರ್ತೀಕ ಅಷ್ಟು ಹೇಳುವುದಕ್ಕೂ ನಾಚಿದ. ಅವಳು ಮರುನುಡಿಯಲಿಲ್ಲ.

"ನಿನ್ನ ಮನೆ ಎಲ್ಲಿ?" ಮತ್ತೆ ಕೇಳಿದ.

"ಹಾರಂಗಿ ಕಾಲೋನಿ."

ಬೆರಳೆತ್ತಿ ಕತ್ತಲು ಕವಿದ ದೂರದ ದಿಕ್ಕು ತೋರಿದಳು.

"ಅಣೆಕಟ್ಟು ಕೆಲಸ ಮಾಡೋರಾ?"

ತಲೆ ಆಡಿಸಿದಳು. ಇವಳು ಮಾತಿನವಳಲ್ಲ ಎಂದುಕೊಂಡ.

ಅರಣ್ಯ ಇಲಾಖೆಯ ಟಿಂಬರ್‌ಯಾರ್ಡ್ ದಾಟಿದ ಟ್ಯಾಕ್ಸಿ ನೀರು ತುಂಬಿದ ಕುಳಿಗಳಲ್ಲಿ ಇಳಿದು ಏರಿ ಸಣ್ಣ ಗುಡಿಸಲಿನ ಹೊಟೇಲ್ ಮುಂದೆ ನಿಂತಿತು. ಮಲ್ಲಿಕಾರ್ಜುನ ತನ್ನ ಪಕ್ಕದ ಗಾಜು ಇಳಿಸಿದ. ಮಳೆಯ ಆರ್ಭಟ ಕಡಿಮೆಯಾಗಿತ್ತು.

"ಇಲ್ಲಿ ಕಾಫಿ ಕುಡಿದರೇ ಸಮಾಧಾನ ನನ್ನ ಸ್ನೇಹಿತನಿಗೆ."

ಕಾರ್ತೀಕ ನಗೆಬೆರೆತ ಬೇಸರದಲ್ಲಿ ಹೇಳಿದ. ಜಿನುಗು ಮಳೆಯಲ್ಲಿ ಗುಡುಗು ಕೇಳಿಸಿತು.

"ಈ ಗುಡುಗು, ಮಳೆ ನಿಂತಮೇಲೆ ಟ್ಯಾಕ್ಸಿಯಲ್ಲಿ ನಿನ್ನ ಮನೆಗೆ ಕಳಿಸಿಕೊಡ್ತೀವಿ."

ಮಲ್ಲಿಕಾರ್ಜುನನ ಆಶ್ವಾಸನೆಗೆ ನಗೆ ಮಿಂಚಿಸಿದಳು. ಇಬ್ಬರನ್ನೂ ಪರ್ಯಾಯವಾಗಿ ನೋಡಿದಳು. ಡ್ರೈವರ್ ಪಕ್ಕದಲ್ಲಿ ಕುಳಿತವನು ದಪ್ಪ ದೇಹದ ಕುಳ್ಳು ಮನುಷ್ಯ. ಹಾಸ್ಯಪ್ರಿಯ ಹಾಗೂ ವಾಚಾಳಿ. ಎಡಪಕ್ಕಕ್ಕೆ ಕುಳಿತವನು ಮಿತಭಾಷಿ. ಗಂಭೀರ ಸ್ವಭಾವದವ. ತೆಳು ದೇಹದವನು. ತನ್ನ ಪಪ್ಪನಿಗಿಂತಲೂ ಎತ್ತರದವನು. ತಲೆಯಲ್ಲಿ ಅತಿ ಉದ್ದವಲ್ಲದ, ಬಾಚಿ ಕೂಡಿಸಿದ ಕೂದಲು. ಅಂಚುಗಳಲ್ಲಿ ಗುಂಗುರ. ಕಪೋಲಗಳಿಗೆ ಇಳಿದ ಭಾಗದಲ್ಲಿ ನೆರೆತಿವೆ. ನೀಲಿಕಣ್ಣುಗಳಲ್ಲಿ ನೋವಿನ ಛಾಯೆ. ಉದ್ದನೆಯ ಮೂಗು, ಎಲ್ಲರಂತಲ್ಲ ವ್ಯಕ್ತಿ!

ಅವಳು ಎಂದೂ ಟ್ಯಾಕ್ಸಿಯಲ್ಲಿ ಕುಳಿತವಳಲ್ಲ. ಹಾರಂಗಿ ಕಾಲೋನಿಯಿಂದ ಕುಶಾಲನಗರಕ್ಕೆ ಪ್ರಾಜೆಕ್ಟ್ ಕಂಟ್ರಾಕ್ಟರ ಲಾರಿಗಳಲ್ಲಿ ಆಗಾಗ್ಗೆ ಬಂದು ಹೋದವಳು. ಈಗ ಇಬ್ಬರು ಅಪರಿಚಿತ ಗಂಡಸರೊಂದಿಗೆ ಮೆತ್ತನೆಯ ಟ್ಯಾಕ್ಸಿಯಲ್ಲಿ ಕುಳಿತ ಅಪೂರ್ವ ಅನುಭವ! ಗಂಡಸರಿಂದ ದೂರವಿರಲು ಪದೇಪದೇ ನೀಡುತ್ತಿದ್ದ ತಾಯಿಯ ಎಚ್ಚರಿಕೆ ನೆನಪಿಗೆ ಬಂತು. ಗಂಡಸರೊಂದಿಗೆ ಮಾತನಾಡಿದುದು ತಿಳಿದರೆ ಜಲಾಶಯದ ಕಾಲೋನಿಯಲ್ಲಿ ಕಲ್ಪನೆ, ಕಥೆಗಳ ದಾಳಿ ತಪ್ಪದು.

ಕಾಫಿ ಬಂತು. ಕಾರ್ತೀಕ ಸೂಚನೆಗೆ ಪ್ರತಿ ಹೇಳದೆ ಲೋಟ ತುಟಿಗೆ ಹಚ್ಚಿದಳು.

"ಅಂದರೆ ನೀನು ಹಾರಂಗಿ ಡ್ಯಾಮ್ ಕಾಲೋನಿಯಲ್ಲಿದೀಯ?"

ಅರಿತ ವಿಷಯವನ್ನು ಪುನರುಚ್ಚರಿಸಿದ ವಾಚಾಳಿ. ಅವಳು ಮುಖ ಎತ್ತಿ ಕಣ್ಣುಗಳಲ್ಲಿ 'ಹೌದು' ಸೂಚಿಸಿದಳು.

"ನಿನ್ನ ತಂದೆ ಕೂಲಿ ಕೆಲಸ ಮಾಡ್ತಾನೆ?"

"ಇಲ್ಲ, ಟ್ರಕ್ ನಡೆಸ್ತಾನೆ."

"ಎಷ್ಟು ದಿನದಿಂದ ಇದ್ದೀರಿ ಅಲ್ಲಿ?"

ಅವಳು ಬೆರಳುಗಳಲ್ಲಿ ಲೆಕ್ಕ ಹಾಕಿದಳು. ಉತ್ತರ ಸುಲಭವಾಗಿ ಹೇಳಲಾಗದು.

"ಗೊತ್ತಿಲ್ಲ. ಅಲ್ಲಿಗೆ ಬರ್ತಲೇ ನನ್ನ ತಮ್ಮ ಹೋಗ್ಬಿಟ್ಟ. ಅವತ್ತಿನಿಂದ ಮಮ್ಮಿಗೆ ಕಾಯಿಲೆ ಬಂತು."

ತಮ್ಮನ ಸಾವು! ಮಮ್ಮಿಗೆ ಕಾಯಿಲೆ...ಆಂಟಿಗೆ ಇವಳ ಯೋಗಕ್ಷೇಮ.

ಕಾರ್ತೀಕ ಸಹಾನುಭೂತಿ ತೋರುವಂತೆ ಅವಳನ್ನು ನಿರುಕಿಸಿದ.

"ನೀನು ಸ್ಕೂಲಿಗೆ ಹೋಗ್ತೀಯೇನು?"

ಮುಖದಲ್ಲಿ ನಾಚಿಕೆ ಹರಡಿತು.

"ಇಲ್ಲ, ಬಿಟ್ಟಿಟ್ಟೆ. ಹೈಸ್ಕೂಲು ಒಂದು ವರ್ಷ ಓದಿದ ಮೇಲೆ ಪಪ್ಪ ಸಾಕು ಅಂದ."

ಅವಳ ಮೆದುಸ್ವರ ರಾಗವಾಗಿತ್ತು. ಅದರಲ್ಲಿ ವಿದ್ಯೆ ತನಗೆ ಇಲ್ಲವಾಯಿತೆಂಬ ನೋವು.

ಷೋಡಶಿ ಅಂದವಾಗಿ ಕಂಡಳು. ಮತ್ತೆ ಕಣ್ಣು ಸೆಳೆಯುವ ಸೊಂಪಾದ ಕೇಶರಾಶಿ. ಅತಿ ಸಾಮಾನ್ಯ ಮನೆತನವನ್ನು ಬಿಂಬಿಸುವ ಸರಳ ಉಡುಪು. ಅಂದಗೆಟ್ಟು ಮಾಸಲು ಬಣ್ಣಕ್ಕೆ ತಿರುಗಿದ ಹಸ್ತಗಳು. ಬಹುಶಃ ಮನೆಗೆಲಸದ ಪರಿಣಾಮ ಅದು. ಈ ಕೈಗಳಿಗೂ ಶರ್ಮಿಳಾ ಕೈಗಳಿಗೂ ಎರಡು ಧ್ರುವಗಳ ಅಂತರ! ಅವಳದು ಉದ್ದನೆಯ, ತೆಳುವಾದ ಚಂದದ ಬೆರಳುಗಳು. ಉಗುರುಗಳ ಮೇಲೆ ರಕ್ತ ಕೆಂಪಿನ ರಂಗುಲೇಪನ. 'ಪ್ರಣಯ ದೋಣಿ'ಯ ಅಪ್ಸರೆ!

ಉಸಿರೆಳೆದುಕೊಂಡ ಕಾರ್ತೀಕ.

"ನಿನ್ನ ಕಂಠ ಚೆನ್ನಾಗಿದೆ. ಹಾಡು ಹೇಳೋದು ಎಲ್ಲಿ ಕಲಿತೆ?"

ಸಂಗೀತದ ಗಂಧವೇ ಇಲ್ಲದವನಿಂದ ಬಂದ ಮೆಚ್ಚಿಗೆ ಮಾತದು. ತಾನು ಮಾತುಗಾರನಾದುದು ಲೇಖಕನಿಗೇ ಅಚ್ಚರಿ. ಸ್ನೇಹಿತ ಅವನತ್ತ ಮಾರ್ಮಿಕ ನೋಟ ಒಗೆದ. ಅವಳು ಚಕಿತಗೊಂಡಿದ್ದಳು. ಲೇಖಕನ ಪ್ರಶಂಸೆ ಅವಳಲ್ಲಿ ಸಂತಸ, ಲಜ್ಜೆ ಉಕ್ಕಿಸಿತು.

"ಮಮ್ಮಿ ಹೇಳಿಕೊಟ್ಲು" ನಯವಾಗಿ ಉತ್ತರಿಸಿದಳು.

ಮಲ್ಲಿಕಾರ್ಜುನನ ತುಂಟ ನೋಟ ಸ್ನೇಹಿತನಿಂದ ಸರಿಯಲಿಲ್ಲ. ನಲವತ್ತು ವರ್ಷ ವಯಸ್ಸಿನ ಲೇಖಕ ಮಿತ್ರ ಮಿತಭಾಷಿ. ಭಾವಜೀವಿ ನಾಟಕದ ಅಭಿನೇತ್ರಿಯಾಗಿ ಹೆಸರು ಗಳಿಸಿದ ಕಲಾವಿದೆಯ ಮಗ. ಲೇಖಕನೆಂದು ಪ್ರಸಿದ್ಧನಾಗಿ ಬದುಕಿನಲ್ಲಿ ನಿರಾಶೆ ಕಂಡವನು. ನಿರಾಶೆ, ನೋವನ್ನು 'ಮಣ್ಣಿನ ದೋಣಿ' ಕಾದಂಬರಿಯಲ್ಲಿ ನಿರೂಪಿಸಲು ಸ್ಫೂರ್ತಿಗಾಗಿ ಹಾರಂಗಿಗೆ ಬಂದವನು. ಅದಕ್ಕೆ ತನ್ನದೇ ಆಹ್ವಾನ. ತಾಯಿಯಂತೆ ಮಗನಿಗೂ ಏಕಾಂಗಿಯಾಗಿ ಇರುವ ಇಚ್ಛೆ. ಅಂತಹ ವರ್ಗದವರಿಗೆ ಬದುಕಿನಲ್ಲಿ ಗುರಿ ಇಲ್ಲ. ಬವಣೆ, ನಿರಾಶೆ ಕಟ್ಟಿಟ್ಟ ಗುರಿ.

ಮಲ್ಲಿಕಾರ್ಜುನನ ಚಿಂತನೆ ಕಡಿದುಹೋಯಿತು. ಹುಡುಗಿ ಪ್ರಶ್ನೆ ಕೇಳುತ್ತಿದ್ದಳು.

"ನೀವೇನು ಮಾಡ್ತಿದೀರಿ, ಸಾರ್?"

ಧೈರ್ಯ ತಳೆದವಳ ಪ್ರಶ್ನೆಯಿಂದ ಭುಜ ಏರಿಸಿದ.

"ನಾನು ಇಂಜಿನಿಯರ್. ಪ್ರಾಜೆಕ್ಟಿನ ಕಾಲುವೆ ಕೆಲಸ ನೋಡ್ಕೊಳ್ತಾ ಇದೀನಿ."

ಪ್ರಾಜೆಕ್ಟ್...ಇಂಜಿನಿಯರ್.

ಜಲಾಶಯದ ಪ್ರಪಂಚದಲ್ಲಿ ಅವಳು ದಿನಂಪ್ರತಿ ಕೇಳುವ ಎರಡು ಪದಗಳು ಅವು. ಅವಳ ತಿಳಿವಳಿಕೆಯಲ್ಲಿ ಅವು ಮಹತ್ತರ ಪದಗಳು.

"ನೀವೂ ಇಂಜಿನಿಯರಾ?"

ಎಡಪಕ್ಕಕ್ಕೆ ತಿರುಗಿದಳು.

"ಅಲ್ಲ...."

ಕಾರ್ತೀಕ ಮುಂದೆ ಹೇಳಲಾಗದುದನ್ನು ಸ್ನೇಹಿತ ಪೂರೈಸಿಕೊಟ್ಟ.

"ಅವನು ಕಥೆ ಪುಸ್ತಕ ಬರೀತಾನೆ. ನೀನು ಪುಸ್ತಕ ಓದೋದುಂಟಾ?"

"ಇಲ್ಲ' ಅರ್ಥದಲ್ಲಿ ಗೋಣು ಆಡಿತು. ಧೈರ್ಯ ಏರಿದಂತೆ ಆಸಕ್ತಿ ವಹಿಸಿದಳು.

"ನೀವು......ಹೆಸರು.....?"

"ನನ್ನ ಹೆಸರು ಕಾರ್ತೀಕ ....ಇವನು ನನ್ನ ಸ್ನೇಹಿತ ಮಲ್ಲಿಕಾರ್ಜುನ ನೀನು ಕುಶಾಲನಗರಕ್ಕೆ ಆಗಾಗ್ಗೆ ಬರ್ತೀಯ?"

"ವಾರಕ್ಕೊಂದು ಸಾರಿ ಬರ್ತೀನಿ. ಸಿನಿಮಾ ಮತ್ತೆಲ್ಲಿ ಸಿಗಬೇಕು ನಮಗೆ. ಸರ್ಕಸ್ ನೋಡಿ ತುಂಬಾ ವರ್ಷ ಆಗಿತ್ತು."

"ನಿನ್ನ ಹೆಸರು?"

"ಸೌಭಾಗ್ಯ."

ಮಲ್ಲಿಕಾರ್ಜುನ ನಾಲಗೆ ಚಪ್ಪರಿಸಿದ. ಸ್ನೇಹಿತ ಇಂದು ಮಾತಿಗೆ ಇಳಿದಿದ್ದಾನೆ!

ಮಳೆ ನಿಂತಿತ್ತು. ಆಕಾಶದಲ್ಲಿ ಲಘು ಮಿಂಚಿನ ಆಟ ಸಾಗಿತ್ತು. ಟ್ಯಾಕ್ಸಿ ಒಂದೇ ಗತಿಯಲ್ಲಿ ಚಲಿಸಿತು.

"ಸೌಭಾಗ್ಯ!" ತನ್ನಲ್ಲಿಯೇ ಪ್ರತಿಧ್ವನಿಸಿದ ಕಾರ್ತೀಕ. ಸೊಗಸಾದ ಹೆಸರು. 'ಶರ್ಮಿಳಾ' ಹೆಸರಿಗಿಂತಲೂ ಇಂಪಾಗಿದೆ.

ಬೆಳೆದ ಹೆಣ್ಣಲ್ಲ. ಬಾಲೆಯೂ ಅಲ್ಲ. ಅನುಭವ ಕಾಣದ, ಜಲಾಶಯದ ಬಡ ಕುಟುಂಬದ ಹುಡುಗಿ. ಸೊಗಸಿನ ಹೆಸರಿನವಳು. ಮುಗ್ಧ ಷೋಡಶಿ!

"ಹೆಸರು ಚೆನ್ನಾಗಿದೆ."

ಕಪ್ಪು ಬಟ್ಟೆಯಂತೆ ಹರಡಿದ ಆಕಾಶದ ಕಡೆ ನೋಡುತ್ತ ಹೇಳಿದ, ಅವಳಿಗೆ ಉತ್ಸಾಹ ಬಂದಿತ್ತು.

"ಪಪ್ಪನಿಗೆ ನನ್ನ ಹೆಸರು ತುಂಬಾ ಇಷ್ಟ. ನನ್ನ ಹೆಸರಿನಲ್ಲಿ ಅವನಿಗೆ ಅದೃಷ್ಟ ಕಾದಿದೆಯಂತೆ. ಅವನಿಗೆ ಹಣ ಸಿಗುತ್ತಂತೆ."

ಮುಂದಿನ ಸೀಟಿನಿಂದ ವ್ಯಂಗ್ಯದ ಕೆಮ್ಮು ಬಂತು.

"ಅಂದ್ರೆ ನಿನ್ನ ಪಪ್ಪ ಕುದುರೆ ರೇಸ್‌ಗೆ ಹೋಗ್ತಾನೇನು?"

ಸ್ನೇಹಿತನ ಕುಹಕದ ಮಾತಿಗೆ ಕಾರ್ತೀಕ 'ಶ್!' ಎಂದು ಎಚ್ಚರಿಸಿದ. ವಾಚಾಳಿ ಮಾತು ಬಿಡಲಿಲ್ಲ.

"ಎಲ್ಲಾ ಮಂದಿಗೂ ಒಂದೊಂದು ಹುಚ್ಚು ಇರುತ್ತೆ. ನಿನ್ನ ಪಪ್ಪನಿಗೆ ಹಣದ ಹುಚ್ಚು. ತುಂಬಿದ ಟ್ರಕ್ ದೂರಕ್ಕೆ ಒಯ್ದು ಇಲ್ಲ ಅನ್ನಿಸಿಬಿಟ್ರೆ ಅವನಿಗೆ ಅದೃಷ್ಟ ಬೇಗ ಬರಬೋದು."

ಸೌಭಾಗ್ಯಳ ದೃಷ್ಟಿ ಮೊನಚಾಯಿತು. ಪಪ್ಪನ ಬಗೆಗೆ ತಾತ್ಸಾರದ ಮಾತು ಕೇಳಲು ಇಚ್ಛಿಸಿದವಳು ದೃಢವಾಗಿ ನುಡಿದಳು.

"ನಾನು ಪಪ್ಪನಿಗೆ ಅದೃಷ್ಟ ತರೋಳು,"

"ಭೇಷ್, ನೀನೊಬ್ಬಳೇ ಮಗಳೇನು ಅವನಿಗೆ?"

"ಹೌದು.....ತಮ್ಮ ಹೋಗ್ಬಿಟ್ಟ."

ಮಲ್ಲಿಕಾರ್ಜುನ ಕೈಗಡಿಯಾರ ನೋಡಿದ. ಹನ್ನೊಂದು ದಾಟಿತ್ತು.

"ಬರಬಾರದ ಕಾಲದಲ್ಲಿ ಇವತ್ತು ಮಳೆ ಬಂದಿದೆ. ಈಗ ಪಕ್ಕಾ ರಾತ್ರಿ. ಇಂಥಾ ವೇಳೆ ವಿಚಿತ್ರ ಆಟಗಳನ್ನ ಆಡಿಸುತ್ತೆ."

ವಾಚಾಳಿ ಕೆಮ್ಮಿದ. ಅವಳಿಗೆ ಮಾತು ಅರ್ಥವಾಗದು.

'ಆಂಟಿ ನನಗಾಗಿ ಹುಡುಕಿರ್ಬೇಕು. ಮಳೆ ರಂಪ ಮಾಡ್ತಿತ್ತು ಆಗ. ಕಾಲೋನಿ ಜನ ಜಾಸ್ತಿ ಇದ್ರು. ಲಾರಿಯಲ್ಲಿ ಜಾಗ ಸಿಗೋದು ಕಷ್ಟ. ಹೊರಟು ಬಿಟ್ಲು. ನಾನು ಹೆಂಗಾದ್ರೂ ಬರ್ತೀನಿ ಅಂತ ಅವಳಿಗೆ ಖಾತ್ರಿ."

"ನೀನು ಬರ್ಲಿಲ್ಲಾಂತ ನಿನ್ನ ಮಮ್ಮಿಗೆ ಗಾಬರಿ ಆಗೋದಿಲ್ಲವೆ?"

ಲೇಖಕ ಅನುಕಂಪ ಕೂಡಿದ ಆತಂಕ ತೋರಿದ.

"ಅವಳಿಗೆ ಕಾಯಿಲೆ. ಪ್ರಪಂಚವೇ ಬೇಡ ಅನ್ನೋಷ್ಟು ಬೇಸರ."

ಐದು ಮೈಲಿಗಳಷ್ಟು ಚಲಿಸಿದ ಟ್ಯಾಕ್ಸಿ ಜಲಾಶಯದ ಸರಹದ್ದು ತಲುಪಿ ಎಡಕ್ಕೆ ತಿರುಗಿ ಅಧಿಕಾರಿಗಳ ಕಾಲೋನಿ ಮನೆಯ ಮುಂದೆ ನಿಂತಿತು. ಮಲ್ಲಿಕಾರ್ಜುನ ಇಳಿದು ಚಾಲಕನಿಗೆ ಹಣ ನೀಡಿ ಹೇಳಿದ.

"ಡ್ರೈವರ್, ಆ ಹುಡುಗೀನ ಅವಳ ಮನೆಗೆ ಬಿಟ್ಟು ಹೋಗು."

ಹುಡುಗಿ ಬೆದರುನೋಟ ಹಾಕಿದಳು. ಕಾರ್ತೀಕನಿಗೆ ಅವಳ ಪರಿಸ್ಥಿತಿ ಅರ್ಥವಾಯಿತು.

"ಇವಳು ಬರ್ಲಿಲ್ಲಾಂತ ಆಂಟಿಗೇ ಗಾಬರಿ ಇಲ್ಲವಂತೆ. ಮಮ್ಮಿಗೆ ಕಾಯಿಲೇಲಿ ಪ್ರಪಂಚವೇ ಬೇಡವಂತೆ. ನಿನಗೆ ಎಲ್ಲೀದು ಇವಳ ಉಸಾಬರಿ....? ಹುಂ, ನಡೀಲಿ ಸಮಾಜ ಸೇವೆ."

ಹೆಚ್ಚಿನ ಅಡ್ಡಿಯ ಮಾತು ಆಡದ ಮನೆಗೆ ನಡೆದ ಮಲ್ಲಿಕಾರ್ಜುನ.

ಅವಳು ಸೂಚಿಸಿದಂತೆ ಟ್ಯಾಕ್ಸಿ ಹಿಂದಕ್ಕೆ ಸರಿದು ಬಲಪಾರ್ಶ್ವದ ಕೂಲಿಕಾರರ ಕಾಲೋನಿ ದಿಕ್ಕಿನ ತಗ್ಗಿನಲ್ಲಿ ಸಾಗಿತು. ಬೊಂಬಿನ ಮೇಲೆ ಹೂಡಿದ. ಮನೆಗಳ ಸಾಲು ಸಮೀಪಿಸಿತು.

"ಅದೇ ಮನೆ."

ದಡ ಸೇರಿದ ದೋಣಿ ಪಯಣಿಗಳಂತೆ ಉತ್ಸಾಹದಲ್ಲಿ ಹೇಳಿದಳು. ಕತ್ತಲಿನಲ್ಲಿ ಮುಳುಗಿದ ಕೆಳದರ್ಜೆಯ ಚಿಕ್ಕ ಮನೆಯ ಮುಂದೆ ಟ್ಯಾಕ್ಸಿ ನಿಂತಿತು. ಮಧ್ಯ ರಾತ್ರಿ ಸಮೀಪಿಸಿದ್ದರೂ ತೆರೆದ ಬಾಗಿಲಿನ ಮೂಲಕ ದೀಪದ ಬೆಳಕು ಹರಿದಿತ್ತು.

ಇಬ್ಬರೂ ಅರ್ಧ ನಿಮಿಷ ಮೌನವಾಗಿ ಟ್ಯಾಕ್ಸಿಯಲ್ಲಿ ಕುಳಿತರು. ಕಾರ್ತೀಕ ಏಕಾಏಕಿ ಎಚ್ಚೆತ್ತವನಂತೆ ಇಳಿದು ಮನೆಯ ಮುಂದೆ ನಿಂತು ಸುತ್ತಲೂ ನೋಡಿದ. ಸೌಭಾಗ್ಯ ಗೇಟು ಸರಿಸಿದಳು.

"ಇದು ನನ್ನ ಆಂಟಿ ಮನೆ. ಮಮ್ಮಿ ಇರೋದು ಕೆಳಗಿನ ಕಾಲೋನಿಯಲ್ಲಿ. ಮನೆ ಮುಂದೆ ಕೆಂಪುಕಣಗಲೆ ಹೂವಿನ ಗಿಡ ಇದೆ."

ಮುಂಬಾಗಿಲು ಸಮೀಪಿಸುವುದರಲ್ಲಿ ದಪ್ಪನೆಯ ಹೆಂಗಸು ಹೊರಬಂದಳು.

ಗಡಸು ಕಂಠ ಹರಿಯಿತು.

"ಕಾಲೋನಿ ಜನವೆಲ್ಲಾ ಲಾರಿ ಹತ್ತಿದ್ರೂ ನಿನಗೆ ಮಾತ್ರ ಆಗ್ಲಿಲ್ಲ. ಆ ಹಾಳು ಡ್ರೈವರ್‌ಗೂ ಅವಸರ....ಹೊರಟೇಬಿಟ್ಟ. ಜೊತೇಲಿ ಯಾರೋ ಸಿಂಗಾರದ ಹುಡುಗ ಬಂದಹಾಗಿದೆ."

ತುದಿಗಾಲದಲ್ಲಿ ನಿಂತು ಅವಳ ಹಿಂದಕ್ಕೆ ಎಡಬಲ ದೃಷ್ಟಿ ಆಡಿಸಿದಳು.

ಕಾರ್ತೀಕನಿಗೆ ಉಸಿರಾಟ ನಿಂತಿತು. ನಲವತ್ತು ವಯಸ್ಸಿನ ಅವಳ ಕುಹಕ ಕಣ್ಣುಗಳಿಗೆ ಸರಿಹೊತ್ತಿನಲ್ಲಿ ಸಿಂಗಾರದ ಹುಡುಗ!

ಹೆಂಚಿನಿಂದ ತೂಗಿಬಿದ್ದ ಬಳ್ಳಿಯನ್ನು ಸರಿಸಿ ಸೌಭಾಗ್ಯಳ ಹಿಂದೆ ವರಾಂಡಕ್ಕೆ ಹೆಜ್ಜೆ ಇರಿಸಿದ.

"ಕ್ಷಮಿಸಿ, ನಿಮ್ಮ ಹುಡುಗಿ ಹೊತ್ತಾಗಿ ಬರಲಿಕ್ಕೆ ಕಾರಣ ಇದೆ...."

ಮಾತು ಪೂರೈಸುವ ಮೊದಲೇ ಹಳೆಯ ಕುರ್ಚಿಯನ್ನು ಜರ್ರನೆ ಎಳೆದು ವರಾಂಡಕ್ಕೆ ಹಾಕಿದಳು.

"ಕೂಡ್ರಿ, ಸಾರ್. ನನಗೆ ಆ ಭಯ ಇಲ್ಲ. ಸೌಭಾಗ್ಯ ಯಾರೊಂದಿಗಾದ್ರೂ ಬರ್‍ತಾಳೇಂತ ಗೊತ್ತು ನನಗೆ. ಅದಕ್ಕೆ ಹನ್ನೆರಡು ಆದ್ರೂ ದೀಪ ಹಾಕಿ ಕಾದಿದೀನಿ. ಇವಳು ನನ್ನೊಂದಿಗೆ ಇರ್‍ತಾಳೇಂತ ಇವಳ ಅಪ್ಪ, ಅಮ್ಮನಿಗೆ ನಿಶ್ಚಿಂತೆ."

ಕಾರ್ತೀಕ ಕುಳಿತುಕೊಳ್ಳಲಿಲ್ಲ. ಹೆಂಚಿಗೆ ಆವರಿಸಿದ ಹೊಗೆ, ಮೂಲೆಗೆ ಕಟ್ಟಿದ ಜೇಡನ ಬಲೆ ನೋಡುತ್ತ ನಿಂತ.

"ಇವಳೇ ನನ್ನ ಆಂಟಿ ರೂತಮ್ಮ."

ಸೌಭಾಗ್ಯ ಅವನಿಗೆ ಪಿಸುನುಡಿಯಲ್ಲಿ ಹೇಳಿದಳು.

ಕಾರ್ತೀಕನ ಕಣ್ಣುಗಳು ಮೂಲೆಯಲ್ಲಿ ರಾಶಿಬಿದ್ದ ಲಾರಿಯ ಬಿಡಿ ಭಾಗಗಳಿಂದ ಗೋಡೆಯ ಮೇಲಿನ ಕ್ರೈಸ್ತನ ಚಿತ್ರದ ಕಡೆಗೆ ಹರಿಯಿತು.

ಸೌಭಾಗ್ಯ ಕ್ರಿಶ್ಚಿಯನ್!

ಅವನು ಮತ್ತಷ್ಟು ವಿಷಯ ತಲೆಗೇರಿಸುವುದರಲ್ಲಿ ಸೌಭಾಗ್ಯ ಪರಿಚಯ ಮಾಡಿಸುತ್ತಿದ್ದಳು.

"ಇವರು ಪುಸ್ತಕ ಬರೆಯೋರು. ಇವರ ಹೆಸರು...." ಅವಳು ತಡವರಿಸಿದಳು. ಲೇಖಕ ಪರಿಚಯ ಕೊಟ್ಟ.

"ನನ್ನ ಹೆಸರು ಕಾರ್ತೀಕ. ಹಾರಂಗಿ ನೋಡೋದಿಕ್ಕೆ ಬಂದಿದೀನಿ. ನನ್ನ ಸ್ನೇಹಿತ ಇಲ್ಲಿ ಇಂಜಿನಿಯರ್. ನಾನು ಕಥೆ ಬರೆಯೋನು."

"ಕಥೆ! ಅದನ್ನ ಯಾಕೆ ಬರೀತೀರಿ?...ಓ, ಅದನ್ನ ಬರೆಯೋರೆಲ್ಲ ಕಾಡು,

ಅಣೆಕಟ್ಟು ಅಂತ ಅಲೆದಾಡ್ತಾರೆ."

ಕಥೆಗಾರ ಉಗುಳು ನುಂಗಿದ. ಇಪ್ಪತ್ತು ವರ್ಷಗಳ ಸಾಹಿತ್ಯ ಸಾಧನೆ ಈ ಹೆಂಗಸಿನ ದೃಷ್ಟಿಯಲ್ಲಿ ಸೊನ್ನೆ!

ಮಲ್ಲಿಕಾರ್ಜುನ ಹೇಳಿದ್ದು ಸರಿ. ಸೌಭಾಗ್ಯಳನ್ನು ಮನೆ ಸೇರಿಸುವ ಜವಾಬ್ದಾರಿ ಟ್ಯಾಕ್ಸಿಯವನಿಗೆ ಒಪ್ಪಿಸಿದ್ದರೆ ಸರಿಯಾಗುತ್ತಿತ್ತು. ಅದೆಲ್ಲಿ ಸಾಧ್ಯ? ತಾನು ಯಾವತ್ತಿಗೂ ಸೌಜನ್ಯದ ಗಾಳಕ್ಕೆ ಸಿಕ್ಕಿ ಬೀಳುವ ಮೀನು.

ರೂತಮ್ಮ ಕೆದರಿದ ತಲೆಯನ್ನು ಕೆರೆಯುತ್ತ ಬಾಚಣಿಗೆ ಆಡಿಸಿದಳು. ಕಾರ್ತೀಕನಿಗೆ ಕ್ಷಣಕಾಲ ನಗು ಬಂತು. ವಿಚಿತ್ರ ಹೆಂಗಸು!

ತಲೆಯಲ್ಲಿ ಆಡುತ್ತಿದ್ದ ಬಾಚಣಿಕೆ ನಿಂತಿತು. ಕಣ್ಣುಗಳು ಎಚ್ಚರಿಕೆಯಿಂದ ಗಮನಿಸುವಂತೆ ಅವನ ಮೇಲೆ ನೆಟ್ಟು ನಿಂತವು.

"ಟೀ ಮಾಡ್ತೀನಿ."

ಸಭ್ಯತೆಯ ಮಾತು ಅನಿರೀಕ್ಷಿತವಾಗಿ ಬಂತು.

"ಬೇಡ, ಸ್ನೇಹಿತ ಕಾದಿರ್ತಾನೆ."

ಅವನು ಹೆಜ್ಜೆ ಸರಿಸಲಿಲ್ಲ. ಹೊರ ಚರಂಡಿಯ ದುರ್ಗಂಧ ತೇಲಿ ಬಂತು. ಸ್ಥಳದಿಂದ ಜಾಗ್ರತೆ ಹೊರಡುವುದು ಸರಿ ಎನ್ನುವ ಪ್ರಚೋದನೆ ಎತ್ತಲಿಂದಲೂ ಬರದು. ಜೇಡನ ಬಲೆಯ ಮೇಲೆ ಮತ್ತೆ ನೋಟ ನಿಂತಿತು. ತಾನು ಜೇಡನ ಬಲೆಗೆ ಸಿಕ್ಕಿಬಿದ್ದ ನೊಣ! ಎಲ್ಲಿಯ ಸೆಳೆತ!

ರೂತಮ್ಮನ ಕಣ್ಣು ಸೌಭಾಗ್ಯಳಿಂದ ಮತ್ತೆ ಅವನ ಮೇಲೆ ಹರಿಯಿತು. ಅವನು ಸೌಭಾಗ್ಯಳತ್ತ ನೋಡಿದ. ವಿಶೇಷ ಆಕರ್ಷಣೆ ಇಲ್ಲದ ಮುಗ್ಧ ಹುಡುಗಿ. ಬಣ್ಣಗೆಟ್ಟ ಸರಳ ಉಡುಪುಗಳು.

ಪ್ರಚೋದನೆ ಬಂತು. ಸ್ಥಳದಿಂದ ಕಾಲು ಸರಿಸುವುದು ಸರಿ. ಕಾರ್ತೀಕನ ವರ್ಗಕ್ಕೆ ಸೇರಿದ್ದ ವ್ಯಕ್ತಿಗಳ ಹಣೆಬರಹ ಅದು. ಸೌಜನ್ಯದ ಉರುಳಿಗೆ ತಲೆ ಕೊಟ್ಟ ಜಾತಿ. ಮಾತು ಪೂರ್ತಿಯಾಗಿ ಆಡದೆ, ಕೇಳಿಸಿಕೊಳ್ಳದೆ ಹೆಜ್ಜೆ ಕದಲಿಸುವಂತಿಲ್ಲ.

ಆ ವೇಳೆಯಲ್ಲಿ ರೂತಮ್ಮನ ಕಥೆ ಸಾಗಿತ್ತು. ಗಂಡ ಸತ್ತ ಮೇಲೆ, ತಂದೆಯ ಮನೆಯಿಂದ ದೂರವಾಗಿ, ಕೂಲಿಕಾರ ಹೆಣ್ಣಾಗಿ, ಏಕಾಂಗಿಯಾಗಿ ಬದುಕಿದವಳ ಬವಣೆಯ ಕಥನ. ಮಧ್ಯೆ ಅವಳ ಶಂಕೆಯ ದೃಷ್ಟಿ ಇಬ್ಬರ ಮೇಲೂ ಹರಿದಾಡುವುದು ತಪ್ಪದು.

ಈಚಲು ಚಾಪೆಯ ಮೇಲೆ ಮುದುರಿ ಕುಳಿತಳು ಸೌಭಾಗ್ಯ. ತಲೆ ಗೋಡೆಯ ಆಸರೆಗೆ ಬಂತು. ನಿದ್ರೆಗೆ ಹಾತೊರೆದು ಕಿರಿದಾದ ಕಣ್ಣುಗಳು. ಆ ಭಂಗಿಯಲ್ಲಿ

ಅವಳು ಆಕರ್ಷಕವಾಗಿ ಕಂಡಳು. ಫ್ರಾಕ್ ತೊಟ್ಟ ಸ್ಕೂಲು ಹುಡುಗಿ! ಸಕಾಲದಲ್ಲಿ ತಾನು ಮದುವೆಯಾಗಿದ್ದರೆ ಅವಳ ವಯಸ್ಸಿನ ಮಗಳಿರಬೇಕಿತ್ತು.

ಎಚ್ಚರಿಕೆಯಿಂದ ಗಮನಿಸಿದಳು ರೂತಮ್ಮ. ಅವನ ಮುಖದಲ್ಲಿ ಚಿಮ್ಮಿದ ದಯೆ, ಅನುಕಂಪ ಅರ್ಥವಾಗಿತ್ತು.

"ಬುದ್ಧಿ ಚಿಗುರದ ಹುಡುಗಿ."

ಆತ್ಮೀಯವಾಗಿ ಮರುಕದ ಮಾತು ಹೇಳಿದ. ರೂತಮ್ಮ ಅವನನ್ನು ಸಮೀಪಿಸಿ ಮೆಲ್ಲನೆ ನುಡಿದಳು.

"ಅವಳ ತಾಯಿಗೆ ಆರೋಗ್ಯ ಸರಿ ಇಲ್ಲ. ಅವಳಿಗೆ ಮಗಳದೇ ಚಿಂತೆ. ಮನೇಲಿ ಬಡತನ. ಸೌಭಾಗ್ಯಳ ಪಪ್ಪ ನಾಳೆ ಟ್ರಕ್ ತೊಗೊಂಡು ಬರಬಹುದು...."

ಟ್ಯಾಕ್ಸಿಯ ಹಾರನ್ ಕೇಳಿಸಿತು. ತೂಕದ ದೇಹ ಹೊತ್ತು ಹೊರಬಿದ್ದ ರೂತಮ್ಮ ಎರಡು ನಿಮಿಷಗಳ ನಂತರ ಹಿಂದಿರುಗಿದಳು.

"ಹೇಳಿದೀನಿ, ಕಾದಿರ್ತಾನೆ" ಎಂದಳು.

ನಿದ್ರೆ ಹತ್ತಿರದ ಹುಡುಗಿಯ ಮೇಲೆ ಹರಡಿದ ಅಸ್ಪಷ್ಟ ವಿಚಾರ ಪೂರ್ಣ ನೆರಳು ಅವನನ್ನು ಅಲುಗಿಸಿತು. ಅವಳ ಅಪ್ರಬುದ್ಧತೆ, ಆ ವಯಸ್ಸಿಗೆ ಲಭ್ಯವಲ್ಲದ ಮಧುರ ಕಂಠ, ಅದನ್ನು ಅರ್ಥಮಾಡಿಕೊಳ್ಳದೆ ಅವಳನ್ನು ವ್ಯರ್ಥಗೊಳಿಸುತ್ತಿರುವ ಪರಿಸರ, ಅವನ ಹೃದಯ ಕಲಕಿದವು.

ಅವಳ ತುಟಿಗಳು ಅರಳಿದವು. ಬಹುಶಃ ಸರ್ಕಸ್ ಜೋಕರನ ಅಗ್ಗದ ಚೇಷ್ಟೆಯ ಚಿತ್ರಗಳು ಅವಳಲ್ಲಿ ಸುಳಿದಾಡಿರಬೇಕು.

"ಅವಳ ಗತಿ ಏನೊ ದೇವರೇ ಬಲ್ಲ."

ರೂತಮ್ಮನ ಬೆರಳು ಕಣ್ಣು ಮುಚ್ಚಿದ ಹುಡುಗಿಯ ಕಡೆಗಿತ್ತು. ಮಿತಭಾಷಿ ಗಂಭೀರವಾಗಿ ಕೇಳಿದ.

"ಪಪ್ಪನಿಗೆ ಮಗಳ ಚಿಂತೆ ಯಾಕಿಲ್ಲ?"

ಬೇಸರದಲ್ಲಿ ಕೈ ಕೊಡವಿದಳು ರೂತಮ್ಮ.

"ಅವನಿಗಿರೋದು ಒಂದೇ ಚಿಂತೆ....ಹಣ! ಯಾವುದೋ ಆಸ್ತಿ ಹಣ ಅವನಿಗೆ ಬರುತ್ತಂತೆ. ಅದರ ಕನಸು ಕಾಣ್ತಾ ಇದ್ರೆ ಮನೆ, ಹೆಂಡತಿ ಮಗಳು ಎಲ್ಲ ಮರೆತ ಹಾಗೆ. ಟ್ರಕ್ ತೊಗೊಂಡು ಹೋದ್ರೆ ಎಂಟು, ಹತ್ತು ದಿನ ವಾಪಸ್ ಬರಲ್ಲ. ಕುಡಿದು ಬಂದು ಹಾರಾಡ್ತಾನೆ. ಕೊರಡಿನ ಹಾಗೆ ಮಲಗ್ತಾನೆ. ಅವನಿಗೆ ಹೆಂಡತಿಯ ಕಾಯಿಲೆ ಸುದ್ದಿ ಎತ್ತಬಾರದು..... ಸೌಭಾಗ್ಯಳ ಬದುಕು ಹಾಳಾಯ್ತು!.....

ರೂತಮ್ಮನ ಕಂಠ ಏರಿತ್ತು.

"ಯಾರು ಅವಳ ಪಪ್ಪ?"

"ಬರ್ನಾರ್ಡ್ ಅಂದರೆ ಕಾಲೋನಿಯಲ್ಲಿ ಎಲ್ಲರಿಗೂ ಗೊತ್ತು. ಕೆಟ್ಟ ಕಿರಿಸ್ತಾನ. ಒಂದು ದಿನ ಚರ್ಚ್‌ಗೆ ಹೋದೋನಲ್ಲ."

ಹುಡುಗಿ ಕದಲಿದಳು. ಮಾತು ಅವಳನ್ನು ಎಚ್ಚರಗೊಳಿಸಿತ್ತು. ರೆಪ್ಪೆ ಪಟಪಟಿಸಿ ಸರಿಯಾಗಿ ಕುಳಿತಳು. ಕೈಗಳನ್ನು ಚಾಚಿ ಮೆಲ್ಲನೆ ಆಕಳಿಸಿದಳು. ನಿದ್ರೆಗಣ್ಣು ಅವನ ಮೇಲೆ ಹರಿಯಿತು. ನಸುನಗೆ ಬಂತು.

ಮಂಕು ಬೆಳಕು ಅವಳ ಸೊಂಪಾದ ಕಪ್ಪುಗೊದಲನ್ನು ಎತ್ತಿತ್ತೋರಿತು. ಕಾರ್ತೀಕ ಉಸಿರೆಳೆದುಕೊಂಡ.

"ಹೊತ್ತಾಗಿದೆ....ಮತ್ತೆ ಬರ್ತೀನಿ, ಸೌಭಾಗ್ಯ."

"ಯಾವಾಗ ಬರ್ತೀರಿ?"

ಮತ್ತೆ ಕಾಣಲು ಆಸಕ್ತಿ ತೋರಿದ ದಿಟ್ಟ ಪ್ರಶ್ನೆ ಅವಳ ಆಂಟಿಯನ್ನು ಕೆಣಕಿತು. ಹುಡುಗಿ ಗೋಡೆ ಒರಗಿ ನಿಂತಳು.

"ಬರ್ತೀನಿ. ಯಾವಾಗ ಅಂತ ಗೊತ್ತಿಲ್ಲ. ನಿನ್ನ ಮನೆ ಗುರುತು ಹೇಳಿದ್ದೀಯಲ್ಲ. ಕೆಂಪು ಕಣಗಲೆ ಗಿಡದ ಮನೆ."

ಅವನು ಹೊರಬರುತ್ತಲೇ ರೂತಮ್ಮ ಹೇಳಿದಳು.

"ಅವಳ ಪಪ್ಪ ಬರದೆ ಇದ್ರೆ ಇಲ್ಲೇ ಇರ್ತಾಳೆ."

ಗೇಟು ಸರಿಸಿ ರಸ್ತೆಗೆ ಬಂದು ಮನೆಯನ್ನು ಅವಲೋಕಿಸಿದ. ಸೌಭಾಗ್ಯ ಕೈ ಆಡಿಸಿದಳು. ಟ್ಯಾಕ್ಸಿಯವ ಬೇಸರದಿಂದ ಕಾದಿದ್ದ. ಲೇಖಕ ತನ್ನ ಬಗೆಗೇ ಬೇಸರಗೊಂಡಿದ್ದ. ಕೂಲಿಕಾರ ವರ್ಗದ, ಸಾಕಷ್ಟು ಬುದ್ಧಿ ಚಿಗುರದ ಒಬ್ಬ ಹುಡುಗಿಗಾಗಿ ತಾನು ಇಲ್ಲಿಯವರೆಗೆ ಅವೇಳೆಯಲ್ಲಿ ಬಂದುದರ ಅಗತ್ಯ? ಅರ್ಥವಾಗದ ಸೆಳೆತ! ರೂತಮ್ಮನ ಒಲ್ಲದ ಪರಿಚಯ ಅವನಲ್ಲಿ ಲಘು ಕಂಪನ ತಂದಿತ್ತು. ಹಾರ್ದಿಕತೆ ಇಲ್ಲದ ಅವಳ ಒಣ ಮಾತುಗಳು. ಸಂಶಯ ತಳೆದ ದೃಷ್ಟಿ.

ಟ್ಯಾಕ್ಸಿ ಏರಿದಾಗ ಅನಿಸಿತು. ಮತ್ತಷ್ಟು ಹೊತ್ತು ನಿಲ್ಲದೆ ಹೊರಟು ಬಂದುದು ಸರಿ.

ಎರಡು ದಿನಗಳ ನಂತರ ಸೂರ್ಯ ನೆತ್ತಿಗೇರುವ ಸ್ವಲ್ಪ ಮೊದಲು ಕಾರ್ತೀಕ ಸ್ನೇಹಿತನಿಗೆ ಹಿಂಜರಿಯುತ್ತ ಕೇಳಿದ.

"ಮಲ್ಲು, ಸ್ವಲ್ಪ ಲೇಬರ್ ಕಾಲೋನಿ ಕಡೆ ಹೋಗಿ ಬರೋಣ ಬರ್ತೀಯ?"

ಮಲ್ಲಿಕಾರ್ಜುನ ಲೊಚಗುಟ್ಟಿದ.

"ನಾನು ಇಂಜಿನಿಯರ್. ನನ್ನ ಹತ್ರ ಕೆಲಸ ಮಾಡೋ ಕೂಲಿಕಾರರ. ವಸತಿ ಕಡೆ ನಾನು ಹೋಗೋದು ನನ್ನ ಘನತೆಗೆ ಕಡಿಮೆ. ನಾಳೆದಿನ ಆ ಜನ....."

ಮಾತು ನಿಲ್ಲಿಸಿದ ವಾಚಾಳಿ ಕಾರ್ತೀಕನ ಎದೆಮುಟ್ಟಿ ಕಣ್ಣು ಮೀಟಿ ಅಡಗಿದ ಸ್ವರದಲ್ಲಿ ನುಡಿದ.

"ಆ ಹಾಡಿನ ಹುಡುಗೀನ ನೋಡೋದಿಕ್ಕೆ ತಾನೆ? ನನಗೆ ಸಂಬಂಧಿಸಿದ ವಿಷಯ. ನಾನು ಡ್ಯಾಮ್ ಕಡೆಗೆ ಹೊರಟಿದೀನಿ. ಏನು ನಡೆದಿದೆ ನಿನ್ನ ಎದೆ ಒಳಗೆ? ಸೀಸರ್, ಕ್ಲಿಯೋಪಾತ್ರರ ಭೇಟಿ! ಎಚ್ಚರಿಕೆ, ಮಗು. ಜನರ ಕಣ್ಣಿಗೆ ನಾವು ಹಳದಿ ಬಣ್ಣದಲ್ಲಿ ಕಾಣಬಾರದು. ನಲವತ್ತನೇ ವರ್ಷದಲ್ಲೂ ಮನುಷ್ಯನಿಗೆ ಪವಾಡಗಳು ಕಾದಿರುತ್ವೆ."

ಮರುಮಾತಿಗೆ ಕಾಯದೆ ಕೋಣೆಗೆ ನಡೆದ ಮಲ್ಲಿಕಾರ್ಜುನ.

ರಸ್ತೆ ಧೂಳು ಭರಿತವಾಗಿತ್ತು. ಒಂಟಿತನದ ಭಾವ ಮೈಗೂಡಿತ್ತು. ಕೊಯ್ತಕ್ಕೆ ಸಿಕ್ಕಿ ಕ್ಷೀಣಿಸುತ್ತಿದ್ದ ಬೀಟೆ ಮರಗಳ ವನದ ಹಿನ್ನೆಲೆಯಲ್ಲಿ ಷೋಡಶಿ ನಿಂತಳು. ಅವಳಿಂದ ಹೊಮ್ಮಿದ ಜನಪದದ ದ್ವಿಪದಿಯಲ್ಲಿ ಶರ್ಮಿಳಾ ತೋರಿದ ವಂಚನೆಯ ಪ್ರತಿಧ್ವನಿ.

ನಿಜ, ಶರ್ಮಿಳಾ ಗುಲಾಬಿ ದಳ ಒಯ್ದಳು. ತನಗೆ ಮುಳ್ಳು ಉಳಿಸಿ ಹೋದಳು.

ಕಹಿ ನೆನಪು ಮುಕ್ಕಾಲು ಮೈಲಿಯ ನಡಿಗೆಗೆ ಆಯಾಸ ತಂದಿತು. ಕೂಲಿಕಾರರ ವಸತಿಗಳ ತಗ್ಗಿನ ಭಾಗಕ್ಕೆ ಇಳಿದ. ಬಲಕ್ಕೆ ನಡೆದರೆ ಸೌಭಾಗ್ಯಳ ಆಂಟಿಯ ಮನೆ, ಎಡ ರಸ್ತೆಗೆ ತಿರುಗಿ ಎರಡನೆಯ ಸಾಲಿನ ಮನೆಗಳ ಮುಂದೆ ಕಿರು ಹಾದಿಯಲ್ಲಿ ಸರಿದ. ಕುಶಾಲನಗರದ ಸಂತೆಗೆ ಹೋಗಿದ್ದವರಿಂದಾಗಿ ಕಾಲೋನಿಯ ಭಾಗ ನಿರ್ಜನವಾಗಿತ್ತು.

ಕೆಂಪು ಕಣಗಲೆ ಹೂವಿನ ದಟ್ಟ ಗಿಡ ಕಾಣಿಸಿತು. ಆವರಣದ ಮತ್ತೊಂದು ಭಾಗದಲ್ಲಿ ಬಾಳೆಗಿಡಗಳು, ಬಟ್ಟೆ ಒಗೆಯುವ ಕಲ್ಲು, ಬಟ್ಟೆ ಹರಡುವ ಹಗ್ಗ.

ಎಡಬಲ ನೋಡಿ ಮನೆಯ ಜಾಲರಿ ವರಾಂಡಕ್ಕೆ ಮೆಲ್ಲನೆ ಕಾಲಿರಿಸಿದ. ಎಣ್ಣೆ ಹತ್ತಿದ ಮೂಲೆಯಲ್ಲಿ ಹಳೆಯ ಟ್ರಕ್ ಉಪಕರಣಗಳು, ಹರಿದ ಟೈರುಗಳು, ಗೋಡೆಯ ಮೇಲೆ ಮಣುಕು ಹಿಡಿದ ಕ್ಯಾಲೆಂಡರ್. ಗೋಡೆಯ ಪಕ್ಕಕ್ಕೆ ಇರಿಸಿದ ಅಲ್ಯೂಮಿನಿಯಂ ತಟ್ಟೆ, ಬಟ್ಟಲು....

ಮಧ್ಯಾಹ್ನದ ನಿಶ್ಯಬ್ದತೆಯನ್ನು ಹರಿದು ಹಾಕುವಂತೆ ಒಳಗಿನಿಂದ ನೋವಿನ ಚೀತ್ಕಾರ ಕೇಳಿ! ಅಪಘಾತಕ್ಕೆ ಸಿಲುಕಿದ ಕಾರ್ತೀಕ ಹಿಂದಕ್ಕೆ ಸರಿದು ವರಾಂಡದ ಜಾಲರಿ ಕಟ್ಟು ಬಿಗಿಯಾಗಿ ಹಿಡಿದ.

## ೨

ಕಾರ್ತೀಕ ಎದೆಗೆ ಕೈ ಹಚ್ಚಿ ಉಸಿರು ಬಿಗಿ ಹಿಡಿದು ಹಜಾರದ ಹೆಸರು ಪಡೆದಿರಬಹುದಾದ ಸಣ್ಣ ನಡುಮನೆಗೆ ಮೆಲ್ಲನೆ ಹೆಜ್ಜೆ ಇರಿಸಿದ. ಗೋಡೆಯ ಪಕ್ಕಕ್ಕೆ ಚಾಪೆಯ ಮೇಲೆ ಹೆಂಗಸು ಮಲಗಿದ್ದುದು ಕಾಣಿಸಿತು. ಅತಿಯಾದ ನೋವಿನಿಂದ ಅವಳು ನರಳುವುದು ನಸುಗತ್ತಲೆಯಲ್ಲೂ ಸ್ಪಷ್ಟವಾಗಿತ್ತು.

ಕಿಟಕಿ ತೆರೆದು ಬೆಳಕು ಬರುವಂತೆ ಮಾಡಿ ಅವಳ ಮುಂದೆ ಬಾಗಿ ನೋಡಿದ. ನೋವಿಗೆ ತತ್ತರಿಸಿ ದೇಹ ಎರಡು ಮಡಿಕೆ ಮಾಡಿ ನೆಲ ಹಿಡಿದ ನಲವತ್ತು ವರ್ಷ ವಯಸ್ಸಿನ ಹೆಂಗಸು. ತಲೆ ಹೊರಳಿಸಿ ಅಸ್ಪಷ್ಟವಾಗಿ ಏನೋ ಹೇಳಿ ಬೆರಳು ತೋರಿದಳು. ಮೇಜಿನ ಮೇಲೆ ಅನೇಕ ಹಾಳು ವಸ್ತುಗಳ ಮಧ್ಯೆ ಸಣ್ಣ ಶೀಷೆ ಕಾಣಿಸಿತು. ಅದರಿಂದ ಗುಳಿಗೆ ತೆಗೆದು ಕಪ್ಪು ಹಿಡಿದ ಅಡಿಗೆ ಕೋಣೆಗೆ ಕಾಲಿಟ್ಟ. ಜೋಡಿ ಇಲಿಗಳು ಸರಕ್ಕನೆ ಮೂಲೆಯ ಬಿಲಕ್ಕೆ ಸುಗ್ಗಿ ಅವನನ್ನು ಕ್ಷಣ ಬೆದರಿಸಿದವು.

ನೀರಿನ ಲೋಟ ಹಿಡಿದು ಬಂದ ಕಾರ್ತೀಕ. ಗುಳಿಗೆ ನುಂಗಿದ ಮೇಲೆ ಅವಳಿಗೆ ನಿಧಾನವಾಗಿ ಚೈತನ್ಯ ಬಂತು. ಹಣೆಯ ಬೆವರು ಸೆರಗಿನಿಂದ ಒತ್ತಿದಳು.

"ಈಗ ಹೇಗಿದೆ?.... ಸುಧಾರಿಸಿಕೊಳ್ರಿ." ಸಮಾಧಾನ ಹೇಳಿದ. ಅವಳ ಮುಖ ಅರಳಿತು.

"ನೀವು ಬಂದಿದ್ದು ದೇವರು ಬಂದ ಹಾಗೆ." ಕೃತಜ್ಞತೆಯ ಕ್ಷೀಣ ಸ್ವರ ಬಂತು.

"ನಿಮಗೆ ತುರ್ತು ಚಿಕಿತ್ಸೆ ಆಗ್ಬೇಕು ಅಂತ ಭಾವಿಸ್ತೀನಿ. ನೀವು ಆಸ್ಪತ್ರೆಯಲ್ಲಿ ಇರಬೇಕಾದೋರು."

"ಈಗ ನೋವು ಕಡಿಮೆ ಆಗಿದೆ. ನೀವು ಡಾಕ್ಟರೇನು?"

"ಅಲ್ಲ, ಬರಹಗಾರ."

ಬರೆಯುವ ಹಾಗೆ ಬೆರಳು ಆಡಿಸಿ ತೋರಿದ. ಅವಳು ಅರ್ಧ ಎದ್ದಳು.

"ಹಾಂ! ಸೌಭಾಗ್ಯ ಹೇಳಿದ್ಲು ನೀವು ಬರ್ತೀರಿ ಅಂತ. ನಾನು ಕನಕ ಸೌಭಾಗ್ಯಳ ಮಮ್ಮಿ. ಅವಳಿಗೋಸ್ಕರ ನೀವು ತೊಂದರೆ ತೊಗೊಂಡಿದ್ದು ಹತ್ತು ಸಾರಿ ಹೇಳಿದ್ಲು. ನಿಂತೇ ಇದ್ದೀರಿ. ಆ ಸ್ಟೂಲು ಎಳಕೊಂಡು ಕೂಡಿ.

ಅವನ ನಿಂತೇ ಇದ್ದ.

"ಒಬ್ಬರೇ ಇದ್ದೀರೇನು ಮನೆಯಲ್ಲಿ?" ನಮ್ರವಾಗಿ ಕೇಳಿದ.

"ಹುಂ, ಸೌಭಾಗ್ಯ ಇನ್ನೇನು ಬರ್ತಾಳೆ. ಅವಳ ಪಪ್ಪಾನೂ ಬರೋ ಹೊತ್ತು."

ಕನಕ ಮತ್ತಷ್ಟು ಚೇತರಿಸಿಕೊಂಡು ದಿಂಬಿನ ಆಸರೆಯಲ್ಲಿ ಗೋಡೆಗೆ ಒರಗಿದಳು. ಮುಖದ ಗೆರೆಗಳು ಮಾಯವಾಗಿ ಕಣ್ಣುಗಳಲ್ಲಿ ಬೆಳಕು ಕಂಡಿತು. ನಸುಗಪ್ಪು

ಬಣ್ಣದ ದೇಹ, ಬಣ್ಣಗೆಟ್ಟ ಹಳೆಯ ನೀಲಿ ಸೀರೆ. ಸುಕ್ಕು ಹಿಡಿದ ಕೈಗಳು.

"ಯಾವ ಊರಿನೋರು ನೀವು?"

ಆಸಕ್ತಿಯಿಂದ ಕೇಳಿದಳು. ಸ್ವರ ತುಸು ಏರಿದ್ದರೂ ಅದರಲ್ಲಿ ನಿಶ್ಶಕ್ತ ಇತ್ತು.

"ಬೆಂಗಳೂರು."

ಕಣ್ಣುಗಳು ಅರಳಿದವು. ಮರುಕ್ಷಣ ನಿಡುಸುಯ್ದಳು.

"ದೊಡ್ಡ ಟಾರು ರಸ್ತೆ. ದೀಪದ ಅಂಗಡಿಗಳ ಸಾಲು. ಸಂಜೆ ಆದ್ರೆ ಬಳ್ಳನೆ ನೀರು ಸುರಿದ ಹಾಗೆ ಓಡಾಡೋ ಜನ.....ಮಹಡಿ ಬಸ್ಸು.....ಎಂಟು ವರ್ಷ ಅಲ್ಲೇ ನಾವು ಇದ್ದಿದ್ದು."

ಅವಳಿಗೆ ಇನ್ನಷ್ಟು ಹೇಳುವ ಇಚ್ಛೆ. ಅದಕ್ಕೆ ಯಾವುದೂ ತಡೆ ಮುಂದೆ ನಿಂತ ಅಪರಿಚಿತ, ಮನೆಯ ಪರಿಸ್ಥಿತಿ, ತನ್ನ ಕಾಯಿಲೆಯ ತೀವ್ರ ಯಾವುದರ ಪರಿವೆಯೂ ಇಲ್ಲದೆ ಬಡಬಡಿಸಿದಳು.

ಬೆವರು ಒರೆಸಿ. ಮೌನ ತಳೆದು ನಿಂತವನ ಕಡೆ ನೋಡಿ ಮತ್ತೆ ನಿಧಾನವಾಗಿ ಮಾತು ಹರಿಸಿದಳು.

"ಎಂಟು ವರ್ಷ ನಾವು ಅಲ್ಲೇ ಇದ್ದಿದ್ದು. ಸಿಟಿಯಲ್ಲಿದ್ದಾಗ ಕಂಡಿದ್ದು, ಅನುಭವಿಸಿದ್ದು ಎಲ್ಲಾ ಈಗ್ಲೂ ಕಣ್ಣಿಗೆ ಕಟ್ಟಿದ ಹಾಗೆ ಇದೆ."

"ಮತ್ತೆ ಅಲ್ಲಿಗೆ ಹೋಗಲಿಲ್ಲವೆ?"

"ಇಲ್ಲ. ಈ ಬಡ ಬದುಕು. ತಿರುಗಾಡೋ ಗಂಡ, ಬೆಳೀತಾ ಇರೋ ಮಗಳು ಎಲ್ಲಿ ಬಿಟ್ಟು ಹೋಗೋದು. ನನ್ನ ಮಗ ಜಯಶೀಲ ಅಲ್ಲೇ ತೀರಿ ಹೋಗಿದ್ದು."

"ಸೌಭಾಗ್ಯ ಹೇಳಿದ್ಲು. ಏನಾಗಿತ್ತು?"

"ಯಾವುದೋ ಕಾಯಿಲೆ. ಡಾಕ್ಟರು ಏನೋ ಹೆಸರು ಹೇಳಿದ್ರು. ನನ್ನ ಕಾಯಿಲೆಗೂ ಹೆಸರಿಲ್ಲ. ಜಯಶೀಲನಿಗೆ ಎರಡು ದಿನ ಜ್ವರ ಬಂತು. ಅವತ್ತು ನನ್ನ ಗಂಡ ಊರಲ್ಲಿರಲಿಲ್ಲ. ಅವರು ಬರೋ ಹೊತ್ತಿಗೆ ಹೋಗಿಬಿಟ್ಟಿದ್ದ ನನ್ನ ಮಗ. ನನ್ನ ಗಂಡ ಮಾಡಿದ ಪಾಪ ನನ್ನ ಮಗನ್ನ ಬಲಿ ತೊಗೊಂತು...."

"ಬರ್ನಾರ್ಡ್ ಏನು ಪಾಪ ಮಾಡಿದ್ದು?"

ಅವನ ಕಾತರಕ್ಕೆ ಉತ್ತರ ಬರಲಿಲ್ಲ. ತಲೆಗೂದಲು ತಿದ್ದಿಕೊಂಡಳು. ಕಾರ್ತೀಕ ತುಟಿ ಸವರಿಕೊಂಡ.

ಸೌಭಾಗ್ಯ....ಕನಕ....ಜಯಶೀಲ.

ಮನೆಯ ಒಡೆಯ ಬರ್ನಾರ್ಡ್!

"ನೀವು ಕ್ರಿಶ್ಚಿಯನ್ನರೇ?"

"ಹುಂ, ಮನೇಲಿ ಏಸುವಿನ ಪೋಟೋ ಇರಗೊಟ್ಟಿಲ್ಲ ನನ್ನ ಗಂಡ..."

ಬಿಸಿಲಿನ ಬೇಗೆ ಅವಳ ಹಣೆಯ ಮೇಲೆ ಮತ್ತೆ ಹನಿಗೂಡಿಸಿತ್ತು. ಸೊರಗಿದ ಮಾತು ಹರಿಯಿತು.

"ಸ್ಕೂಲ್ ಟೀಚರ್ ಆಗಿದ್ದೆ. ನನ್ನ ಜಯಶೀಲ ಹೋಗ್ಬಿಟ್ಟ. ನನ್ನ ಆರೋಗ್ಯ ಕೆಡ್ತು. ಬೆಂಗಳೂರಿಂದ ಈ ಕಾಡಿಗೆ ಬಂದುಬಿಟ್ವಿ. ನೋಡಿ, ಈ ಗತಿಗೆ ಬಂದಿದೀನಿ...."

ಅವಳ ಗಂಟಲಿನ ನರ ಸೆಳೆಯಿತು.

"ಆ ಗೋಡೆ ಮೇಲಿರೊ ಪೋಟೋ ನೋಡಿ. ಅದೇ ನಮ್ಮ ಮನೆ. ಅಲ್ಲಿ ಎಷ್ಟು ಸುಖವಾಗಿದ್ದಿ.....!"

ಕಾರ್ತೀಕ ಗೋಡೆಯ ಕಡೆಗೆ ತಿರುಗಿದ. ಆವರೆಗೆ ಕಣ್ಣಿಗೆ ಬೀಳದಿದ್ದ ಮಣುಕು ಚಿತ್ರದ ಮುಂದೆ ಸರಿದು ನಿಂತ.

ಸುಂದರವಾದ ಪುಟ್ಟ ಹೆಂಚಿನ ಮನೆ. ಕಬ್ಬಿಣದ ದೆಬ್ಬೆಗಳಿಂದ ಹೆಣೆದ ಜಾಲರಿ ವರಾಂಡ. ಜೋಲುಬಿದ್ದ ಹೂಬಳ್ಳಿಗಳು. ಮನೆಯ ಮುಂದೆ ತಿಲಕವಿಟ್ಟಂತೆ ನೀಲಿ ನಕ್ಷತ್ರ. ಮುಂದಿರಿಸಿದ ಹತ್ತಾರು ಹೂವಿನ ಕುಂಡಗಳು.

ಪಕ್ಕಗಳಲ್ಲಿ ನೋಡಿದ. ಕ್ರೈಸ್ತನ ಚಿತ್ರವಿಲ್ಲ. ಕನಕ ಹೇಳಿದಂತೆ ಬರ್ನಾರ್ಡ್ ಪಾಪ ಮಾಡಿ ಕೆಟ್ಟ ಕ್ರಿಶ್ಚಿಯನ್. ನಾಸ್ತಿಕ!

"ನಿಮ್ಮ ಗಂಡ ಬೆಂಗಳೂರು ಫ್ಯಾಕ್ಟರಿಯಲ್ಲಿ ಕೆಲಸ ಮಾಡ್ತಾ ಇದ್ದರೆ"

"ಹುಂ."

"ಯಾವ ಫ್ಯಾಕ್ಟರಿ ಕಾಲೋನಿಯಲ್ಲೂ ಇಂಥ ಚೊಕ್ಕವಾದ ಮನೆ ಇರೋದಿಲ್ಲ." ಫೋಟೋ ಕಡೆಗೆ ಬೆರಳು ಮಾಡಿದ.

"ಇರೋದಿಲ್ಲ."

ತಪ್ಪು ಮಾಡಿದವಳಂತೆ ಗಾಬರಿಯಿಂದ ನುಡಿದಳು. ಅವಳನ್ನು ಗಂಭೀರವಾಗಿ ನೋಡಿದ.

ಕನಕ ಆಡುತ್ತಿರುವುದು ಕನಸಿನ ಮಾತು. ಅನಾರೋಗ್ಯದ ಜೀರ್ಣ ದೇಹದಿಂದ ಹೊರಬರುವ ಹುಚ್ಚು ನುಡಿ.

ಹುಚ್ಚು ಹಿಡಿದವಳಂತೆ ಮೆಲ್ಲನೆ ನಕ್ಕಳು.

"ಗಂಡ, ಮಕ್ಕಳು, ಮನೆ ಎಲ್ಲಾ ಸರಿಯಾಗಿ ಸೇರಬೇಕಾದ್ರೆ ಹಿಂದಿನ ಜನ್ಮದಿಂದ ಕೇಳಿಕೊಂಡು ಬಂದಿರಬೇಕು."

ನೋವು ತುಂಬಿದ ಸ್ವರದಲ್ಲಿ ಕಂಪನವಿತ್ತು. ಕಾರ್ತೀಕ ಗಂಭೀರವಾಗಿ ಗಮನಿಸಿದ. ಸರ್ಕಸ್ ಡೇರೆಯಲ್ಲಿ ತುಣುಕು ಹಾಡು ಹರಿಸಿದ, ರಾಗವಾಗಿ ಮಾತಾಡಿದ ಸೌಭಾಗ್ಯಳ ಧ್ವನಿಗೂ ಈ ಶಿಥಿಲ ದೇಹಿ ಹೆಂಗಸಿನ ಸ್ವರಕ್ಕೂ ಸಾಮರಸ್ಯವಿಲ್ಲ.

ಕಿಟಕಿಗೆ ಅಡ್ಡಲಾಗಿ ಗೋಡೆಯ ಮೇಲೆ ನೆರಳು ಹಾದು ಹೋಯಿತು. ನೆರಳು ಮೂಡಿಸಿದ ವ್ಯಕ್ತಿ ಗೇಟು ಸರಿಸಿದ. ಬೂಟು ಸಪ್ಪಳ ಸಮೀಪಿಸಿತು.

"ಹಾಂ! ನನ್ನ ಗಂಡ ಬಂದ್ರು....."

ಕನಕ ಆತುರದಲ್ಲಿ ನರಳುತ್ತಾ ಚಾಪೆಯಿಂದ ಎದ್ದಳು.

ಒಳ ಬಂದವನು ಮಧ್ಯ ವಯಸ್ಸಿನ ದೃಢದೇಹಿ. ತಲೆಯ ಹಿಂಭಾಗವನ್ನು ಗುಂಡನೆಯ ಕೆಂಪು ಟೋಪಿ ಮುಚ್ಚಿತ್ತು. ಮುಖದಲ್ಲಿ ಪೊದೆಯಾಗಿ ಆವರಿಸಿದ ಗಡ್ಡ, ಮೀಸೆ, ಚೂಪು ನೋಟ ತೂರುವ ಕಣ್ಣುಗಳು. ಮಾಸಿದ ಬಿಗಿ ನೀಲಿ ಪ್ಯಾಂಟು, ಷರಟು.

ಪ್ರಥಮ ನೋಟಕ್ಕೆ ಯಾವನನ್ನಾದರೂ ಗಂಭೀರಗೊಳಿಸುವ ವ್ಯಕ್ತಿ!

"ನನ್ನ ಗಂಡ...."

ಅಷ್ಟು ಹೇಳಿ ಕನಕ ಗೋಡೆಗೆ ಒರಗಿ ನಿಂತಳು. ಪತಿಯ ಆಗಮನದಿಂದ ನೆಮ್ಮದಿ ಕಳೆದುಕೊಂಡಿದ್ದಳು.

"ಬರ್ನಾರ್ಡ್ ಹೆಸರು ಕೇಳ್ದೆ. ನಾನು ಕಾರ್ತೀಕ. ಕಥೆ, ಕಾದಂಬರಿ ಬರೆಯೋನು."

ಪರಿಚಯ ಕೊಟ್ಟ ಬರಹಗಾರ ಗಡ್ಡ. ಮೀಸೆಯಿಂದ ತುಂಬಿದ ಮುಖವನ್ನು ಕುತೂಹಲದಿಂದ ನಿಟ್ಟಿಸಿದ. ವಂದನೆಯ ಸೂಚಕವಾಗಿ ಕೈ ಎತ್ತಿದ ಬರ್ನಾರ್ಡ್.

"ನೀವು ಡಾಕ್ಟರ್ ಅಂತ ತಿಳಿದಿದ್ದೆ."

ಸಂಶಯಾತ್ಮಕ ದೃಷ್ಟಿಯಲ್ಲಿ ಅವನನ್ನು ಅಳೆದು ಕೈಲಿದ್ದ ಚೀಲವನ್ನು ಮೇಜಿಗಿರಿಸಿದ. ಕಾರ್ತೀಕ ಒಣ ನಗೆ ಸೂಚಿಸಿದ.

"ಡಾಕ್ಟರ್ ಅಲ್ಲಾಂತ ನಿರಾಶೆ ಆಯ್ತೆ? ನಿಮ್ಮ ಹೆಂಡತೀನ ಕೂಡಲೇ ಡಾಕ್ಟರಿಗೆ ತೋರಿಸಿ."

ಬರ್ನಾರ್ಡ್ ಮೈಮುರಿದು ಅಗಾಧವಾಗಿ ನಿಂತು ಕಿರುಗಣ್ಣು ಮಾಡಿದ. ಇಬ್ಬರನ್ನೂ ನೋಡುತ್ತಿದ್ದ ಕನಕ ಮಾತು ಕೂಡಿಸಿದಳು.

"ನೋವು ಕಾಣಿಸ್ತು. ಮಲಗಿಬಿಟ್ಟೆ. ಇವರು ಬಂದು ನನಗೆ ಗುಳಿಗೆ ತೆಗೆದುಕೊಟ್ರು..."

"ಅಷ್ಟೆ ತಾನೆ, ಗುಳಿಗೆ ತಯಾರು ಮಾಡಲಿಲ್ಲವಲ್ಲ?"

ಬರ್ನಾರ್ಡ್ ಟೋಪಿ ತೆಗೆದು ತಲೆ ಕೆರೆದ. ಮೊಗದಸ್ತಾಗಿ ಬೆಳೆದ ಬಿಳುಪು ಮಿಶ್ರಕಪ್ಪು ತಲೆಗೂದಲು, ಪೊದೆಹುಬ್ಬುಗಳವರೆಗೆ ಇಳಿಯಿತು.

ಕಾರ್ತೀಕ ಉಸಿರೆಳೆದುಕೊಂಡ. ಮುಖಕ್ಕೆ ಮೆಲ್ಲನೆ ರಾಚಿದಂತಾಗಿತ್ತು.

"ನಿಮ್ಮ ಹೆಂಡತಿ ಆರೋಗ್ಯ ಪೂರಾ ಕೆಟ್ಟಿದೆ."

ನಯವಾಗಿ ಮತ್ತೆ ಅರಿವು ಮಾಡಿಕೊಟ್ಟ.

"ಅವಳಿಗೆ ಮನೋರೋಗ, ಇಲ್ಲಿಗಿಂತ ಆರೋಗ್ಯವಾಗಿ ಮತ್ತೆಲ್ಲಿದ್ದಾಳು ಅವಳು."

ಅಂಬಿನಂತೆ ಪ್ರತಿನುಡಿ ಒಗೆದು ಹೆಂಡತಿಯನ್ನು ಕೇಳಿದ.

"ಎಲ್ಲಿ ನಿನ್ನ ಮಗಳು?"

"ರಾಣಿ ಮನೆಗೆ ಹೋಗಿರ್ಬೇಕು."

"ರಾಣಿ ಸಹವಾಸ ಬೇಡಾಂತ ನೀನು ಹೇಳೋದಿಲ್ಲ. ಆ ರಾಣಿ ಜೊತೇಲಿ ಓಡಾಡೋ ಹುಡುಗ...."

"ಶ್!"

ಕನಕ ಅವನ ಮಾತು ತಡೆದು ಅಡಿಗೆ ಗೂಡು ಸೇರಿ ಒಲೆಯ ಮೇಲೆ ಪಾತ್ರೆ ಇಟ್ಟಳು.

"ನನ್ನದೇನು ಉಳಿದಿದೆ ಇನ್ನು. ಅವಳಿಗೆ ಒಂದು ದಾರಿ ಮಾಡ್ಲಿಲ್ಲ ನೀವು. ಅವಳಿಗೆ ಮದುವೆ ಮಾಡ್ಸಿ ನಿಮ್ಮ ಕನಸು ಕೊನೆಗೊಂಡ್ರೆ ಋಣ ತೀರ್ರು."

ಕೋಣೆಯ ಬಾಗಿಲುವಾಡ ಹಿಡಿದು ನಿಂತ ಬರ್ನಾರ್ಡ್ ತಲೆ ಗಟ್ಟಿಯಾಗಿ ಒತ್ತಿಕೊಂಡ. ಅವನಿಗೆ ಅದು ಹೆಂಡತಿಯ ಅನುದಿನದ ರಾಗ.

"ಸ್ವಲ್ಪ ತಡಕೊ. ಅವಳಿಗೊಂದು ದಾರಿ ಬೇಗ ತೋರಿಸಿ ನನ್ನ ದಾರಿ ಕಂಡುಕೊಳ್ತೀನಿ. ಸ್ವಲ್ಪ ಸಹನೆ ಬೇಕು ನಿನಗೆ."

"ಸಹನೆ ಎಲ್ಲಾ ಪೂರೈಸಿ ದಿನ ಎಣಿಸ್ತಾ ಇದೀನಿ. ನನ್ನ ಸಹನೆ ಅವಳಿಗೋಸ್ಕರ. ನಿಮ್ಮ ಸಹನೆ...ಅಲ್ಲ, ಆತುರ ಹಣಕ್ಕೋಸ್ಕರ...ಹಣ!"

ಉದ್ರೇಕದಲ್ಲಿ ಒದರಿದಳು.

ಕಾರ್ತೀಕ ಕೈ ಉಜ್ಜುತ್ತಾ ನಿಂತ. ತಾನು ಬಂದುದೇಕೆ? ಸ್ನೇಹಿತನ ವ್ಯಂಗ್ಯದ ಹೇಳಿಕೆಯಂತೆ ಇದು ಸಮಾಜ ಸೇವೆ! ಮನೆಯ ಒಡೆಯ ಸೌಜನ್ಯಗೆಟ್ಟವ, ಧೂರ್ತ. ರೂತಮ್ಮ ಹೇಳಿದಂತೆ ಚರ್ಚ್ ಕಾಣದ ನಾಸ್ತಿಕ. ಒಡತಿ ರೋಗಿಷ್ಟೆ. ಇಬ್ಬರದೂ ವಿಮುಖ ಪ್ರಕೃತಿಗಳು. ಇಬ್ಬರ ನಡುವೆ ನಲುಗುತ್ತಿರುವ ಮುಗ್ಧ ಬಾಲೆ! ಅವಳಿಗೆ ಮದುವೆ ಮಾಡಿಸಿ ದಾರಿಗಾಣಿಸಿದರೆ ತಂದೆಗೊಂದು ದಾರಿಯಂತೆ. ಅದರಿಂದ ಋಣಮುಕ್ತತೆ! ಕಟು ಸ್ವಭಾವದ ಟ್ರಕ್ ಚಾಲಕನನ್ನು ಪತಿಯಾಗಿ ಪಡೆದು ಕನಕ ಬದುಕಿನಲ್ಲಿ ಗಾಯಗೊಂಡಿದ್ದಾಳೆ.

ಅವರಿಬ್ಬರ ಚರ್ಚೆ ತನ್ನ ಮುಂದೆ ಸಾಗಿದೆ. ಅವರಿಬ್ಬರ ದೃಷ್ಟಿಯಲ್ಲಿ ತಾನು ಅವರಲ್ಲಿಗೆ ಬಂದಿರುವುದೇ ತನ್ನದೇ ಯಾವುದೋ ಸ್ವಾರ್ಥ ಇದ್ದಂತೆ!

ಬರ್ನಾರ್ಡ್ ಅಸಡ್ಡೆಯಿಂದ ಕೈ ಬೀಸಿ ಕೋಣೆಯ ಬಾಗಿಲಿನಿಂದ ಸರಿದು ಬಂದ.

"ಇದ್ದಕ್ಕಿದ್ದ ಹಾಗೆ ಏನೇನೋ ಹುಚ್ಚು ಹುಚ್ಚಾಗಿ ಆಡಿ ಉದ್ರೇಕ ಗೊಳ್ತಾಳೆ."

"ಸ್ವಲ್ಪ ತಡಕೊ, ಕನಕ. ನನಗೆ ಐಶ್ವರ್ಯ ಬರೊ ದಿನ ದೂರ ಇಲ್ಲ.

"ಆ ಮಾತು ನಿಲ್ಲಿಸಿದರೆ ಸಾಕು. ನನ್ನ ಕಾಯಿಲೆ ಅರ್ಧ ವಾಸಿ ಆದೀತು."

"ಸೌಭಾಗ್ಯ ಹುಟ್ಟಿದ ದಿನವೇ ಐಶ್ವರ್ಯ ತಂದೋಳು. ಸೌಭಾಗ್ಯ ಅನ್ನೋ ಹೆಸರು ಇಟ್ಟೋನು ನಾನು."

ಲೇಖಕನ ಕಡೆ ನಗೆ ಬೀರಿದ. ಕನಕ ಕೆಟಲ್ ತಂದು ಇಬ್ಬರಿಗೂ ಚಹ ನೀಡಿದಳು.

"ನಾವು ಬಡವರಾದ್ರು ಚೆನ್ನಾಗಿ ಬದುಕಿದೋರು, ತೃಪ್ತಿಪಟ್ಟೋರು.

ಟ್ರಕ್ ಚಾಲಕನ ಗಂಟು ಮುಖದಲ್ಲಿ ಹೆಮ್ಮೆ ಎದ್ದು ಕಂಡಿತು.

"ತೃಪ್ತಿಪಟ್ಟಿದ್ದು ಜಯಶೀಲ ಬದುಕಿರೊವರೆಗೆ."

"ಹೊಸಬರ ಮುಂದೆ ನಮ್ಮ ಮನೆ ಹಳೆ ಮಾತು ಯಾಕೆ ಎತ್ತೋದು

"ಮಗು ತೀರಿ ಹೋದ ದಿವಸ ಎಲ್ಲಿದ್ರಿ ನೀವು? ಚೆನ್ನಾಗಿ ಕುಡಿದುಬಿದ್ದಿದ್ರಿ..."

ಮಡದಿಯ ಗಡಸು ಕಂಠಕ್ಕೆ ಅವನು ರೋಸಿದ. ಅರ್ಧ ಕುಡಿದ ಟೀ ಕಪ್ ಮೇಜಿಗೆ ಕುಟ್ಟಿದ. ಅವಳು ಸ್ಟೂಲಿನ ಮೇಲೆ ಕುಸಿದು ಕುಳಿತು ಮೇಜಿಗೆ ತಲೆ ಒರಗಿಸಿದಳು. ಬರ್ನಾರ್ಡ್ ಮತ್ತೊಂದು ಕಪ್‌ಗೆ ಟೀ ಬಗ್ಗಿಸಿ ಅವಳ ಕೈ ಸೋಕಿಸಿದ.

"ಬುದ್ಧಿ ಕಳಕೊಂಡುಬಿಡ್ತೀಯ" ಸಮಾಧಾನ ಹೇಳಿದ.

"ನನ್ನ ಗಂಡನಿಗೆ ಬುದ್ಧಿ ಹೇಳೊ ಮನುಷ್ಯ ಯಾರಿದಾರೆ?"

ಕಾರ್ತೀಕ ಬೇಸರಗೊಳ್ಳಲಿಲ್ಲ. ತುಟಿಗಳಲ್ಲಿ ಒಣನಗೆ ಬಂತು. ತಲೆ ತುರಿಸಿದ. ಒಂದು ಕಾಲದಲ್ಲಿ ಸುಖವಾಗಿ, ತೃಪ್ತರಾಗಿ ಬಾಳಿದ ಜೋಡಿ ಇದು. ವಿರುದ್ಧ ಪ್ರಕೃತಿಗಳ ಘರ್ಷಣೆ ಅವರನ್ನು ತುಸು ಇಬ್ಭಾಗಿಸಿದೆ. ಬಾಂಧವ್ಯದ ಸೂತ್ರ ಸಡಿಲವಾದರೂ ಕಡಿದುಹೋಗಿಲ್ಲ.

ಹೊರಗಡೆ ಟ್ರಕ್ ನಿಂತ ಶಬ್ದ ಕೇಳಿಬಂತು. ಜೋಡಿ ಹೆಣ್ಣುಗಳ ನಗು ಹಾದು ಬಂತು.

"ನಿನ್ನ ಮಗಳು ಬಂದ್ಲು." ಬರ್ನಾರ್ಡ್ ತಾತ್ಸಾರದಿಂದ ಹೇಳಿದ.

ಟ್ರಕ್ ಹೊರಟುಹೋಯಿತು. ಗೇಟು ಸರಿಸಿ ಮೊದಲು ಒಳಬಂದವಳು ಸೌಭಾಗ್ಯಳ ಸ್ನೇಹಿತೆ. ರಾಣಿ ಸೌಭಾಗ್ಯಳಿಗಿಂತ ಎತ್ತರದವಳು. ಎರಡು–ಮೂರು ವರ್ಷಗಳಷ್ಟು ದೊಡ್ಡವಳು.

"ನಾನು ಬಂದಿದೀನಿ."

ಸೌಭಾಗ್ಯಳನ್ನು ಕಾಣುತ್ತಲೇ ಉತ್ಸಾಹದಿಂದ ಹೇಳಿದ ಕಾರ್ತೀಕ... ಅವಳ ಮುಖದಲ್ಲಿ ಬಣ್ಣ ಏರಿತು. ಸಂತಸ ಆವರಿಸಿತು. ಅಂದಿನ ಫ್ರಾಕ್ ತೊಟ್ಟ ಬಾಲೆಯಲ್ಲ. ನೋಟಕನ ಕಣ್ಣು ಅರಳಿಸಿದ. ಪೂರ್ಣ ಷೋಡಶಿ.

ಕಪ್ಪು ಗೆರೆಗಳ ಕೇಸರಿಸಿದ. ರಂಗಿನ ಲಂಗ. ಹಳದಿ ದಾವಣಿ. ಕೆಂಪು ಕುಪ್ಪಸ.

ಟೋಪಿ ತಲೆಗೇರಿಸಿದ ಬರ್ನಾರ್ಡ್ ಗಟ್ಟಿಯಾಗಿ ಕೇಕರಿಸಿ ಲೇಖಕನನ್ನು ಬೆಚ್ಚುವಂತೆ ಮಾಡಿದ.

"ಸೌಭಾಗ್ಯಳ ದೋಸ್ತ್..."

ಹಾಗೆಂದು ರಾಣಿ ತನ್ನ ಕೆನ್ನೆಗಳನ್ನು ಸವರಿ ಬಟ್ಟಲು ಕಣ್ಣು ತೋರಿದಳು.

ಕಾರ್ತೀಕ ಗಾಬರಿಗೊಂಡ. ತಾನು ಸೌಭಾಗ್ಯಳ ಸ್ನೇಹಿತ! ಸ್ನೇಹಿತನೆಂಬುದು ನಿಜ. ಅದರ ಅರ್ಥದಲ್ಲಿ ಬಳಸಿದ ಪದದಲ್ಲಿ ಕುಹಕತೆ ತುಂಬಿದೆ. ಪರಿಸರದ ಸಹಜ ಪ್ರತಿಕ್ರಿಯೆ ನಿಂತಿರುವುದು ಕೂಲಿಕಾರರ ಕಾಲೋನಿ ಮನೆಯಲ್ಲಿ!

ಸ್ನೇಹಿತನ ಎಚ್ಚರದ ಮಾತು ಗುಂಗಾಡಿತು.

"ಎಚ್ಚರಿಕೆ, ಮಗು. ಜನರ ಕಣ್ಣಿಗೆ ನಾವು ಹಳದಿ ಬಣ್ಣದಲ್ಲಿ ಕಾಣಬಾರದು.'

ಮೌನವಾಗಿ ನಿಂತ ಹಳದಿ ಮನುಷ್ಯ. ರಾಣಿಯತ್ತ ನೊಂದ ದೃಷ್ಟಿ ಬೀರುವುದರ ಹೊರತು ಒಂದು ಪದವೂ ಹೊರಬರಲಿಲ್ಲ. ಕರ್ತವ್ಯ ಅವನನ್ನು ತಿವಿಯಿತು.

"ನಿಮ್ಮ ಡಾಕ್ಟರು ಯಾರು? ತಕ್ಷಣ ಆಸ್ಪತ್ರೆ ಸೇರಿದರೆ ಒಳ್ಳೇದು."

ಗಂಭೀರವಾಗಿ ಕನಕಳಿಗೆ ತಿಳಿಸಿದ. ಬರ್ನಾರ್ಡ್‌ಗೆ ಕೈಗೆ ಬಂದಿದ್ದ ಟೋಪಿ ಮುದುರಿತು.

"ಇಂತಾ ಸಲಹೆ ಬೇಕಾದಷ್ಟು ಜನ ಕೊಡ್ತಾರೆ. ಅದಕ್ಕೆ ಹಣ ಎಲ್ಲಿಂದ ತರೋದು?"

ಹೆಂಡತಿಯ ಯೋಗಕ್ಷೇಮ ತನ್ನದಲ್ಲ ಎಂಬಂತೆ ಸಿಡಿದು ಹೇಳಿದ ಬರ್ನಾರ್ಡ್. ರಾಣಿ ಬಿಳುಪು ಹಲ್ಲುಗಳನ್ನು ಮಿನುಗಿಸಿದಳು.

"ನಿಮ್ಮ ಕನಸಿನ ಗಂಟಿನಿಂದ ಸ್ವಲ್ಪ ಹಣ ಎಳೆದುಕೊಬಹುದು, ಅಂಕಲ್."

ವ್ಯಂಗ್ಯ ಅವನ ಕಣ್ಣುಗಳಿಗೆ ಕೆಂಪು ಕೂಡಿಸಿತು.

"ಹಾಳು ಹುಡುಗಿ! ನಿನ್ನ ಸಹವಾಸದಿಂದ ಮಗಳೂ ಹಾಳಾದ್ಲು."

ಹುಡುಗಿ ಭುಜ ಕುಣಿಸಿದಳು.

"ಮಮ್ಮಿ!" ಸೌಭಾಗ್ಯ ಚೀರಿದಳು.

ಕನಕ ನೆಲಕ್ಕೆ ಕುಸಿದು ಅತೀವ ನೋವಿನಲ್ಲಿ ಏದುಬ್ಬಸಪಡುತ್ತಿದ್ದಳು. ಎರಡು ಕೈಗಳೂ ಹೊಟ್ಟೆ ಒತ್ತಿದ್ದವು.

ಬರ್ನಾರ್ಡ್ ಮುಷ್ಟಿ ಬಿಗಿಸಿ ತುಟಿ ಕಚ್ಚಿದ.

"ಈಗೇನು ಮಾಡೋದು?" ಕೋಪದಲ್ಲಿ ನಿಸ್ಸಹಾಯಕತೆ ಇಣುಕಿತು.

"ಇವರು ಹೇಳಿದ ಹಾಗೆ ಮಾಡೋದು ಒಳ್ಳೇದು, ಪಪ್ಪ."

ಸೌಭಾಗ್ಯ ಕಾರ್ತೀಕನ ಕಡೆ ನೋಡಿ ಕಳಕಳಿಯಿಂದ ಅಭಿಪ್ರಾಯ ಕೊಟ್ಟಳು.

'ಟ್ರಕ್‌ನಲ್ಲಿ ತೊಂದರೆ ಅಗತ್ತೆ. ಟ್ಯಾಕ್ಸಿಗೆ ಹೇಳೋಣ."

ಅವಳ ಅಭಿಪ್ರಾಯಕ್ಕೆ ಬಲಕೊಟ್ಟ ಕಾರ್ತೀಕ. ಪರಿಸ್ಥಿತಿ ಬರ್ನಾರ್ಡ್‌ನನ್ನು ಮೆದು ಮಾಡಿತ್ತು.

"ನಿಮಗೆ ಯಾಕೆ ನಮ್ಮ ಕಷ್ಟದ ಕಾಳಜಿ?" ಗೊಣಗಿದ.

"ಕಾಳಜಿಪಡಬೇಕಾದ ಮನುಷ್ಯ ನಿಶ್ಚಿಂತೆಯಿಂದ ನಿಂತಾಗ ಮತ್ತೆ ಯಾರಾದ್ರು ಕಾಳಜಿ ಹಚ್ಕೊಬೇಕು. ನೀವು, ನಿಮ್ಮ ಹೆಂಡತಿ ಒಪ್ಪಿಗೆ ಕೊಟ್ಟರೆ ಆಯ್ತು."

"ಹುಂ ಅನ್ನು, ಮಮ್ಮಿ.....ಪಪ್ಪ, ನೀನೂ....."

ಒತ್ತಾಯದಲ್ಲಿ ಬೇಡಿದಳು ಸೌಭಾಗ್ಯ. ಕನಕ ಪತಿಯ ಉತ್ತರಕ್ಕೆ ಕಾತರಿಸಿದಳು. ಅವನು ಒಲ್ಲದ ಮನದಿಂದ ಭಾರಿಯಾಗಿ ಉಪಕರಿಸುವಂತೆ ಗೋಣು ಆಡಿಸಿದ. ರಾಣಿಯ ಸೂಚನೆ ಹಿಡಿದು ಕಾಲೋನಿಯ ಹುಡುಗನೊಬ್ಬ ಟ್ಯಾಕ್ಸಿ ತರಲು ಹೊರಟ.

"ಆಸ್ಪತ್ರೇಲಿ ನಿಮ್ಮ ಜೊತೆ ಯಾರು ಇರ್ತಾರೆ, ಮಮ್ಮಿ?"

ರಾಣಿಯ ಪ್ರಶ್ನೆ ಬಂತು. ಬರ್ನಾರ್ಡ್ ಕಿಟಕಿ ಸರಳು ಹಿಡಿದು ನಿಂತೆ.

"ನಾನು ಈಗ ಗೋಣಿಕೊಪ್ಪಲಿಗೆ ಗಾಡಿ ಒಯ್ಯಬೇಕು."

ಪತಿಯ ಬೇಜವಾಬ್ದಾರಿಯ ಮಾತಿನಿಂದ ಕನಕ ವಿಚಲಿತಳಾಗಲಿಲ್ಲ. ವಿರಕ್ತಳಂತೆ ನುಡಿದಳು.

"ಎಲ್ಲಿಗಾದ್ರೂ ಹೋಗಿ. ಐಶ್ವರ್ಯದ ಕನಸು ಕಾಣ್ತಾ ಹೋಗಿ. ಸೌಭಾಗ್ಯ ನನ್ನ ನೋಡಿಕೊಳ್ತಾಳೆ. ರಾತ್ರಿ ಅವಳ ಆಂಟಿಯ ಮನೇಲಿ ಇರ್ತಾಳೆ."

ಅವಳ ತುಟಿಗಳಲ್ಲಿ ಒತ್ತಾಯದಿಂದ ಎಳೆದು ಕಿರು ನಗೆ ಕಾಣಿಸಿತು.

ಕಾರ್ತೀಕ ಎಲ್ಲರನ್ನೂ ನಿಟ್ಟಿಸಿ ಮೈ ಉಜ್ಜಿಕೊಂಡ. ಎಲ್ಲಿಯಕೋಟಲೆ ಇದು? ತನಗೆ ಯಾವ ಸಂಬಂಧ ಈ ಮನೆಯದು? ಸ್ವಾರ್ಥ, ಸಹಾನುಭೂತಿಗಳ ಅಂತರ

ತಿಳಿಯದ ಹುಂಬ ತಾನು!

ಟ್ಯಾಕ್ಸಿ ಕಾಲೋನಿ ರಸ್ತೆಯಲ್ಲಿ ಕುಲುಕುತ್ತ ಮೆಲ್ಲನೆ ಸಾಗಿತು. ರಸ್ತೆಯ ಎರಡು ಅಂಚುಗಳೂ ಸವೆದು ಮಧ್ಯ ಭಾಗ ಉಬ್ಬಿತ್ತು. ವಾಹನದ ಚಲನೆ ಸುಗಮವಾಗಿರಲಿಲ್ಲ. ಹಿಂದಿನ ಸೀಟಿನಲ್ಲಿ ಕನಕ ಸೌಭಾಗ್ಯಳ ಭುಜದ ಆಸರೆಯಲ್ಲಿ ಒರಗಿ ಕುಳಿತಿದ್ದಳು.

ಕಾರ್ತೀಕನತ್ತ ಕೃತಜ್ಞತೆಯ ನೋಟ ಹರಿಸುತ್ತಿದ್ದ ಸೌಭಾಗ್ಯಳ ತಲೆಯಲ್ಲಿ ಮುಗ್ಧ ವಿಚಾರ ಸುತ್ತತೊಡಗಿತು.

ಎರಡು ದಿನಗಳ ಹಿಂದೆ ಮಳೆಯ ರಾತ್ರಿಯಲ್ಲಿ ಅನಿರೀಕ್ಷಿತವಾಗಿ ಪರಿಚಿತನಾದವನು ಇಂದು ಕನಸಿನ ವ್ಯಕ್ತಿ! ಕನಸಿನ ವ್ಯಕ್ತಿಯಂತೆ ಅರ್ಥವಾಗದವನು ಮಿತಭಾಷಿಗೆ ವಿಶಾಲ ಹೃದಯ. ಸಭ್ಯನ ನೋಟದಲ್ಲಿ ಅನುಕಂಪ, ಮರುಕದ ಚಿಲುಮೆ. ಅಂದು ರಾತ್ರಿ ಟ್ಯಾಕ್ಸಿಯಲ್ಲಿ ಆಂಟಿಯ ಮನೆಗೆ ಬಂದಾಗ ಅಕ್ಕ ಪಕ್ಕದ ಮನೆಯವರಿಗೆ ಅದೊಂದು ಕುತೂಹಲದ ಸಂಗತಿ. ತನ್ನನ್ನು ದುರುಗಟ್ಟಿ ನೋಡುವ ಮಂದಿ ಅವರು. ತನ್ನ ಹಾಡು ಅವರಿಗೆ ಬೇಡ. ಕಾರ್ತೀಕ ತನ್ನ ಕಂಠವನ್ನು ಮನಸಾರೆ ಮೆಚ್ಚಿದ್ದ. ರೂತಮ್ಮನ ಕೊಂಕು ಮಾತುಗಳನ್ನು ನುಂಗಿದ್ದ. ಪಪ್ಪನ ಒರಟುತನಕ್ಕೆ ತುಟಿ ಎರಡು ಮಾಡದೆ ಮಮ್ಮಿಯ ಆರೋಗ್ಯಕ್ಕೆ ಕಾಳಜಿ ಪಟ್ಟಿದ್ದ. ಅದ್ಭುತ ಮನುಷ್ಯ ಕಾರ್ತೀಕ!

ಮುಗ್ಧ ವಿಚಾರ ಭ್ರಮಣಕ್ಕೆ ಭಂಗ ಬಂತು. ಕನಕ ಬಡಬಡಿಸಲು ಪ್ರಾರಂಭಿಸಿದಳು. ಅರ್ಧ ತೆರೆದ ಕಣ್ಣುಗಳಲ್ಲಿ ಎಚ್ಚರದಪ್ಪಿ ಆಡುವ ಕನವರಿಕೆಯ ಮಾತುಗಳು.

"ಕಾಯಿಲೆ ವಾಸಿಯಾಗೋದಲ್ಲ. ಯಾರೊ ಮಾಡಿದ ಪಾಪ...ಕೊಲೆ ಮಾಡೋದಕ್ಕಿಂತ ದೊಡ್ಡ ಪಾಪ ಯಾವುದು?.....

ಸೌಭಾಗ್ಯ ಚಕಿತಗೊಂಡಿರಲಿಲ್ಲ. ಕಾಯಿಲೆಯ ತೀವ್ರತೆಯಲ್ಲಿ ಕನಕ ಎಷ್ಟೋ ಬಾರಿ ಬಳಸುತ್ತಿದ್ದ ಪದಗಳು ಅವು.

"ಮಮ್ಮಿ....." ಸೌಭಾಗ್ಯ ಅವಳನ್ನು ಅಲುಗಿಸಿದಳು. ಮತ್ತಷ್ಟು ಭಾರವಾಗಿ ಒರಗಿದ ಕನಕಳ ಹುಚ್ಚು ಪದಗಳ ಪ್ರಯೋಗ ಮುಂದುವರಿಯಿತು.

"ಎಂಥಾ ಮನೆ, ದೇವರಂಥ ಧಣಿ...ತೋಟ.....ಸೇತುವೆ....ಸಿಮೆಂಟ್ ಬಾವಿಗಳು! ....ಉದ್ದನೆಯ ಕಂಬಗಳು.....ನೀರು! ನೀರು!! ನೀರಲ್ಲಿ ಮುಳುಗಿಬಿಟ್ಟ! ....ಇಲ್ಲ. ಇಲ್ಲ...ಮುಳುಗಿಸಿಬಿಟ್ರು ಅವನ್ನ!...ಪರದೇಶಿ ಆಗಿಹೋದ್ರು....."

ಕಾರ್ತೀಕ ಹಿಂದಕ್ಕೆ ತಿರುಗಿ ರೋಗಿಯತ್ತ ಬಾಗಿ ನೋಡಿದ. ಕನಕಳ ದೇಹ ಪೂರ್ತಿಯಾಗಿ ಬೆವರಿನಿಂದ ತೊಯ್ದಿತ್ತು.

ಸೌಭಾಗ್ಯ ಮೊರೆ ಇಡುವಂತೆ ಧ್ವನಿಸಿದಳು.

"ಮಮ್ಮಿಗೆ ವಿಪರೀತ ನೋವು. ಸಹಿಸೋದಿಕ್ಕೆ ಆಗ್ತಾ ಇಲ್ಲ."

ಕನಕ ಅರಿವುಗೆಟ್ಟು ಆಡಿದ ತುಣುಕು ಪದಗಳನ್ನು ಕಾರ್ತೀಕ ತನ್ನಲ್ಲೇ ತಿರುವಿ ಹಾಕಿದ. ಅರ್ಥವಾಗದ ತುಣುಕು ಪದಗಳು. ವೈಶಾಖದ ಬಿಸಿಲು ಅವನನ್ನೂ ಸೊರಗಿಸಿತ್ತು. ಆತಂಕ ಸೊಲ್ಲಡಗಿಸಿತ್ತು.

ಗುಡಿಸಿಲಿನ ಹೊಟೇಲ್ ಮುಂದೆ ಬಂದಾಗ ಚಾಲಕನಿಗೆ ನಿಲ್ಲಿಸಲು ಸೂಚಿಸಿದ. ಕನಕಳ ಮುಖಕ್ಕೆ ನೀರು ಸಿಂಪಡಿಸಿ ತುಸು ನೀರು ಕುಡಿಸಿದಾಗ ಅವಳಲ್ಲಿ ಚೈತನ್ಯ ಕೂಡಿ ಬಂತು. ಅವನ ಮೇಲೆ ದೈನ್ಯ ನೋಟ ಬೀರಿದಳು.

"ಸಾರ್, ಸೌಭಾಗ್ಯ ಮನೆ ಇಲ್ಲದೋಳು. ಅವಳನ್ನು ಎಲ್ಲಿಗಾದ್ರೂ ಕರೆದೊಯ್ರಿ."

ರೋಗಿಯ ಮಾತು ಇಬ್ಬರನ್ನೂ ಬೆಚ್ಚಿಸಿತು.

"ಮಮ್ಮಿ, ಏನು ಹೇಳ್ತಿದೀಯ?" ಅಳುಕಿನಲ್ಲಿ ಕೇಳಿದಳು.

"ನೋವಿನಲ್ಲಿ ಗಾಬರಿ ಆಗಿದೀರಿ. ಯೋಚನೆ ಬೇಡ. ಎಲ್ಲಾ ಸರಿ ಹೋಗುತ್ತೆ." ಕಾರ್ತೀಕ ಸಂತೈಸಿದ.

"ಅವಳನ್ನು ಉಳಿಸಿ. ಪಪ್ಪನ ಹತ್ರ ಇದ್ರೆ ಹಾಳಾಗಿ ಹೋಗ್ತಾಳೆ."

ಬರಹಗಾರ ಮೂಢನಂತೆ ಬಾಲೆಯ ಮುಖ ನೋಡಿದ. ಅವಳಿಗೂ ಅರ್ಥವಾಗದ ಪರಿಸ್ಥಿತಿ.

ರೋಗಿಯ ತುರ್ತು ಮೊರೆ ಬಂತು.

"ಅವಳಿಗೆ ರಕ್ಷಣೆ ಕೊಡ್ತೀರಾ? ನಿಮ್ಮನ್ನೇ ನಾನು ನಂಬಿರೋದು."

ಸತ್ವಹೀನ ಕಣ್ಣುಗಳನ್ನು ಪಕಪಕ ಆಡಿಸಿದಳು. ಅತೀವ ನೋವಿನಿಂದ ನರಳುವ ಪ್ರಾಣಿಯಂತೆ ಕಂಡಳು. ಆ ಪ್ರಾಣಿಗೆ ತನ್ನ ಮರಿಯನ್ನು ರಕ್ಷಿಸಿಕೊಳ್ಳುವ ಅಗಾಧ ಚಿಂತೆ.

ದಾರುಣ ನೋಟಕ್ಕೆ ಬರಹಗಾರ ಕರಗಿದ. ಯೋಚನೆ ಮಾಡಲು ಆಸ್ಪದವಿಲ್ಲದಂತೆ ಯಾವುದೋ ಮಬ್ಬು.

ಕಾರ್ತೀಕ ರೋಗಿಯ ಸ್ವತಹೀನ ಕೈ ಮೇಲೆ ತನ್ನ ಕೈಯಿಟ್ಟ.

"ರಕ್ಷಣೆ ಕೊಡ್ತೀನಿ. ಹೆದರಬೇಡ, ಸೌಭಾಗ್ಯ....ಡ್ರೈವರ್, ಬೇಗ ಆಸ್ಪತ್ರೆಗೆ ಹೋಗ್ಬೇಕು. ಬಹಳ ಬೇಗ."

ಕನಕಳ ತುಟಿ ಅರಳಿತು. ಕಣ್ಣುಗಳಲ್ಲಿ ಬೆಳಕು ಮೂಡಿತು.

* * *

ವೈದ್ಯರೊಂದಿಗೆ ಮಾತಾಡಿ ಕಾರ್ತೀಕ ಮೊಗಸಾಲೆಯ ತುದಿಗೆ ಬಂದು ನಿಂತ.

ತಾನು ಬಿಟ್ಟು ಹೋದಾಗ ಇದ್ದ ಭಂಗಿಯಲ್ಲೇ ಬೆಂಚಿನ ಮೇಲೆ ಕುಳಿತಿದ್ದಳು ಸೌಭಾಗ್ಯ. ಎಡ ಭುಜದ ಮೇಲೆ ತಲೆ ಒರಗಿಸಿದ ಬೊಂಬೆ. ತಾಯಿಯ ಹೋರಾಟದ ಶಕ್ತಿ ಮಗಳಲ್ಲಿ ಕಾಣದು.

ಅವಳ ತಲೆ ನಯವಾಗಿ ಸವರಿದ. ಮೈ ಅಲುಗಿಸಿ ತಲೆ ಎತ್ತಿದಳು ಬಾಲೆ.

"ಹೆಂಗಿದೆ ಮಮ್ಮಿಗೆ?"

ಪ್ರಶ್ನೆಯಲ್ಲಿ ಕಾತರಕ್ಕಿಂತ ನಿರಾಶೆ ಅಧಿಕವಾಗಿತ್ತು. ಒಣನಗೆಯಲ್ಲಿ ತಲೆ ಅಲುಗಿಸಿದ.

"ನಾವು ತಿಳಿದಿದ್ದಕ್ಕಿಂತ ಹೆಚ್ಚಾಗಿ ಹದಗೆಟ್ಟಿದ ಸ್ಥಿತಿ. ಕರುಳು ಹುಣ್ಣು ತೀವ್ರವಾಗಿದೆಯಂತೆ. ಸ್ವಲ್ಪ ದಿನಕ್ಕೆ ಮೊದಲೇ ಡಾಕ್ಟರಿಗೆ ತೋರಿಸಿದ್ರೆ ವಾಸಿ ಆಗ್ತಿತ್ತೇನೊ. ಈಗ ಇಂಜಕ್ಷನ್ ಕೊಟ್ಟಿದ್ದಾರೆ. ಯಾರೂ ಆಕೇನ ಮಾತಾಡಿಸಬಾರದಂತೆ."

ಅವಳ ಮುಖ ಮ್ಲಾನಗೊಂಡಿತು. ಧ್ವನಿ ಕುಗ್ಗಿತು.

"ರಾತ್ರಿ ನಾನು ಮಮ್ಮಿ ಜೊತೆ ಇರ್ತೀನಿ ಅಂತ ಡಾಕ್ಟರಿಗೆ ಹೇಳಿ, ನೆಲದ ಮೇಲೆ ಮಲಗೋದಿಕ್ಕೆ ಜಾಗ ಕೊಟ್ರೆ ಸಾಕು."

"ಇಲ್ಲಿ ಅದಕ್ಕೆ ಅವಕಾಶ ಇಲ್ಲ, ಸೌಭಾಗ್ಯ. ನಿನ್ನ ತಾಯೀನ ಡಾಕ್ಟರು ಚೆನ್ನಾಗಿ ನೋಡ್ಕೊಳ್ತಾರೆ. ನೀನು ಆಂಟಿ ಮನೆಗೆ ಹೋಗು. ಟ್ಯಾಕ್ಸಿ ಮಾಡ್ತೀನಿ."

ನಿರಾಶೆಯ ನಿಟ್ಟುಸಿರು ಹಾಕಿದಳು.

"ಆಂಟಿ ಏನೇನೊ ವಿಪರೀತ ಮಾತಾಡ್ತಾಳೆ. ನನಗೆ ಬೇಜಾರಾಗುತ್ತೆ. ಅವಳಿಗೆ ಮಮ್ಮಿ ಕಾಯಿಲೆ ಅಂದ್ರೆ ಅಸಡ್ಡೆ. ಅವಳೂ ಪಪ್ಪನ ಹಾಗೆ."

ಅವಳ ಮಾತು ಸರಿ ಎನಿಸಿತು. ರೂತಮ್ಮನಿಗೆ ಸಣ್ಣ ವಿಷಯದಲ್ಲೂ ವಿಪರೀತ ಕಲ್ಪನೆ. ಅವನಿಗೆ ಕನಕಳ ರೋಗದ ಚಿಂತೆ ಇಲ್ಲ. ಸೌಭಾಗ್ಯಳಿಗೆ ಅನಗತ್ಯ ನೂರು ಪ್ರಶ್ನೆ ಹಾಕಿ, ನೂರು ವಿಷಯ ಹೇಳಿ ರಾತ್ರಿ ಬೆಳಗು ಮಾಡುತ್ತಾಳೆ.

ಆಸ್ಪತ್ರೆಯ ಆವರಣದಿಂದ ಹೊರಬಂದು ನಿಂತ. ನೀರವತೆ ತುಂಬಿದ ಹತ್ತೂವರೆ ರಾತ್ರಿಯ ಕತ್ತಲು. ದೂರದ ಪೆಟ್ಟಿಗೆ ಅಂಗಡಿಯ ಮುಂದೆ ನಿಂತ ಒಬ್ಬಿಬ್ಬರ ಹೊರತಾಗಿ ಪ್ರದೇಶ ನಿರ್ಜನವಾಗಿತ್ತು.

ಸೋಮವಾರಪೇಟೆಯ ದಿಕ್ಕಿನ ರಸ್ತೆಯಲ್ಲಿ ನಿಧಾನವಾಗಿ ಹೆಜ್ಜೆ ಹಾಕಿದ ತನ್ನ ಬಗೆಗೇ ತಿರಸ್ಕಾರಪೂರ್ಣ ನಗೆ ಬಂತು.

ಬದುಕಿನಲ್ಲಿ ಸಂಭವಿಸಿದ ನಿರಾಶೆಗಳಿಗೆ ತನ್ನ ಪ್ರವೃತ್ತಿ ಕಾರಣ! ಬುಲ್ ಬುಲ್ ತರಂಗದ 'ಚಿಣಿ ಚಿಣಿ' ನಾದ, ಪಕ್ಷಿ ಪ್ರೇಮ, ಏಕಾಂಗಿತನ ಇವೆಲ್ಲಾ ಶರ್ಮಿಳಾಗೆ ಸೆಳೆತ ಹೂಡಿದ್ದು ನಿಜ. ತನ್ನ ಪ್ರವೃತ್ತಿ, ಅಭಿರುಚಿ ತುಸು ಹಳೆಯದಾದಂತೆ, ವೈವಿಧ್ಯತೆ ಕಾಣದೆ ದೂರಕ್ಕೆ ಸಿಡಿದು ಹೋದಳು. 'ಮಣ್ಣಿನ ದೋಣಿ' ಪೂರೈಸಲು

ಬಂದವನು ಇಲ್ಲಿ ಸಲ್ಲದ ಹೊಣೆ ಹೊತ್ತಿರುವೆ. ಹಿಂದೆಂದೂ ಕಾಣದ, ಸಂಬಂಧಿಯಲ್ಲದ, ಕೆಲವು ತಾಸುಗಳಷ್ಟು ಪರಿಚಿತಳಾದ ಬಾಲೆಗೆ ರಕ್ಷಣೆಯ ಆಶ್ವಾಸನೆ ನೀಡಿರುವೆ. ಮಲ್ಲಿಕಾರ್ಜುನ ಅಣಕವಾಡುವಂತೆ ಇದು ಸಮಾಜ ಸೇವೆ! ತಾಯಿ ಈಗ ತನ್ನ ಸ್ಥಿತಿ ನೋಡಿದರೆ ಬೇಸರದಿಂದ ಹಣೆ ಚಚ್ಚುತ್ತಾಳೆ. ಲೌಕಿಕ ತಿಳಿಯದ ಬರಹಗಾರನ ಮೂಢತನ! ಸಾಧನೆ ಸೊನ್ನೆ.

ಹದಿನೈದು ನಿಮಿಷಗಳ ದಾರಿ ಕ್ರಮಿಸಿತ್ತು. ಮೆದು ಸಪ್ಪಳದಿಂದ ಬೆಚ್ಚಿ ಹಿಂದಕ್ಕೆ ಕಣ್ಣು ಹೊರಳಿಸಿದ. ಬೆದರಿದ ಕಾರ್ತೀಕ ನಾಚಿದ.

ಹಿಂದೆ ನಾಲ್ಕು ಗಜಗಳಷ್ಟು ದೂರದಲ್ಲಿ ಸೌಭಾಗ್ಯ ಅಳತೆ ಹೆಜ್ಜೆಗಳಲ್ಲಿ ಬರುತ್ತಿದ್ದಾಳೆ!

"ಒಬ್ಬಳೇ ಅಲ್ಲಿರೋದಿಕ್ಕೆ ಭಯ ಆಯ್ತು. ನಿಮ್ಮ ಹಿಂದೆ ಬಂದ್ಬಿಟ್ಟೆ.

ಭಯಗ್ರಸ್ತ ಶಿಶುವಿನ ಸವಿ ನುಡಿ ಅದು.

"ಎಲ್ಲಿರೋದಿಕ್ಕೆ ಭಯ?" ಎಂದವನು ಎರಡು ಕ್ಷಣಗಳಲ್ಲಿ ತಾನು ಆಸ್ಪತ್ರೆಯಿಂದ ನಡೆದು ಬಂದುದರ ಅರಿವು ಪಡೆದ. ಹೆಗಲೇರಿದ ಜವಾಬ್ದಾರಿ ಆತಂಕ, ಆಯಾಸ ತಂದಿತ್ತು.

"ಆಂಟಿ ಮನೆಗೆ ಹೋಗಿದ್ರೆ ಚೆನ್ನಾಗಿತ್ತು. ಈಗಲೂ ಒಂದು ಟ್ಯಾಕ್ಸಿ ಹಿಡಿದು ಹೋಗೋದಿಕ್ಕೆ ತೊಂದರೆ ಇಲ್ಲ."

"ಅವಳು ಪಿರಿಯಾಪಟ್ಟಣಕ್ಕೆ ಹೋಗಿದ್ರೂ ಆಯ್ತು. ಹೋಗಬೇಕು ಅಂತ ಹೇಳಿದ್ಲು."

ಹೂವರ್ಚಿ ಮರದಡಿಯ ಕಲ್ಲು ಬೆಂಚಿನ ಮೇಲೆ ದೊಪ್ಪನೆ ಕುಳಿತ. ಪಕ್ಕದಲ್ಲಿ ಬೀಡು ಬಿಟ್ಟ ಎತ್ತುಗಳಿಲ್ಲದ ಎರಡು ಗಾಡಿಗಳು. ಹಿಂದೆ ನಿಶ್ಶಬ್ಧ ಹಳೆಯ ಮನೆ. ಆ ಮನೆಯ ಆವರಣದಿಂದ ರಾತ್ರಿ ರಾಣಿಯ ಸುಗಂಧ ಹರಿದುಬಂತು.

ಅವಳು ಸಂಕೋಚದಿಂದ ಬೆಂಚಿನ ತುದಿಯಲ್ಲಿ ನಿಂತಳು.

"ನನ್ನ ಮಮ್ಮೀನ ಆಸ್ಪತ್ರೆ ಸೇರೊ ಹಾಗೆ ಮಾಡಿದ್ದು ತುಂಬಾ ಒಳ್ಳೇದಾಯ್ತು, ಬೇರೆ ಯಾರು ಹೇಳಿದ್ರೂ ಪಪ್ಪ ಅದಕ್ಕೆ ಒಪ್ತಾ ಇರ್ಲಿಲ್ಲ. ನಿಮ್ಮ ಸಹಾಯ, ಉಪಕಾರ ಮರೆಯೋದಿಲ್ಲ."

ಅವಳಿಗೆ ತನ್ನ ಪಕ್ಕದಲ್ಲಿ ಕೂಡಲು ಬೆಂಚಿನ ಮೇಲೆ ಕೈ ತಟ್ಟಿ ಸೂಚಿಸಿದ. ಕಣ್ಣು ಮುಚ್ಚಿ ನಿಂತಿಸಿದ.

ರೋಗಿಯ ಸ್ಥಿತಿ ಉಲ್ಬಣಿಸಿದ್ದರೂ ಪತಿಯ ಇಚ್ಛೆಗೆ ವಿರೋಧವಾಗಿ ಅವಳನ್ನು ಆಸ್ಪತ್ರೆಗೆ ಸೇರಿಸಿದ್ದು ಸರಿಯಲ್ಲ! ಅವಳ ಸ್ಥಿತಿ ಮತ್ತಷ್ಟು ಹದಗೆಟ್ಟರೆ ಬರ್ನಾರ್ಡ್‌ನ

ಕೆಂಗಣ್ಣುಗಳ ಮುಂದೆ ನಿಲ್ಲುವವನು ತಾನು. ಸಂಬಂಧವಿಲ್ಲದ ವಿಷಯಕ್ಕೆ ಕೈ ಹೂಡಿದ ಬೆಪ್ಪ! ಈ ಕೃತ್ಯದಿಂದ ಸ್ವಾಭಿಮಾನಕ್ಕೂ ಧಕ್ಕೆಯಾಗಿದೆ. ಸೌಭಾಗ್ಯಳಿಗೆ ತೃಪ್ತಿಯಾದುದೊಂದೇ ಆದ ಸಮಾಧಾನ. ಉಪಕಾರದ ಮತ್ತೊಂದು ಮುಖ ಸ್ವಾರ್ಥ. ತಾನು ಹಳದಿ ಮನುಷ್ಯ!

ಮರ ಒರಗಿ ಆರಾಮವಾಗಿ ಎರಡೂ ಕೈ ಚಾಚಿದ. ಎಲೆಗಳ ಗರ್ಭದಿಂದ ರಾತ್ರಿ ಕೀಟಗಳ ಮೊರೆತ ಕೇಳಿಬಂತು.

"ತುಂಬಾ ಆಯಾಸ ಆಗಿದೆ ನಿಮಗೆ."

ಅವನ ಸೋತ ಕಣ್ಣುಗಳನ್ನು ನೋಡಿ ನುಡಿದಳು. ಅವಳ ಧ್ವನಿಯಲ್ಲಿ. ವಿಶೇಷ ಅಭಿಮಾನ, ಕೃತಜ್ಞತೆ ಕೂಡಿತ್ತು. ಪಕ್ಕದಲ್ಲಿರುವವನು ಬದುಕಿಗೆ ಆಸಕ್ತಿಯ ಬೆಳಕು ಮೂಡಿಸಿದವನು. ಕಾರ್ತೀಕ ದಯಾರ್ದ್ರ ಹೃದಯಿ, ಅದ್ಭುತ ವ್ಯಕ್ತಿ! ತಾನು ಶಿಷ್ಟಾಚಾರ ತಿಳಿಯದ ಹುಡುಗಿ. ರಾಣಿ ಹೇಳುವಂತೆ ತನ್ನ ನಸುಗಪ್ಪು ರಂಗಿನ ಮುಖ ಯಾರನ್ನೂ ಆಕರ್ಷಿಸದು. ತನ್ನ ಕಂಠಕ್ಕೆ ಈ ಕಾಲದಲ್ಲಿ ಯಾರೂ ಮಾರುಹೋಗಲಾರರಂತೆ. ಕಂಠವು ಹೊತ್ತಿರುವ ಮುಖದಲ್ಲಿ ನಟಿಯ ಚೆಲುವು ಬೇಕಂತೆ. ಎಲ್ಲವನ್ನೂ ಮರೆತು ಕಾರ್ತೀಕನೊಂದಿಗೆ ಹೀಗೆ ಕುಳಿತು ಕಲ್ಪನೆ ಮಾಡಿಕೊಳ್ಳುವುದರಲ್ಲಿ ಸೊಗಸಿದೆ. ಇದು ಒಂದು ಸುಂದರ ಕನಸಿನಂತೆ.

ಅವಳು ಮಡಿಸಿದ ತೋಳಿನ ಆಸರೆಗೆ ಅವನು ತಲೆ ಹೂಡಿದ್ದ. ಅವನು ಚೆನ್ನಾಗಿ ನಿದ್ರೆ ಹತ್ತಿತ್ತು. ಮೆಲ್ಲನೆ ತೋಳು ಸರಿಸಿದಳು. ತಲೆ ಅವಳ ಭುಜಕ್ಕೆ ಇನ್ನಷ್ಟು ಒತ್ತಾಗಿ ಒರಗಿತು.

ಕಾರ್ತೀಕ ಅಲುಗಿದ. ಅರ್ಧ ಎಚ್ಚೆತ್ತು ನೀಳವಾಗಿ ಉಸಿರೆಳೆದುಕೊಂಡ ಕತ್ತಲಿನಲ್ಲಿ ತಾನೆಲ್ಲಿರುವೆನೆಂಬ ಕ್ಷಣದ ಚಿಂತೆ. ರಾತ್ರಿ ಕೀಟಗಳ ಸದ್ದು. ರಾತ್ರಿ ರಾಣಿಯ ಸವಿ ಕಂಪು. ತಲೆಗೆ ಮೆದು ಭುಜದ ಆಸರೆ.

ಕಾರ್ತೀಕನಿಗೆ ಅರೆ ನಿದ್ರೆಯಲ್ಲಿ ತಬ್ಬಿಬ್ಬು. ತಾನಿರುವುದೆಲ್ಲಿ?

ಚೆಲುವಿನ ಪ್ರಿಯತಮ ಶರ್ಮಿಳಾಳೊಂದಿಗೆ ಪ್ರಣಯ ದೋಣಿಯ ಪಯಣ! ......ಶರ್ಮಿಳಾ ದೂರಕ್ಕೆ ಸರಿದು ಮತ್ತೆ ಮಣ್ಣಿನ ದೋಣಿಯಲ್ಲಿ ತಾನು ಏಕಾಂಗಿ ಪಯಣಿಗ. ಅಪಸ್ವರ ಹೊರಡಿಸುತ್ತಿರುವ ಬುಲ್ ಬುಲ್ ತರಂಗ್. ಸ್ವಪ್ನ ದೃಶ್ಯ. ಯಕ್ಷಿಣಿಲೋಕದ ವಿಹಾರ.

ಶರ್ಮಿಳಾ ಕೈ ಹಿಡಿದು ನಡೆದಿದ್ದ. ಚೇತನ ತುಂಬುವ ಸುಗಂಧಭರಿತ ಗಾಳಿ. ಶರ್ಮಿಳಾ ಮುಖದಲ್ಲಿ ನಗೆ ಅರಳಿತು. ಆ ಮುಖವನ್ನು ಸಮೀಪಿಸಿತು. ಸಂತಸ ಅಲೆಅಲೆಯಾಗಿ ಹರಿದು ತೋಳು ಅವಳ ನಡುವನ್ನು ಬಿಗಿಯಾಗಿ ಬಳಸಿತು. ಬೆರಳು ಮೃದು ತುಟಿಗಳನ್ನು ಸವರಿತು. ತುಟಿಗಳನ್ನು ಚುಂಬಿಸಿದ. ಮತ್ತೊಂದು

ಉನ್ಮತ್ತತೆಯ ಚುಂಬನ!....

ಗುಲಾಬಿ ದಳಗಳಲ್ಲ. ಮುಳ್ಳುಗಳು! ಮರುಕ್ಷಣ ಅವನಿಗೆ ಅರಿವು ಕುಟುಕಿತು. ಇವು ಶರ್ಮಿಳಾ ತುಟಿಗಳಲ್ಲ! ಆದರೂ ವಿರೋಧ ಸೂಚಿಸದೆ ತನಗೆ ಸೋತ ಮೃದುವಾದ ಅನ್ಯ ತುಟಿಗಳು.

ಚುಂಬಿಸಿದ್ದು ಸೌಭಾಗ್ಯಳ ತುಟಿಗಳು!

ಹೊಳಪಿನ ಜೋಡಿ ದೀಪ ಅವನ ಕಣ್ಣುಗಳನ್ನು ಕುಕ್ಕಿ ಮಿದುಳಿಗೆ ಮೋಡ ಕವಿಸಿತು. ಯಂತ್ರದ ಗಡಗಡ ಸದ್ದು ನಿಧಾನವಾಗಿ ಇಳಿದು ಅವನನ್ನು ಪೂರ್ಣವಾಗಿ ಎಚ್ಚರಗೊಳಿಸಿತು.

ಕಾರ್ತೀಕನ ಮೈ 'ಜುಂ' ಎಂದು ಧಿಗ್ಗನೆ ಎದ್ದು ನಿಂತ. ಅವನ ತೋಳು ಒತ್ತಿ ನಿಂತಳು ಸೌಭಾಗ್ಯ. ಉಸಿರು ಪಕಪಕ ಆಡಿತು.

"ಪಪ್ಪ, ಇಲ್ಲೇನು ಮಾಡ್ತಾ ಇದ್ದಿ? ಟ್ರಕ್ ಇಲ್ಲಿಯವರೆಗೆ ತಂದಿದೀಯ!" ಮುಗ್ಧೆಯ ಚಕಿತ ಪ್ರಶ್ನೆ.

ಬರ್ನಾರ್ಡ್ ಲೇಖಕನನ್ನು ದುರುಗುಟ್ಟುತ್ತ ಮುಂದೆ ಬಂದ. ಮಗಳತ್ತ ತಿರುಗಿ ಗರ್ಜಿಸಿದ.

"ಮಾತಾಡ್ಬೇಡ!....ಹತ್ತು ಟ್ರಕ್!"

ಕೈ ಚಾಚಿ ಅವಳಿಗೆ ಟ್ರಕ್ ಏರಲು ಬಿರುಸಾಗಿ ಸೂಚನೆ ನೀಡಿದ. ಕಾರ್ತೀಕನ ಕಡೆ ದೈನ್ಯ ನೋಟ ಬೀರುತ್ತಾ ತಂದೆಯ ಒರಟುತನಕ್ಕೆ ಸೊಲ್ಲಡಗಿಸಿ ಟ್ರಕ್ ಏರಿದಳು.

ಟ್ರಕ್ ಹಿಂಬದಿಯಿಂದ ಇಬ್ಬರು ದೃಢದೇಹಿಗಳು ಇಳಿದರು. ಒಬ್ಬನ ಕೈಲಿ ಸ್ಪ್ಯಾನರ್, ಮತ್ತೊಬ್ಬನ ಕೈಲಿ ಡೊಂಕು ಸಲಾಕೆ.

ವಾಹನ ಸರಿದ ಮೇಲೆ ಬರ್ನಾರ್ಡ್ ಅದೇ ಗತ್ತಿನಲ್ಲಿ ಒದರಿದ.

"ನೀನು!....ಹುಡುಗೀನ ಹಾಳು ಮಾಡೊ ಅಯೋಗ್ಯ! ಈ ಆಟ ಮುಗಿಸ್ತೀನಿ."

ಲೇಖಕನ ಮುಖಕ್ಕೆ ಸಾರಾಯಿ ವಾಸನೆ ಬುಸ್ಸನೆ ತೂರಿ ಬಂತು.

"ನಮ್ಮ ಧಣಿ ಮಗಳ ಕೂಡ ಏನು ನಡೆಸ್ದೆ, ಮಗನೆ!" ಸ್ಪ್ಯಾನರ್ ಹಿಡಿದವ ಮುಂದೆ ಬಂದ.

"ಕೇಳೋರಿಲ್ಲಾಂತ ಹುಡುಗೀನ ಸದ್ದಿಲ್ಲದೆ ಕರಕೊಂಡು ಬಂದ...." ಗಹಗಹಿಸಿದ ಮತ್ತೊಬ್ಬ ಧೂರ್ತ.

ಕಾರ್ತೀಕ ನಿಶ್ಚೇಷ್ಟಿತನಾಗಿ ನಿಂತ. ಮೂವರ ಬೆದರಿಕೆಗಿಂತಲೂ ಅಧಿಕವಾಗಿತ್ತು. ತಟ್ಟಿದ ಮಾನಸಿಕ ಆಘಾತ.

"ನನ್ನ ಹೆಂಡತೀನ ಆಸ್ಪತ್ರೆಗೆ ಸೇರಿಸೋದಿಕ್ಕೆ ಯಾಕೆ ಒತ್ತಾಯ ಮಾಡ್ದೇಂತ ಗೊತ್ತಾಯ್ತು. ಸುಮ್ಮನೆ ಕೂಡ್ಲಿಲ್ಲ ನಾನು. ಗೋಣಿಕೊಪ್ಪಲಿಂದ ಬಂದ್ಬಿಟ್ಟೆ. ಆಸ್ಪತ್ರೇಲಿ ನೀನು, ನನ್ನ ಮಗಳು ಇರ್ಲಿಲ್ಲ. ಎಲ್ಲಾ ಕಡೆ ಸುತ್ತಾಡಿ ಈ ಕಡೆ ಬಂದೆ. ನನ್ನ ಮಗಳಿಗೆ ಆಗ್ತಿದ್ದ ಗತಿ ನೋಡ್ದೆ."

ಕಾರ್ತೀಕ ಮುಖ ಎತ್ತಿ ಶಕ್ತಿಗೂಡಿಸಿ ಹೇಳಿದ.

"ನಿಮ್ಮ ಭಾವನೆ, ಕಲ್ಪನೆ ತಪ್ಪು, ಬರ್ನಾರ್ಡ್. ನನಗೆ ಆಯಾಸದಿಂದ ನಿದ್ರೆ ಹತ್ತಿತ್ತು. ನಿದ್ರೆ ಜೋಂಪಿನಲ್ಲಿ....."

ಅವನ ಮಾತು ಕತ್ತರಿಸಿದ ಬರ್ನಾರ್ಡ್.

"ನಿದ್ರೆ ಜೋಂಪಿನಲ್ಲಿ ಆಗಬಾರದ್ದು ಆಯ್ತು."

"ನಾನು ನಲವತ್ತು ವರ್ಷದೋನು. ನಿಮ್ಮ ಮಗಳು ಇನ್ನೂ ಹದಿನಾರು ವರ್ಷದ ಬಾಲೆ."

"ಆದ್ರೇನು? ವಯಸ್ಸಿನ ಲೆಕ್ಕ ಹೆಣ್ಣಿಗೆ. ಗಂಡಸು ಯಾವತ್ತಿಗೂ ಗಂಡಸೇ. ಅರವತ್ತನೇ ವಯಸ್ಸಿನಲ್ಲೂ ಸೀರೆ ಕಂಡ್ರೆ ಸೈ ಅನ್ನೊ ಜಾತಿ."

"ಮುಂದಿ ನವಾಬ್ರು ಪಡ್ಡೆ ಹುಡುಗೀನ ಮದುವೆ ಆಗ್ತಿರ್ಲಿಲ್ವೆ?"

ಧೂರ್ತ ಪುಟಗೊಟ್ಟ.

ಕಾರ್ತೀಕನ ಶಕ್ತಿ ಪೂರೈಸಿತ್ತು. ಸ್ನೇಹಿತನ ವ್ಯಂಗ್ಯ ತಲೆಯಲ್ಲಿ ಮಿಂಚಿತು. ಸೀಸರ್ ಕ್ಲಿಯೋಪಾತ್ರರ ಭೇಟಿ!

ಬರ್ನಾರ್ಡ್‌ನ ಸಾರಾಯಿ ಸೇವನೆಯ ಪರಿಣಾಮವಲ್ಲ. ಇದು ವ್ಯೂಹಕ್ಕೆ ಸಿಕ್ಕಿ ಬಿದ್ದ ಮೂರ್ಖ ತಾನು. ಯಜ್ಞಪಶು!

ಮಗಳ ರಕ್ಷಣೆಗೆ ಕನಕ ಆಶ್ವಾಸನೆ ಪಡೆದುದು, ಕನಸಿನ ಕಾಮನೆ ಹತೋಟಿ ಮೀರಿದ ಕಾಲಕ್ಕೆ ಸರಿಯಾಗಿ ಮತ್ತೇರಿದ ಬರ್ನಾರ್ಡ್‌ನ ಆಗಮನ. ಸೌಭಾಗ್ಯ ಸೊಲ್ಲಡಗಿ ನಿರ್ಗಮಿಸಿದುದು ಎಲ್ಲವೂ ಸಂಚುಗಳ ಸರಪಣಿ!

ಮುಂದಿನ ಮಾತಿಗೆ ಅವಕಾಶ ಕೊಡದಂತೆ ಬರ್ನಾರ್ಡ್ ಹೂಂಕರಿಸಿ ದರ್ಪದಲ್ಲಿ ತೀರ್ಪು ನೀಡಿದ.

"ನನ್ನ ಮಗಳನ್ನು ಸರ್ಕಸ್‌ನಿಂದ ರಾತ್ರಿ ಹೊತ್ನಲ್ಲಿ ಕರಕೊಂಡುಬಂದು ಅವಳ ಆಂಟಿ ಮನೆಗೆ ಬಿಟ್ಟೆ. ಅವಳಿಗೆ ಬರೋದು ಗೊತ್ತಿರಲಿಲ್ಲವೆ? ಮತ್ತೆ ಅವಳನ್ನ ನೋಡೋಕೆ ನನ್ನ ಮನೆಗೆ ಬಂದ. ರೂತಮ್ಮ ಎಲ್ಲಾ ಹೇಳಿದ್ಲು ನನಗೆ. ನನ್ನ ಮಗಳು ಬಡವನ ಮಗಳು. ಮೋಜಿಗೆ ಸಿಗೋ ಹುಡುಗಿ ಅಲ್ಲ. ನಿನ್ನ ಇಂಜಿನಿಯರ್ ಸ್ನೇಹಿತನ್ನ ವಿಚಾರಿಸ್ದೆ. ನಿನಗೆ ಇನ್ನೂ ಮದುವೆ ಆಗಿಲ್ಲಾಂತ ಕೇಳ್ದೆ. ಮಾಡೊ

ತಮಾಷೆಗೂ ಜುಲ್ಮಾನೆ ತೆರಬೇಕು ಅನ್ನೋನು ನಾನು. ಇನ್ನಷ್ಟು ಹುಡುಗಾಟ ನೀನು ಆಡೋಕೆ ಮೊದಲು ನನ್ನ ಹೊಣೆಗಾರಿಕೆ ಕಳಕೊಬೇಕು. ತೊಂದರೆ ಕೊಡದೆ ನನ್ನ ಮಗಳನ್ನು ಎಷ್ಟರಮಟ್ಟಿಗೆ ನೋಡ್ಕೊಳ್ತೀಯ ಅನ್ನೊ ಗ್ಯಾರಂಟಿ ಕೊಡು. ಅವೆಲ್ಲಾ ನಾಳೆ ಹೇಳು. ತಪ್ಪಿಸಿಕೊಳ್ಳೊ ಪ್ರಯತ್ನ ಮಾಡ್ಬೇಡ. ನಾನು ಬಲು ಕೆಟ್ಟ ಆಸಾಮಿ, ಕೊಲೆಗೂ ಹೇಸೋನಲ್ಲ!"

"ಅಂದ್ರೆ ನೀವು ಹೇಳ್ತಾ ಇರೋದು....." ತೊದಲಿದ.

"ಸೌಭಾಗ್ಯನ್ನ ಮದುವೆ ಆಗೋಕೆ ಸಿದ್ಧವಾಗು, ಹುಡುಗ."

ನಲವತ್ತು ವರ್ಷದ ಹುಡುಗ ಗರಬಡಿದು ನಿಂತ.

## ೩

ಕಾರ್ತೀಕ ನೀರಿಗೆ ಕಲ್ಲು ಚೂರು ಎಸೆದ. ಅರ್ಧ ನಿರ್ಮಿತವಾದ ಅಣೆಕಟ್ಟಿನ ಅಡಿಯಲ್ಲಿ ತಡೆಯ ಪಕ್ಕದ ನೀರಿನ ಸುಳಿ ಮೊದಲಿನಂತೆಯೇ ತಿರುಗುತ್ತಿತ್ತು. ಹಿಂದಿನ ರಾತ್ರಿಯ ಘಟನೆ ತಲೆಯಲ್ಲಿ ಸುಳಿ ಎಬ್ಬಿಸಿತು.

ಗರಬಡಿದು ನಿಂತ ಕಾರ್ತೀಕ ಉಸಿರು ಚೆಲ್ಲಿ ಮುಷ್ಟಿ ಬಿಗಿಸಿದ್ದ. ತನ್ನ ಪರವಾಗಿ ಎರಡು ಮಾತು ಆಡಲಿದ್ದ ಸೌಭಾಗ್ಯ ತಂದೆಯ ಗದರಿಕೆಗೆ ಮಣಿದು ಸೊಲ್ಲಡಗಿಸಿ ಟ್ರಕ್‌ನಲ್ಲಿ ಕುಳಿತು ಹೊರಟುಹೋದಳು.

"ನಿಮಗೆ ಹುಚ್ಚೇನು ಬರ್ನಾರ್ಡ್? ಸೌಭಾಗ್ಯನ್ನ ಕಳಿಸಿಬಿಟ್ರಿ. ಅವಳ್ನ ಕೇಳಿದ್ರೆ ವಿಷಯ ತಿಳೀತಿತ್ತು."

ಸಹನೆ ಉಳಿಸಿಕೊಂಡಿದ್ದ ಕಾರ್ತೀಕ. ಆಯುಧಪಾಣಿಗಳಿಬ್ಬರೂ ಮುಂದೆ ಬಂದುದನ್ನು ಕಂಡು ಹೆಜ್ಜೆ ಹಿಂದಿರಿಸಿದ. ಬರ್ನಾರ್ಡ್ ಅವರನ್ನು ತಡೆದು ನಡುವಿಗೆ ಕೈಯಿಟ್ಟು ನಿಂತ.

"ಹುಚ್ಚಾಟ, ಹುಡುಗಾಟದ ವಯಸ್ಸು ಮೀರಿದೆ ನನಗೆ. ಈ ವಿಷಯದಲ್ಲಿ ಆ ಹುಡುಗೀನ ಕೇಳೋದೇನೂ ಇಲ್ಲ. ಅವಳು ಹೇಳೋದೂ ಇಲ್ಲ. ನಿನ್ನ ತಿಳಿಗೇಡಿ ವರ್ತನೆ ಅವಳ ತಾಯಿ ಕಿವಿಗೆ ಬೀಳೋದೂ ಬೇಡ. ಆಗಲೇಹೇಳ್ದೆ ತಪ್ಪಿಸಿಕೊಳ್ಳೊ ಪ್ರಯತ್ನ ಮಾಡಿದ್ರೆ ನಿನ್ನ ಜೀವದೊರಸೆ ಬಿಡೋದಿಲ್ಲ. ಕೊಲೆ ಮಾಡೋದು ನನಗೆ ಹೊಸದಲ್ಲ."

ಗರ್ಜಿಸಿದವನು ಮತ್ತೆ ಕಂಠ ಮೆದುಗೊಳಿಸಿದ.

"ಸೌಭಾಗ್ಯ ಸಾಮಾನ್ಯ ರೂಪದೋಳು ಇರಬೋದು. ಸೊಗಸಾದ ಗುಣವಂತೆ. ನಿನಗೆ ಐಶ್ವರ್ಯ ತರ್ತಾಳೆ....ನನಗೂ."

ಲೇಖಕನನ್ನು ಮೂಕಗೊಳಿಸಿದ. ಕಂಠದ ಒಂದು ಧಾಟಿಯಲ್ಲಿ ಬೆದರಿಕೆ ಮತ್ತೊಂದರಲ್ಲಿ ಯಾವುದೊ ಆಮಿಷ! ಬರ್ನಾರ್ಡ್ ಮಾನವ ತೊಗಲಿನಲ್ಲಿ ಮೃಗದ ಹೃದಯ ಹೊಂದಿದವನು. ಆದರೂ ಯಾವುದೋ ನೋವಿನಲ್ಲಿ ಕನಸು ಕಾಣುತ್ತ ಹುಚ್ಚಾಗಿದ್ದಾನೆ. ಅವನ ಹುಚ್ಚಿಗೆ ಮಣಿದು ತನ್ನ ಬದುಕಿಗೆ ಮುಳ್ಳು ದಾರಿಯ ದಿಕ್ಕು ತೋರಲೆ?

ವಿವೇಚನೆ ಮಾಯವಾಗಿ ಮತ್ತಷ್ಟು. ಮೌನಿಯಾದ, ಸವಿ ಕಂಠದ ಮುಗ್ಧ ಹೃದಯಿ ಸೌಭಾಗ್ಯ ಇಲ್ಲಿ ಉಳಿಯಬಾರದು ಎಂಬುದು ಅವಳ ತಾಯಿಯ ಅಭಿಲಾಷೆ. ಬೇರೊಬ್ಬಳ ಅಭಿಲಾಷೆಯ ಚಿಂತೆ ತನಗೆ! ಹೊಣೆಗಾರಿಕೆ ಬೆನ್ನು ತಟ್ಟುವುದು ತಪ್ಪದು.

ನಿಧಾನವಾಗಿ ಮಾತು ಬಿಡಿಸಿದ.

"ಸೌಭಾಗ್ಯಳಿಗೆ ನಾನು ಏನೂ ಕೆಡಕು ಮಾಡ್ಲಿಲ್ಲ...."

ನಿರ್ಲಕ್ಷ್ಯದಿಂದ ಗಹಗಹಿಸಿದ ಬರ್ನಾರ್ಡ್.

"ನನ್ನ ಹುಡುಗೀನ ಕೆಡಿಸೋ ಎದೆಗಾರಿಕೆ ಯಾರಿಗಿದೆ? ಹುಂ, ಹುಂ "ಜವಾಬ್ದಾರಿ ನಿನಗೆ ವಹಿಸಿದ್ದಾಯ್ತು. ಅದನ್ನ ನಿಭಾಯಿಸೋದು ನೋಡು. ಸರಹದ್ದು ಬಿಟ್ಟು ಹೋದೀಯ. ಎಚ್ಚರಿಕೆ!"

ಮೂವರು ಧೂರ್ತರೂ ಚರಚರ ಹೆಜ್ಜೆ ಹಾಕಿ ಕತ್ತಲಿನಲ್ಲಿ ಕರಗಿ ಹೋದರು. ಆಘಾತ ಕಳೆದು ಹಾರಂಗಿಯವರೆಗೆ ನಡೆದುದೂ ಅರಿವಿಗೆ ಬರಲಿಲ್ಲ. ಸ್ನೇಹಿತ ರಾತ್ರಿಯ ಕೆಲಸದ ಮೇಲೆ ಹೋಗಿದ್ದ. ಹಾಸಿಗೆಯಲ್ಲಿ ಸೋತ ದೇಹ ಚಾಚಿದಾಗ ಹದಗೆಟ್ಟ ತಲೆಯಲ್ಲಿ ಕನಕಳ ಮಾತು ಮಿಂಚಿತು.

'ಸೌಭಾಗ್ಯ ಮನೆ ಇಲ್ಲದೋಳು. ಅವಳನ್ನ ಎಲ್ಲಿಗಾದ್ರು ಕರೆದೊಯ್ರಿ.?

ಮನೆ ಎಂದರೆ ಅವಳ ಅರ್ಥದಲ್ಲಿ ವೈವಾಹಿಕ ಬದುಕು. ಚಾವಣಿ ಅಲ್ಲ. ಕಳಕಳಿಯ ಬೇಡಿಕೆಗೆ ಸಮ್ಮತಿ ನೀಡಿದುದಾಯ್ತು. ಅವಳ ಯಾಚನೆ ನಾಟಕವಲ್ಲ. ರೋಗ ಉಲ್ಬಣಿಸಿದವಳ ಆರ್ತ ಕರೆ.

ಸೌಭಾಗ್ಯ ನಿರ್ದೋಷಿ. ತಾಯಿಯ ಅಸ್ವಸ್ಥತೆ, ತಂದೆಯ ಕಠೋರತೆಗಳ ಮಧ್ಯೆ ನಲುಗಿದ ಬಡಪಾಯಿ. ಅವಳು ತನಗೆ ಐಶ್ವರ್ಯ ತರುವವಳಂತೆ ಐಶ್ವರ್ಯದ ಕನಸು ಕಾಣುವ ಅವಳ ಪಪ್ಪ ತನಗೆ ಒಂದು ಕನಸಿನ ಗಂಟು ತೋರಿದ್ದಾನೆ.

ನಿದ್ರಾವಸ್ಥೆಯಲ್ಲಿ ಮುಖ ಸ್ಪರ್ಶಿಸಿದ ಅವಳ ಸೊಂಪುಗೂದಲು. ಮತ್ತೇರಿಸುವ ರಾತ್ರಿ ರಾಣಿಯ ಮಾಧುರ್ಯ. ಕ್ಷಣದಲ್ಲಿ ನಡೆದ ಅಚಾತುರ್ಯ.... ಚುಂಬನ! ಅಚಾತುರ್ಯಕ್ಕೆ ಕೆಂಪುಕಣಗಲೆ ಹೂ ಗಿಡದ ಮನೆ ವಿಧಿಸಿದ ಜುಲ್ಮಾನೆ ಅಗಾಧ! ಹೌದು, ದೇವತೆಗೆ ಬಲಿ ಹೋಗುವ ಪ್ರಾಣಿಗೆ ತೊಡಿಸುವುದು ಕೆಂಪು ಕಣಗಲೆಯ

ಹೂ ಮಾಲೆಯಂತೆ. ತಾನು ಬಲಿಪಶು!

ಎಂತಹ ಭಯಾನಕ ಕೂಪದಲ್ಲಿ ತಾನು ಇಳಿದುಬಿಟ್ಟೆ!....

ಕಾರ್ತೀಕ ತಲೆ ಎತ್ತಿದ. ಮಲ್ಲಿಕಾರ್ಜುನ ಅಣೆಕಟ್ಟಿನ ಎಡಭಾಗದ ಮೇಲಿನಿಂದ ಚಪ್ಪಾಳೆ ತಟ್ಟಿ ಕರೆಯುತ್ತಿದ್ದ. ವಾಚಾಳಿಯೊಂದಿಗೆ ನಡೆಸುವ ಚರ್ಚೆ ತಲೆನೋವಿಗೆ ಮತ್ತಷ್ಟು ಪೋಷಕ.

ಕೈ ಅಲುಗಿಸಿ 'ಬರಲೊಲ್ಲೆ' ಸೂಚಿಸಿದ. ಜೊಳ್ಳನೆ ಕೃಶವಾಗಿ ಹರಿದ ನದಿಯ ಮಂದ ಓಟದ ಕಡೆಗೆ ಹರಿಯಿತು ದೃಷ್ಟಿ. ಸಮೀಪದ ಪುಷ್ಪಗಿರಿ ಬೆಟ್ಟಗಳಿಂದ ಇಳಿದು ಪೂರ್ವಕ್ಕೆ ಹರಿದ ಹಾರಂಗಿ. ಕಾವೇರಿಯೊಂದಿಗೆ ಸಂಗಮಿಸಲು ಹೊರಟ ನದಿಗೆ ಪ್ರವಹನದಲ್ಲಿ ಆತುರವೇ ಕಾಣದು. ಸಂಗಮಕ್ಕಾಗಿ ಹರಿಯಲೇಬೇಕೆಂಬ ಪ್ರಕೃತಿಯ ಸೆಳೆತಕ್ಕೆ ಒಳಗಾದ ಸಲಿಲ ನುಣುಪು ಕಲ್ಲುಗಳ ಹಾಸಿನ ಮೇಲೆ ನಿಶ್ಶಬ್ದ ತರಂಗಗಳಲ್ಲಿ ಸರಿದಿತ್ತು. ನಿಶ್ಶಬ್ದತೆಯನ್ನು ಭುಗಿಸುವ 'ಚೆಣ್.....ಚೆಣ್' ನಾದ ತರಂಗ. ಅದು ನದಿಯ ಮೊರೆತವಲ್ಲ. ತನ್ನ ಪ್ರೀತಿಯ ವಾದ್ಯ ಬುಲ್ ಬುಲ್ ತರಂಗ್ ಹೊಮ್ಮಿಸಿದ ಶಬ್ದ ತರಂಗಗಳ ಕಲ್ಪನೆ.

ಮನದಲ್ಲೂ ತರಂಗ ಮಾಲೆ. ಸೌಭಾಗ್ಯಳೊಂದಿಗೆ ಮದುವೆ! ಅನಿರೀಕ್ಷಿತವಾದ ಹೆಗಲೇರಿಗಿ ಬದುಕಿನ ಮಹಾ ವೈಚಿತ್ರ್ಯ.

ವಿಚಿತ್ರ ಮದುವೆಯ ಯೋಗ ಈಗ ಕಂಡಿತೆ? ಕಾರ್ತೀಕ ತುಯ್ದಾಡಿದ ನೆನಪಿನ ದೋಣಿಗೆ ಆಡಿ ಇರಿಸಿದ......

ವಿಚಿತ್ರ ಮದುವೆ ಯೋಗವೇ ಕಾಣ್ತಾ ಇಲ್ಲ, ಸ್ವಾಮಿ. ಒಂದುವೇಳೆ ಆಗೋದಾದ್ರೆ ಅದು ಬಲು ವಿಚಿತ್ರ ಮದುವೆ."

ಪಕ್ಷಿಗಳ ಉಲಿ ಕೇಳಲು ಸಾರಕ್ಕಿಯ ಮಾವಿನ ತೋಪಿನಲ್ಲಿ ಕುಳಿತ ಕಾರ್ತೀಕನಿಗೆ ಹಸ್ತಸಾಮುದ್ರಿಕ ಇಪ್ಪತ್ತು ವರ್ಷಗಳ ಹಿಂದೆ ಹೇಳಿದ ಮಾತು ಅದು. ಮಾವಿನ ಮರದಲ್ಲಿ ಮೋಜಿನ ಮರಕೋತಿ ಆಟ ಆಡುತ್ತಿದ್ದ ಬೆಳೆದ ಸಹಪಾಠಿಗಳು 'ಸನ್ಯಾಸಿ' ಕಾರ್ತೀಕನನ್ನು ಛೇಡಿಸಲು ಹಸ್ತಸಾಮುದ್ರಿಕನನ್ನು ಅವನತ್ತ ಕಳುಹಿಸಿದ್ದರು. ಮದುವೆಯೆಂದರೆ ಮಾರುದ್ದ ಸರಿದುಹೋಗುವ ಲೇಖಕ ಅದೇ ಮಾತನ್ನು ತಾಯಿಗೆ ವಿನೋದವಾಗಿ ಪುನರುಚ್ಚರಿಸಿದಾಗ ಅವಳು ಯೋಚನೆಗೆ ಸಿಕ್ಕಿದಳು.

"ವಿಚಿತ್ರ ಮದುವೆ ಅಂದರೆ ಪರವಾಗಿಲ್ಲ. ಯೋಗವೇ ಇಲ್ಲಾಂದ್ರೆ ಹೆಂಗಪ್ಪಾ ಅದು?"

ವಿಚಿತ್ರ ಮದುವೆಯ ಅನುಭವ ಸ್ವತಃ ಪಡೆದ ಸ್ವರ್ಣಮ್ಮನಿಗೆ ಮಗನ ಮದುವೆ ಯೋಗದ ಹೊಸ ಚಿಂತೆ. ವಿಚಿತ್ರ ಮದುವೆಯ ಅರ್ಥ ಸಂಪ್ರದಾಯದಿಂದ ದೂರವಾದುದೆ? ಅನ್ಯ ಜಾತಿಯ ವಧು! ಸ್ವರ್ಣಮ್ಮ ವಿವಾಹದ ಅಸಮತೆ,

ಸಂಪ್ರದಾಯ, ವಿಪರ್ಯಾಸಗಳಿಗೆ ಆಘಾತ ಹೊಂದಬೇಕಿರಲಿಲ್ಲ. ಅವಳ ಮದುವೆ ಸಂಪ್ರದಾಯಬದ್ಧವಾದುದಲ್ಲ. ಗಾಂಧರ್ವ ವಿವಾಹ ಅದು. ಪತಿ ಚೈತ್ರ ಚಿತ್ರಕಾರ. ಶ್ರೀವೈಷ್ಣವ ಸಂಪ್ರದಾಯದವನು. ಅವಳು ನಾಟಕದ ಕಲಾವಿದೆ. ಗದುಗಿನ ಶೈವ ಮತದ ಹೆಣ್ಣು.

ಚೈತ್ರದ ಬೆಂಗಳೂರು ಶೇಷಾದ್ರಿಪುರದ ಸಿನಿಮಾ ಮಂದಿರದ ಹಿಂದಿನ ಕೋಣೆಯಲ್ಲಿ ತೈಲಚಿತ್ರಗಳನ್ನು ರಚಿಸುತ್ತಿದ್ದ. ಹೊರ ಅಂಗಳದಲ್ಲಿ ಚಲನಚಿತ್ರಗಳ ಬೃಹತ್ ಪ್ರಮಾಣದ ನಿಲುವು ಚಿತ್ರಗಳನ್ನೂ ಅಂದವಾಗಿ ಎಳೆಯುತ್ತಿದ್ದ. ನೋಟಕರನ್ನು ಬೆರಗುಗೊಳಿಸುವ ಇಪ್ಪತ್ತೈದು ಅಡಿ ಎತ್ತರದ ಪ್ರಮಾಣಬದ್ಧ ಕೃತಿಗಳು ಅವು.

ಚೈತ್ರ ಬಹುತೇಕ ಚಿತ್ರಕಾರರಂತೆ ಬರಿಗೈ ವ್ಯಕ್ತಿಯಾಗಿರಲಿಲ್ಲ. ತಂದೆ ಬಿಟ್ಟು ಹೋದ ಸಾರಕ್ಕಿ ಗ್ರಾಮದ ಮಾವಿನ ತೋಪು ಅತಿ ದೊಡ್ಡ ಆಸ್ತಿ ಅಲ್ಲವಾದರೂ ಅವನನ್ನು ಕಡೆಯವರೆಗೆ ನೆಮ್ಮದಿಯಿಂದ ಕಾಪಾಡಬಲ್ಲ ವರಮಾನದ ಮೂಲವಾಗಿತ್ತು. ಮಾವಿನ ಸಮುದಾಯದಲ್ಲಿ ಪಕ್ಷಿಗಳ ಹಾರಾಟ, ಉಲಿಗಳಿಗೆ ಮೈಮರೆತು ಕಲಾವಿದ ತುಸುಗಟ್ಟಲೆ ಶಿಲೆಯಾಗಿ ಕೂಡುತ್ತಿದ್ದ.

ನಗರಕ್ಕೆ ಬಂದಿದ್ದ ಗದುಗಿನ ನಾಟಕದ ಕಂಪನಿಗೆ ಹದಿನೈದಡಿ ಎತ್ತರದ ನಿಲುವು ಚಿತ್ರ ರಚಿಸಿ ಕೊಡಲು ಬಂದ ಚೈತ್ರ ಬರಿಗೈಲಿ ಹಿಂತಿರುಗಲಿಲ್ಲ. ಚೆಲುವಿನ ಸುಪುಷ್ಟ ದೇಹದ, ನೀಳ ನಿಲುವಿನ ಕಲಾಕಾರನ ಕುಂಚದ ಆಟವನ್ನು ಬೆಕ್ಕಸಬೆರಗಾಗಿ ನಿಂತು ನೋಡುತ್ತಿದ್ದ ನಾಟಕದ ಕಲಾವಿದೆ ಸ್ವರ್ಣಮ್ಮ ದಿನವೂ ಅವನೊಂದಿಗೆ ಹರಟೆ ಕೊಚ್ಚಿ ಸರಸವಾಡಿ ಕೊನೆಗೊಮ್ಮೆ ಹೃದಯ ಬಿಚ್ಚಿಡುತ್ತಿದ್ದಾಗ ಗಾಬರಿಗೊಂಡ ಕಂಪನೆಯ ಮಾಲೀಕ. ಕಂಪೆನಿಯ ಎಲ್ಲಾ ನಾಟಕಗಳ ಕಥಾನಾಯಕಿಯಾಗಿದ್ದವಳು ಚೈತ್ರನ ಕೈಚಳಕಕ್ಕೆ ಸೋತು ಕಂಪೆನಿಯಿಂದ ಜಾರಿ ಹೋಗುವ ಉತ್ಕಟ ಪರಿಸ್ಥಿತಿ. ಅವನ ಬೆದರಿಕೆಗೆ ಜಗ್ಗದೆ ಪ್ರೇಯಸಿಯನ್ನು ರಕ್ಷಿಸಿಕೊಂಡು ಬರುವುದು ಬಲಶಾಲಿಚೈತ್ರನಿಗೆ ಕಷ್ಟವಾಗಲಿಲ್ಲ. ಹತ್ತಾರು ಹಿತೈಷಿಗಳ ಸಮ್ಮುಖದಲ್ಲಿ ಹೂ ಮಾಲೆಗಳ ವಿನಿಮಯವಾಗಿ ಸ್ವರ್ಣಮ್ಮ ತನ್ನ ನಾಟಕದ ಬದುಕಿಗೆ ಇತಿಶ್ರೀ ಹಾಡಿದವಳು ಕಲಾವಿದನ ನಲ್ಮೆಯ ಬಾಳ ಸಂಗಾತಿಯಾಗಿ ಬಾಳಿದಳು.

ಮರು ವರ್ಷದಲ್ಲಿ ಹುಟ್ಟಿದ ಮಗನಿಗೆ ಚೈತ್ರ ಕಲಾತ್ಮಕವಾದ ಹೆಸರನ್ನಿಟ್ಟ. ಸೊಗಸಾದ  ಹೆಸರು ಕಾರ್ತೀಕ! ಮಿತಭಾಷಿ. ಏಕಾಂತ ಪ್ರಿಯನಾದ ಮಗ ತಾಯಿಯ ಇಚ್ಛೆಯಂತೆ ಕುಂಚ ಹಿಡಿಯದೆ ಓದು ಸಾಗಿಸಿದ. ತಂದೆಯಂತೆಯೇ ಪಕ್ಷಿಪ್ರೇಮಿ. ಸಾರಕ್ಕಿಯ ಮಾವಿನ ತೋಟ ಅವನ ಶಾಂತಿ ಧಾಮ. ಪ್ರೀತಿಯವಾದ್ಯ ಬುಲ್ ಬುಲ್ ತರಂಗದ 'ಚಿಣಿ....ಚಿಣಿ' ರಾಗ ಹೊಮ್ಮಿಸುತ್ತ ಕುಳಿತರೆ ಹೊತ್ತಿನ ಅರಿವು ಹತ್ತದು. ಸ್ಥಗಿತಗೊಳ್ಳದೆ ಸಾಗಿದ ಓದಿನೊಂದಿಗೆ ಕಥೆಗಳ ಬರಹದ ಹವ್ಯಾಸವೂ

ಬೆಳೆದಿತ್ತು. ಲೇಖಕನಿಗೆ ಅದೃಷ್ಟ ಒಲಿದಿತ್ತು. ಬಿ.ಎ. ವಿದ್ಯಾರ್ಥಿಯಾಗಿದ್ದಾಗಲೇ ಕಾರ್ತೀಕ ಪತ್ರಿಕೆಗಳ ಹೆಸರಾಂತ ಲೇಖಕನಾದ. ಆಯ್ದ ಕಥೆಗಳ ಸಂಕಲನ ಹೊರ ಬಂದ ಮೇಲೆ ರಚಿಸಿದ ಪ್ರಥಮ ಕಾದಂಬರಿ 'ಹರಿಯದ ನದಿ.' ನಿರುದ್ಯೋಗ ಸಮಸ್ಯೆಯ ಮೇಲೆ ಹೊಸ ರೀತಿಯ ಹರಿತ ಶೈಲಿಯ ಕೃತಿಗೆ ಕಾದಂಬರಿ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಬಂದಾಗ ಅದರಿಂದ ಮತ್ತಷ್ಟು ಸ್ಫೂರ್ತಿ ತುಂಬಿಕೊಂಡ ಕಾರ್ತೀಕ ಲೇಖನ ತನ್ನ ಬದುಕಿನ ಪಥ ಎಂದು ನಿರ್ಧರಿಸಿದ. ಮಗನ ಪ್ರಗತಿ ತಂದೆಯ ಕಣ್ಣೇರಿಸಿತು. ಲೇಖನಿ ಅವ್ಯಾಹತವಾಗಿ ಹರಿಯಿತು.

ಕಾರ್ತೀಕ ಕಾಲೇಜಿನ ಕಡೆಯ ವರ್ಷದಲ್ಲಿದ್ದಾಗ ಸಂಭವಿಸಿದ ದುರ್ಘಟನೆ ಅದು. ಚೈತ್ರ ನೆರೆಹೊರೆಯ ಕಷ್ಟಗಳಿಗೆ ಸಹಾನುಭೂತಿ ತೋರಿದ ವಿಶಾಲ ಹೃದಯಿ. ಸಹಾಯ ನೀಡುವುದರಲ್ಲಿ ತನ್ನನ್ನೇ ಮರೆಯುವುದುಂಟೆಂದು ಸ್ವರ್ಣಮ್ಮ ಆಗಾಗ್ಗೆ ಹೇಳುತ್ತಿದ್ದುದು ದುರಂತಮಯ ಸತ್ಯವಾಯಿತು.

ಸಾರಕ್ಕಿಯ ಮಾವಿನ ತೋಪಿನ ಪಕ್ಕದ ಜಮೀನಿನಲ್ಲಿ ಸೀಳು ಕಲ್ಲುಗಳನ್ನು ತುಂಬಿದ ಲಾರಿ ಚಲನೆಗೆ ಬಾರದೆ ಸ್ಥಗಿತವಾಗಿತ್ತು. ವಾಹನವನ್ನು ತಳ್ಳಿಕೊಡಲು ಬಂದ ಚೈತ್ರ. ಬೃಹತ್ ಚಿತ್ರಗಳನ್ನು ರಚಿಸಿದ ಚುರುಕಿನ ಆ ಬಲಿಷ್ಠ ಕೈಗಳು ಎಷ್ಟೋ ಬಾರಿ ಅಂತಹ ಸಹಾಯಕ್ಕೆ ಹಾರ್ದಿಕವಾಗಿ ತೆರೆದು ಬಂದಿದ್ದವು. ಆದರೆ ಈ ಬಾರಿ ದೇಹದ ರಕ್ತನಾಳವೊಂದು ತೀವ್ರ ವಿರೋಧ ವ್ಯಕ್ತಪಡಿಸಿತು. ಸ್ಥಳದಲ್ಲಿಯೇ ಅವನನ್ನು ಕುಸಿದು ಬೀಳುವಂತೆ ಮಾಡಿತು. ಸಾರಕ್ಕಿಯ ಮಾವಿನ ತೋಪಿನ ಒಡೆಯ. ಜನಪ್ರಿಯ ಚಿತ್ರಕಾರ ಮರುದಿನವೇ ಕಣ್ಣುಮುಚ್ಚಿದ.

ಕಾರ್ತೀಕ ಪದವೀಧರನಾಗುವ ವೇಳೆಗೆ ಹೆಸರಾಂತ ಕಾದಂಬರಿಕಾರನಾಗಿದ್ದ. ಧಾರಾವಾಹಿ ಲೇಖನಕ್ಕೆ ಪತ್ರಿಕೆಗಳಿಂದ ಹಣ ಬರುತ್ತಿತ್ತು. ಓದುಗರು ಮಾರುಹೋಗುವಂತಹ ನಿರೂಪಣೆ, ಶೈಲಿ, ಓಟ ಅವನ ಕೃತಿಗಳಲ್ಲಿದ್ದವು. 'ಸೀಳು ದಾರಿ' ಕಾದಂಬರಿಯು ಚಲನಚಿತ್ರವಾಗಿ ಶತದಿನಗಳ ಪ್ರದರ್ಶನ ಕಂಡ ಮೇಲೆ ಲೇಖನದ ಮೌಲ್ಯ ಹತ್ತು ಪಟ್ಟು ಏರಿತು. ಹವ್ಯಾಸವಾಗಿ ಮೈಗೂಡಿದ ಬರಹ ಅವನಿಗೆ ವೃತ್ತಿಯಾಗಿ ಉಳಿಯುವಂತಾಯಿತು.

"ಮದುವೆ ಯಾವಾಗಪ್ಪ ಆಗೋದು, ಕಾರ್ತು?"

ಇಪ್ಪತ್ತೇಳರ ಗಡಿ ದಾಟಿದ ಮಗನನ್ನು ಆತ್ಮೀಯವಾಗಿ ಕೇಳಿದಳು ಸ್ವರ್ಣಮ್ಮ. ಬುಲ್ ಬುಲ್ ತರಂಗ್ ಮೀಟುತ್ತ ವಿಹಂಗಮ ಸಮುದಾಯದ ಮೇಲೆ ನೋಟ ಹರಿಸಿದ್ದ ಕಾರ್ತೀಕ ಪಕ್ಕಕ್ಕೆ ತಿರುಗಿ ಪ್ರಶ್ನಾರ್ಥಕವಾಗಿ ಕಣ್ಣೇರಿಸಿದ. ಎಷ್ಟೋ ಸಾರಿ ಕೇಳಿದ ಪ್ರಶ್ನೆಯನ್ನು ತಾಯಿ ಪುನರುಚ್ಚರಿಸಿದಳು.

"ಯೋಗ ಕಂಡಾಗ."

ಹಸ್ತ ಸಾಮುದ್ರಿಕನ ಹೇಳಿಕೆಯನ್ನು ಮೊಟಕಾಗಿ ಹಾಸ್ಯದ ಧಾಟಿಯಲ್ಲಿ ಅವಳ ನೆನಪಿಗೆ ತಂದ.

"ಯೋಗ ಕಾಣೊ ಹಾಗೆ ಮಾಡಲೆ? ರಂಭೇನ ತಂದು ನಾಳೆಯೇ ನಿಲ್ಲಿಸ್ತೀನಿ. ನೀನು ಹುಂ ಅಂದ್ರೆ."

"ರಂಭೇನ ಇಂದ್ರಲೋಕದಲ್ಲೇ ಇರೋಕೆ ಬಿಡಮ್ಮ. ಮನಸ್ಸು ಸರಿ ಅಂದಾಗ ಲೋಕದಲ್ಲಿರೋಳೊಬ್ಬಳನ್ನು ಆರಿಸಿದರೆ ಆಯ್ತು."

ತಾಯಿಯೊಂದಿಗೆ ಅಷ್ಟು ಆಡಿದ್ದೇ ಅವನಿಗೆ ಹೆಚ್ಚಾಗಿತ್ತು. ಆಸೆಯ ಕುಡಿ ಅವಳಲ್ಲಿ ಒಮ್ಮೆಗೇ ಚಿಗುರಿತು.

"ಯಾವೊಳಾದ್ರು ಮನಸ್ಸಿನಲ್ಲಿದ್ರೆ ಹೇಳು."

"ಮನಸ್ಸಿನಲ್ಲಿಲ್ಲ. ತಲೇಲಿರೊ ಹೆಣ್ಣುಗಳು ಕಾಗದದ ಮೇಲೆ ಇಳಿಯೋದಿಕ್ಕೆ...."

"ಸಾಕು."

ಅವನ ನಗೆ ಅವಳಿಗೆ ನಿರಾಶೆ ತಂದಿತು. ಕಾದಂಬರಿಯ ಹೆಣ್ಣುಗಳು ಅವಳ ಕನಸಿನ ಸೊಸೆಯರು! ರೂಪ ತಳೆಯದವರು.

ಕಾರ್ತೀಕನ ಭಾವನೆಯಲ್ಲಿ ಹೆಣ್ಣು ಸೃಷ್ಟಿಯ ಸಮಸ್ಯೆಯಾಗಿ, ಕಲ್ಪನೆಯಾಗಿ ಉಳಿದಳು. ಆ ಸಮಸ್ಯೆಯನ್ನು ಬಿಡಿಸುವ, ಕಲ್ಪನೆಯನ್ನು ನಿಜತ್ವಕ್ಕೆ ಕಡೆಯುವ ಚಿಂತೆಯೂ ಅವನಿಗೆ ಹುಟ್ಟದು. ಗಾಳಿಗೆ ತೂಗಾಡುವ ಹಳದಿಗೆಂಪಿನ, ಹಸಿರು ಮಾವಿನ ಕಾಯಿಗಳನ್ನು ನೋಡುವಾಗ ಅನಿಸುತ್ತಿತ್ತು. ಒಂದೇ ಮರದ ವಿವಿಧ ಬಣ್ಣಗಳ ಕಾಯಿಗಳಂತೆ ಪ್ರಕೃತಿಯಲ್ಲಿ ಹೆಣ್ಣಿನದು ವಿಭಿನ್ನ ಸೃಷ್ಟಿ. ಗಂಡಸಿನ ಬದುಕಿಗೆ ಅದು ಪೂರಕ ಎನ್ನುವ ಭಾವನೆ ಅರ್ಥರಹಿತ.

ಪಕ್ಷಿಗಳ ಚಿಲಿಪಿಲಿಯ ಇಂಚರ ಅವನಿಗೆ ಬಹುದಿನ ಸಿಗಲಿಲ್ಲ. ನಗರದ ಅಭಿವೃದ್ಧಿಗೆ ಸಾರಕ್ಕಿಯ ಮಾವಿನ ತೋಪು ಕೈ ಬಿಟ್ಟು ಹೋದಾಗ ದೇಹದಿಂದ ಹೃದಯವನ್ನು ಬೇರ್ಪಡಿಸಿದಂತಾಯಿತು. ಜಯನಗರದ ಬಡಾವಣೆಯಲ್ಲಿ ಸಾರಕ್ಕಿಯ ಹೆಸರು ಮಾತ್ರ ಉಳಿದುಕೊಂಡಿತು.

ಬುಲ್ ಬುಲ್ ತರಂಗ್ ಹಾಗೂ ಬರಹದಲ್ಲಿ ಮುಳುಗುವ ಮಗನನ್ನು ನಯವಾಗಿ ಒತ್ತಾಯಿಸುತ್ತ ಸೊಸೆಯ ಕನಸು ಕಂಡು ಸ್ವರ್ಣಮ್ಮ ಬೇಸರಗೊಳ್ಳುವ ಹೊತ್ತಿಗೆ ಕಾರ್ತೀಕ ಮೂವತ್ತೊಂಬತ್ತು ವರ್ಷ ದಾಟಿದ್ದ! ಹಸ್ತಸಾಮುದ್ರಿಕ ನುಡಿದಂತೆ ಇನ್ನು ಮಗನಿಗೆ ವಿವಾಹದ ಯೋಗವಿಲ್ಲ ಎಂಬುದು ಖಚಿತವಾಗಿತ್ತು.

ಹೆಣ್ಣಿನ ಗೆಲುವು ನಿರೂಪಿತವಾದ ಎರಡು ಕೃತಿಗಳು ಹೊರಬಂದಾಗ ಸ್ವರ್ಣಮ್ಮ ಹುಬ್ಬೇರಿಸಿದಳು. ಮಗನ ಸ್ವಭಾವ ವೈಚಿತ್ರ್ಯದಲ್ಲಿ ಬದಲಾವಣೆ! ಅದರೊಂದಿಗೆ

ಆಸೆಯು ಕೊನರಿತು. ಓದುಗರಲ್ಲಿ ಹೆಣ್ಣುಗಳಿಂದಲೇ ಹೆಚ್ಚಾಗಿ ಬರುತ್ತಿದ್ದ ಪತ್ರಗಳು, ಅವನ ಭೇಟಿಗಾಗಿ ಕಾಲೇಜು ಕನ್ಯೆಯರು ಕಾತರತೆ ತೋರುವುದು, ಸಭೆಗಳಲ್ಲಿ ಮಾತನಾಡಲು ನಿಂತಾಗ ಹಿಗ್ಗಿನ ಕೂಗು ಹಾಕುವುದು ಕಂಡಾಗ ಮಗ ಮಹಿಳಾ ವೃತ್ತದಿಂದ ಪಾರಾಗುವುದು ಹೇಗೆಂಬ ಚಿಂತೆ. ಕಾರ್ತೀಕನಿಗೆ ಮೂವತ್ತೊಂಬತ್ತರ ನಂತರ ಬದುಕಿನಲ್ಲಿ ಹೊಸ ಮಜಲು!

ಹೊಸ ಮಜಲು ಏರುಪೇರಾಯಿತು. ವೇಶ್ಯಾ ಸಮಸ್ಯೆಯ ಮೇಲೆ 'ಮುಂಬೆಳಕಿನ ತಾರೆ' ಕಾದಂಬರಿ ಹೊರಬಂತು. ಮಹಿಳೆಯರನ್ನು ಕೆರಳಿಸಿದ ಕೃತಿ ಆದು. ಪತ್ರಿಕೆಗಳಲ್ಲಿ ಕಟು ವಿಮರ್ಶೆಗೆ ಸಿಕ್ಕಿದ ಕಥಾ ವಸ್ತು. ಅವನು ಹಿಂದಿನ ಬರಹಗಳಿಗೆ ಸೋತು, ಮಾತುಗಳಿಗೆ ಹಿಗ್ಗಿದ ಹುಡುಗಿಯರ ಗುಂಪು ಕಾಲೇಜಿನ ಮುಂದಿನ ರಸ್ತೆಯಲ್ಲಿ ಅವನನ್ನು ಘೇರಾಯಿಸಿತು. ಲೇಖಕನಿಗೆ ಧಿಕ್ಕಾರದ ಕೂಗು ಹಾಕಿತು. 'ಮುಂಬೆಳಕಿನ ತಾರೆ' ಕಾದಂಬರಿಯ ಪ್ರತಿಯನ್ನು ಅವನ ಮುಂದೆಯೇ ಸುಟ್ಟು ಬೂದಿಯನ್ನು ಅವನ ಕೆನ್ನೆಗೆ ಸವರಿತು ದಿಟ್ಟ ಹೆಣ್ಣು. ಲೇಖನದ ಪಥದಲ್ಲಿ ಪ್ರಥಮವಾಗಿ ವಿರೋಧಕ್ಕೆ ಗುರಿಯಾದ ಕಾರ್ತೀಕ ವಿಗ್ರಹವಾಗಿ ನಿಂತಿದ್ದ.

"ಡೌನ್ ವಿತ್ ಕಾರ್ತೀಕ .....!"

ಗಂಟಲು ಹರಿಯುವಂತೆ ಅರಿಚಿತು ಗುಂಪು.

"ತ್ರೀ ಚೀರ್ಸ್ ಟು ಶರ್ಮಿಳಾ....!"

ಕಾದಂಬರಿಗೆ ತೀವ್ರ ಪ್ರತಿಕ್ರಿಯೆ ವ್ಯಕ್ತಪಡಿಸಿದ ಶರ್ಮಿಳಾಗೆ ಮೂರು ಸಾರಿ ಒಕ್ಕೊರಲಿನಲ್ಲಿ ಜಯಘೋಷ ಮಾಡಿ ಸಮುದಾಯ ಸರಿದು ಹೋಯಿತು.

ಕೆನ್ನೆಯ ಕಪ್ಪು ಒರೆಸಿ ಮಾತಿಲ್ಲದ ಹೆಜ್ಜೆ ಸರಿಸಿದ ಕಾರ್ತೀಕ ಮತ್ತೆ ಹೆಣ್ಣನ್ನು ದೂರ ಮಾಡಿ ಶಿಲಾಮೌನಿಯಾದ. ಹೆಣ್ಣು ಬರಹಕ್ಕೆ ನೀರಸ ವಸ್ತು!

ಘಟನೆ ನಡೆದ ಎರಡು ವಾರಗಳ ಮೇಲೆ ಕಾರ್ತೀಕ ರಸೆಲ್ ಮಾರ್ಕೆಟ್ ಪ್ರವೇಶದಲ್ಲಿ ವಿರೋಧಿಯನ್ನು ಕಂಡ. ಶರ್ಮಿಳಾ! ಸ್ನೇಹಿತೆಯರಿಂದ ಭಲೆ ಎನಿಸಿಕೊಂಡು ತನ್ನನ್ನು ಅಪಮಾನಗೊಳಿಸಿದವಳ ಮುಖದಲ್ಲಿ ಅಭಿಮಾನದ ಛಾಯೆ. ಅರಳಿದ ಉತ್ಸಾಹ.

"ಮಿಸ್ಟರ್ ಕಾರ್ತೀಕ ..."

ಬಾಯಿಗೆ ಬೆರಳು ಅಡ್ಡವಾಗಿರಿಸಿ ಇಂಪಾಗಿ ಕರೆದಳು. ಕಾರ್ತೀಕ ಹಿಂದಕ್ಕೆ ನೋಡಿದ. 'ಮುಂಬೆಳಕಿನ ತಾರೆ' ಪ್ರತಿಯನ್ನು ಹತ್ತಾರು ಗೆಳತಿಯರ ಮುಂದೆ ಸುಟ್ಟ ಬಿರುಸು ಮುಖದ ಹೆಣ್ಣು ಹುಲಿ! ಆ ಬಿರುಸು ಮುಖ ಈಗ ಸೌಮ್ಯವಾಗಿದೆ. ಕರೆಯಲ್ಲಿ ರಾಗವಿದೆ....ಗುಂಪಿನಿಂದ ಸರಿದುಬಂದ ಒಂಟಿ ಚಿಗರೆ! ಹೆಣ್ಣಿನ ಹತ್ತಾರು ವೇಷಗಳಲ್ಲಿ ಇದೂ ಒಂದು. ಯಾವುದೋ ಸ್ವಾರ್ಥ ಸಾಧನೆಗೆ ಹೂಡಿದ ನಾಟಕ.

ಕಾರ್ತೀಕ ಮುಖ ಮುಂದು ಮಾಡಿ ಹೆಜ್ಜೆ ಸರಿಸಿದ. ಶರ್ಮಿಳಾ ಧಾವಿಸಿ ಬಂದಳು. ಜನಸಂದಣಿಯಲ್ಲಿ ಆತ್ಮೀಯಳಂತೆ ಅವನ ಕೈ ಹಿಡಿದಳು.

"ನನ್ನ ಕ್ಷಮಿಸಿ, ಕಾರ್ತೀಕ . ಅವತ್ತು ಅವಮಾನ ಮಾಡ್ಬಿಟ್ಟೆ. ಗೆಳತಿಯರ ಜೊತೆ ಇದ್ದಾಗ ನನಗೆ ಅದೇನೊ ಆವೇಶ, ಹುಚ್ಚು. ಅದೇ ಗೆಳತಿಯರ ಗುಂಪಿನ ಮುಂದೆ ನಿಮ್ಮ ಕ್ಷಮೆ ಬೇಡ್ತೀನಿ."

ಯಾಚನೆ ಅವನನ್ನು ಅಲುಗಿಸಲಿಲ್ಲ. ಹೆಣ್ಣಿಗೆ ಸ್ಥಿರತೆ ಎಲ್ಲಿ?

ತುಟಿ ಎರಡು ಮಾಡದೆ ಅದೇ ಮೌನದಲ್ಲಿ ಮಾರ್ಕೆಟ್‌ನಲ್ಲಿ ನಡೆದ. ಬೆಕ್ಕು, ನಾಯಿಗಳ ಮಾರಾಟದ ವಿಭಾಗ ದಾಟಿ ಹೋದ. ಕತ್ತರಿಸಿ ತೂಗು ಹಾಕಿದ ಮಾಂಸದ ರಣದೃಶ್ಯದ ಮೇಲೆ ದೃಷ್ಟಿ ಹೂಡಿ ಮುಖ ಸೊರಗಿಸಿದ. ಮೆಟ್ಟಿಲಿನ ಪಕ್ಕದಲ್ಲಿ ಸಾಲುಗಟ್ಟಿದ ಮೀನಿನ ಬುಟ್ಟಿಗಳ ಕಡೆ ಕಣ್ಣು ಹರಿಯಿತು.

"ನಿಮಗೆ ಮೀನು ಇಷ್ಟ ಅಂತ ಕಾಣುತ್ತೆ."

ಬೆನ್ನಿಗೆ ಬಂದಿದ್ದ ಶರ್ಮಿಳಾ ತಾನು ಕೊಂಡಿದ್ದ ಮೀನಿನ ಬಣ್ಣದ ಬುಟ್ಟಿ ಎತ್ತಿ ತೋರಿದಳು. ಲೇಖಕನಿಗೆ ಕೊಂಕದ ಮೌನ.

"ನಿಮಗೆ ಬಹಳ ಕೋಪ ಬಂದಿದೆ. ಹೆಣ್ಣು ಜಾತೀನ ಸಾಮೂಹಿಕವಾಗಿ ಸುಡುವಷ್ಟು ಕೋಪ! ಮುಂದಿನ ಕಥೆಯಲ್ಲಿ ಕೆಟ್ಟ ಹೆಣ್ಣು ವಿವರಿಸೋವಾಗ ನನ್ನ ಹೆಸರೇ ತೊಗೊಳ್ಳಿ...."

ಎಡಬಲ ನೋಡದೆ ಕಾರ್ತೀಕ ಬಿರುಹೆಜ್ಜೆ ಹಾಕಿ ಪಕ್ಷಿಗಳ ಮಾರಾಟದ ಭಾಗಕ್ಕೆ ಬಂದು ಎರಡೇ ಮೆದು ಮಾತುಗಳಲ್ಲಿ ಪಂಜರ ಎತ್ತಿಕೊಂಡು ಹಣ ನೀಡಿ ಹೊರಬಂದ.

"ನೀವು ಮನುಷ್ಯ ದ್ವೇಷಿ! ಪಕ್ಷಿ ಭಕ್ಷಕ ಕೂಡ! ರೋಷದಿಂದ ಹೇಳಿ ತಲೆ ಹಿಂದಕ್ಕೆ ಕೊಡವಿ ಹೊರಟುಹೋದಳು.

ಎರಡು ದಿನಗಳ ನಂತರ ಅವಳು ಅದೇ ತಾಣದಲ್ಲಿ ಅವನನ್ನು ಕಂಡಾಗ ಚಕಿತ, ಶೋಧನಾ ದೃಷ್ಟಿಯಲ್ಲಿ ಮುಖ ಓರೆ ಮಾಡಿದಳು. ಅವಳ ಮಾತಿಗೆ ಅವನದು ಅದೇ ಮೂಕತನದ ಪ್ರದರ್ಶನ. ತುಟಿ ಬಿಚ್ಚದೆ ಪಕ್ಷಿ ಪಂಜರ ಹಿಡಿದು ಹೊರಬಿದ್ದ.

ಕಾರ್ತೀಕ ಪಕ್ಷಿಗಳ ಮೇಲೆ ಪ್ರಯೋಗವೇನು ನಡೆಸುತ್ತಿದ್ದಾನೆ? ಶರ್ಮಿಳಾ ತಲೆ ಕೆಡಿಸಿಕೊಂಡಳು.

ಆಟೋರಿಕ್ಷಾದಲ್ಲಿ ಹೊರಟವನನ್ನು ಅವಳು ಕುಳಿತ ಮತ್ತೊಂದು ಆಟೋರಿಕ್ಷಾ ಹಿಂಬಾಲಿಸಿತು. ಸಾಕಷ್ಟು ದೂರ ಚಲಿಸಿದ ನಂತರ ಜಯನಗರದ ಸಾರಕ್ಕಿಯ

ಬಳಿ ಇಳಿದು ಲೇಖಕನನ್ನು ದೂರದಲ್ಲಿ ನಿಂತು ನೋಡಿದಳು. ನಿಶ್ಶಬ್ದವಾಗಿ ಹಿಂಬಾಲಿಸಿದಳು.

ಪಕ್ಷಿಗಳ ಇಂಚರ. ಬುಲ್ ಬುಲ್ ತರಂಗದ 'ಚಿಣಿ ಚಿಣಿ' ನಾದ ಎರಡಕ್ಕೂ ಸೊಗಸಿನ ಚೌಕಟ್ಟಾಗಿದ್ದ ಮಾವಿನ ತೋಪು ಈಗ ಬಟಾಬಯಲು ಹಂಚಿದ ನಿವೇಶನಗಳನ್ನು ಬೇರ್ಪಡಿಸಿ ತೋರುವ ಬಾಂದು ಕಲ್ಲುಗಳು.

ಕಾರ್ತೀಕ ಬಯಲಿನಲ್ಲಿ ನಿಂತು ಪಂಜರದಿಂದ ಮೆಲ್ಲನೆ ಮೈನಾಹಕ್ಕಿ ತೆಗೆದ. ಹಿಡಿಯಲ್ಲಿ ಮೃದುವಾಗಿ ಅವುಚಿದ ಪಕ್ಷಿಯನ್ನು ಮುತ್ತಿಟ್ಟು ಆಕಾಶಕ್ಕೆ ತೂರಿದ. ಬಂಧನದಿಂದ ಮುಕ್ತಿ ಹೊಂದಿದ ವಿಹಂಗಮ ಗಾಳಿಯಲ್ಲಿ ಸುಗಮವಾಗಿ ರೆಕ್ಕೆ ಆಡಿಸಿ ತೇಲಾಡುತ್ತ ಮೋಡಗಳಲ್ಲಿ ವಿಲೀನವಾದಾಗ ಕಾರ್ತೀಕ ತೃಪ್ತಿಯಿಂದ ಉಸಿರು ಹಾಕಿ ಹಾರ್ದಿಕ ಮುಗುಳುನಗೆಯೊಂದಿಗೆ ಹಿಂದಕ್ಕೆ ತಿರುಗಿದ.

ಬೆನ್ನಿಗೇ ಬಂದು ಇಪ್ಪತ್ತು ಗಜಗಳ ಹಿಂದೆ ನಿಂತ ಶರ್ಮಿಳಾ!

ಶರ್ಮಿಳಾ ಈಗ ಆತುರದಿಂದ ಧಾವಿಸಿ ಬರಲಿಲ್ಲ. ತಲೆ ಬಾಗಿಸಿ ವಿನ್ರಮತೆಯಿಂದ ದೇವಾಲಯ ಪ್ರವೇಶಿಸುವ ಭಕ್ತೆಯಂತೆ ಅಡಿ ಇರಿಸಿದಳು.

"ಕಾರ್ತೀಕ, ನಾನು....ನನಗೆ ಇವತ್ತು ನಿಮ್ಮ ಹೃದಯದ ದರ್ಶನ ಆಯ್ತು. ನೀವು ಮನುಷ್ಯ ಪ್ರೇಮಿ, ಪಕ್ಷಿ ಪ್ರೇಮಿ. ಪಕ್ಷಿಯ ಬಂಧನವನ್ನೂ ಸಹಿಸೋರಲ್ಲ."

ತೊದಲು ನುಡಿಯೊಂದಿಗೆ ಅವನ ಕೈ ಹಿಡಿದು ಅದರರದಿಂದ ಒತ್ತಿದಳು. ಅವನಿಂದ ಆಗಲೂ ಮಾತು ಹೊರಡದು.

"ಕ್ಷಮಿಸಿ ಅಂತ ಮತ್ತೆ ಬೇಡ್ತಾ ಇದೀನಿ. ನಿಮ್ಮನ್ನ ಅರ್ಥ ಮಾಡ್ಕೊಂಡೆ. ಎರಡು ಮಾತು ಆಡೋಕೆ ಅವಕಾಶ ಕೊಡಿ."

ಕಳೆದ ತಿಂಗಳಿಂದ ವಾರಕ್ಕೆರಡು ಪಕ್ಷಿಗಳನ್ನು ಪಂಜರದಿಂದ ವಿಮುಕ್ತಗೊಳಿಸಿ ಅದರಿಂದ ಸಂತೋಷಪಡುತ್ತಿದ್ದ ಕಾರ್ತೀಕ ಅವಳನ್ನು ನೀರಸವಾಗಿ ನಿಟ್ಟಿಸಿದ. ಹೃದಯದ ಒಂದಂಶವನ್ನು ನಿಧಾನವಾಗಿ ಅರಿತವಳೊಂದಿಗೆ ಮಾತಾಡಲು ಮನ ಸಮ್ಮತಿಸಿತು. ಮಾತು ಹರಿದುಬಂತು....ಆ ಮಾತು ನಿಲ್ಲುವುದೇ ಕಷ್ಟವೆಂಬಂತೆ ಸಾಗಿತು.

ಸ್ವರ್ಣಮ್ಮ ಬೆರಗಾದಳು. ಅವರಿಬ್ಬರದು ಯಾವುದೊ ಸತತ ಚರ್ಚೆ, ಸತತ ತಿರುಗಾಟ, ಅವನ ಬುಲ್ ಬುಲ್ ತರಂಗದ ನಾದಕ್ಕೆ ಅವಳು ತನ್ಮಯೆ. ಮಿತಭಾಷಿಯನ್ನು ಮತ್ತೆ ಮಾತಿಗೆ ಹೂಡಿ, ಹೆಣ್ಣಿನೊಂದಿಗೆ ಸಹಬಾಳಿನಲ್ಲಿ ಸೊಗಸಿದೆ ಎಂದು ತೋರಿದ ಚದುರೆಯನ್ನು ಮನಸಾರೆ ಒಪ್ಪಿದಳು ಸ್ವರ್ಣಮ್ಮ.

"ಶರ್ಮಿಳಾ ನಿನ್ನ ಅರ್ಥ ಮಾಡ್ಕೊಂಡಿದಾಳೆ. ನನಗೆ ಹಿಡಿಸಿದಾಳೆ ಹುಡುಗಿ. ಅವಳೂ ಒಪ್ಪೊ ಹಾಗೆ ಕಾಣುತ್ತೆ. ಈ ಮದುವೆ ನಡೆದ್ರೆ ನನಗೆ ಸಂತೋಷ."

ಮಗನ ವಿವಾಹದ ಕನಸು ನನಸಾಗುವಂತೆ ಕಂಡಿತ್ತು. ಕಾರ್ತೀಕ ಏರುಪೇರಿಲ್ಲದೆ ನುಡಿದ.

"ನನ್ನ ಅರ್ಥ ಮಾಡ್ಕೊಂಡೋಳು ನನ್ನ ಹೆಂಡತಿಯೇ ಆಗಬೇಕೇನು?"

ಅವನ ತರ್ಕ ಮುಂದುವರಿಯಲು ಬಿಡದೆ ತನ್ನ ಮಾತು ಮುಂದು ಮಾಡಿದಳು.

"ಚೆಲುವಾದ ಹುಡುಗಿ. ಸಿನಿಮಾ ನಟಿಯ ಹಾಗೆ ಕಾಣ್ತಾಳೆ ಶರ್ಮಿಳಾ."

ನಾಟಕದ ಕಲಾವಿದೆಯಿಂದ ಸ್ವಾಭಾವಿಕವಾಗಿ ಬಂತು ಪ್ರಶಂಸೆ.

"ಆ ಮಾತುಗಾತಿ ಸಿನಿಮಾ ನಟಿಯಾಗೋದೆ ಒಳ್ಳೇದು ಅಂತ ಅನ್ಸತ್ತೆ. ಪ್ರಳಯಾಂತಕ ಬುದ್ಧಿಯ ಜಾತಿ ನನ್ನ ಮೇಲೆ ಮೋಡಿ ಹಾಕೋಕೆ ಪ್ರಾರಂಭಿಸಿದೆ. ಅವಳಿಗೆ ಇಪ್ಪತ್ತೈದು. ನಾನು ನಲವತ್ತು ಮುಟ್ಟಲಿಕ್ಕೆ ಬಂದಿದೀನಿ. ಎರಡು ಧ್ರುವಗಳ ಮಿಲನ!"

"ಅಂತಹ ಮಾತೆಲ್ಲ ಕಾದಂಬರಿಗೆ ಮೀಸಲಿಡು. ಈಗ ನಿನಗೆ ರಾಜಯೋಗ. ರಾಜರೆಲ್ಲ ಏರಿದ ವಯಸ್ಸಿನಲ್ಲೇ ಚೆಲುವೆಯರನ್ನ ಮದುವೆ ಆಗೋದು."

ರಸಿಕತೆಯ ನಗೆ ತೋರಿದಳು. ರಸಿಕಳ ಮಗನಿಗೆ ಇನ್ನೂ ವಿರಕ್ತತೆ ಕರಗದು.

"ರಾಜರ ಚಪಲ ನನಗಿಲ್ಲ. ನನಗೆ ವಯಸ್ಸು ಮೀರಿದೆ."

ಗಂಭೀರವಾದ ಮಾತಿಗೆ ಅವಳು ಜಗ್ಗಲಿಲ್ಲ. ಶರ್ಮಿಳಾ ಜೊತೆಗೆ ಮಾತಾಡಿ ಅವಳ ಇಚ್ಛೆ ಅರಿತಾಗ ಮಗನನ್ನು ಬಿಡದೆ ಪಟ್ಟು ಹಿಡಿದಳು. ಮಗನನ್ನು ಅರಿತು ಗೆದ್ದ ಸೊಗಸಿನ ಹುಡುಗಿ. ಈ ಅವಕಾಶಕ್ಕೆ ಕೈ ತಪ್ಪಿ ಹೋದರೆ ಮಗನಿಗೆ ಇನ್ನು ವಿವಾಹ ಇಲ್ಲ.

ಸ್ವರ್ಣಮ್ಮ ಕಡೆಗೂ ಮಗನನ್ನು ಒಪ್ಪಿಸಿದಳು.

"ಅವಳು, ನಾನು ನಡೆದು ಹೋಗ್ತಿದ್ರೆ ಗಂಡ–ಹೆಂಡತಿ ಅನ್ನೊ ಭಾವನೆ ಯಾರಿಗೂ ಬರಲ್ಲ. ಅಂತಹ ಸಂದರ್ಭದಲ್ಲಿ ಅವಳಿಗೆ ಮನಸ್ಸು ಕೆಟ್ಟರೆ ತಪ್ಪಿನ ಭಾರ ನನ್ನ ಮೇಲೆ."

"ಜನರ ಭಾವನೆ, ದೃಷ್ಟಿ ತಿದ್ದೋದು ಸಾಧ್ಯವೆ, ಕಾರ್ತೀಕ? ನಿನ್ನ ಚಿಂತೆ ಜನಕ್ಕೆ ಯಾವತ್ತು ಬೇಕಿತ್ತು."

ವಿವಾಹಕ್ಕೆ ಒಂದು ವಾರ ಉಳಿದಂತೆ ಶರ್ಮಿಳಾಗೆ ಅಭಿಪ್ರಾಯ ತಿಳಿಸಿದ.

"ನಮ್ಮಮ್ಮ ಗಾಂಧರ್ವ ವಿವಾಹ ಮಾಡಿಕೊಂಡವಳು. ನಾವು ಸರಳವಾಗಿ ದೇವಸ್ಥಾನದಲ್ಲಿ ಮದುವೆ ಆದ್ರೆ ಚೆಂದ ಅಂತ ಅವಳ ಅಭಿಪ್ರಾಯ."

"ಹುಂ ಅಂದೆ."

ಅವಳ ಸಮ್ಮತಿಯಿಂದ ಹಿಗ್ಗಿದ.

"ನನ್ನ ಇಂಜಿನಿಯರ್ ಸ್ನೇಹಿತ ಮಲ್ಲಿಕಾರ್ಜುನ ಆಹ್ವಾನ ಕೊಟ್ಟಿದಾನೆ. ನಮ್ಮ ಹನಿಮೂನ್ ಹಾರಂಗಿ ಜಲಾಶಯದಲ್ಲಿ...."

"ಹುಂ ಅಂದೆ."

"ಶರ್ಮಿಳಾ, ನಮ್ಮದೇ ವಸ್ತು ತೊಗೊಂಡು ಕಾದಂಬರಿ ಬರೀತಿದೀನಿ.

"ಪ್ರಣಯ ದೋಣಿ' ಅಂತ ಹೆಸರಿಟ್ಟಿದೀನಿ."

ಅದಕ್ಕೂ ಅವಳ ಮರುನುಡಿ 'ಹುಂ'. ಕೆಂಪೇರಿದ ಕೆನ್ನೆಗೆ ತುಟಿ ಒತ್ತಿದ. ಕ್ಷಣದಲ್ಲಿ ಹಿತವಾದ ಕನಸು. ಅಲಂಕೃತ ಪ್ರಯಣ ದೋಣಿ. ನಯವಾದ ಜಲ ಪಯಣ. ಅವಳ ಎದುರಾಗಿ ಕುಳಿತು ಹುಟ್ಟು ಹಾಕುವಾಗ ಆಕಾಶ ತಳಕ್ಕೆ ಇಳಿದಂತೆ!

"ಲೇಖಕನ ಹೆಂಡತಿ ಅಂದ್ರೆ ಬಲು ಕಷ್ಟ."

ಅವಳ ಗೊಣಗು ಅವನ ಕಿವಿ ಸೇರಲಿಲ್ಲ.

ಮತ್ತೆ ಐದು ದಿನಗಳು ಕಳೆಯುವುದರಲ್ಲಿ, ಮದುವೆಗೆ ಎರಡು ದಿನಗಳು ಉಳಿದಂತೆ ಆದುದೇನು? ಹನ್ನೊಂದು ತಿಂಗಳ ಪರಿಚಯಕ್ಕೆ ತೆರೆ ಎಳೆದುದು ಕೇವಲ ಮೂರು ಪಂಕ್ತಿಗಳ ತುಂಡು ಕಾಗದ! ಹೆಣ್ಣಿನ ಸಂಗ ದೂರವಿಟ್ಟ ಕಾರ್ತೀಕ ನಲ್ಲಿ ಪ್ರಯಣದ ಕಿಚ್ಚು ಹೊತ್ತಿಸಿದವಳು ತನ್ನ ಮನಸ್ಸಿಗೆ ದಿಢೀರನೆ ಸರಿ ಎನಿಸಿದ ಪ್ರದೀಪನೊಂದಿಗೆ ಹೊರಟುಹೋದಳು! ಕಾರು ಓಟದಲ್ಲಿ ಪ್ರವೀಣನೆನಿಸಿದ ಇಪ್ಪತ್ತೆಂಟರ ಆಧುನಿಕ ಯುವಕ ಅವಳನ್ನು ಸೆಳೆಯುವುದರಲ್ಲಿ ಸಫಲನಾಗಿದ್ದ.

ಕಾರ್ತೀಕ ಆಘಾತದಿಂದ ಚೇತರಿಸಿಕೊಂಡು ವ್ಯಥೆಪಟ್ಟ. ನಯವಂಚಕಿ ಶರ್ಮಿಳಾ! ಅವಳ ವಂಚನೆಯಿಂದ ಗಾಯಗೊಂಡಿರಲಿಲ್ಲ. ಮೂವತ್ತೊಂಬತ್ತು ವರ್ಷಗಳಷ್ಟು ಕಾಲ ಹೆಣ್ಣಿಗೆ ಮನದ ಮೂಲೆಯಲ್ಲೂ ಸ್ಥಾನ ಕೊಡದೆ ಸ್ಥಿತಪ್ರಜ್ಞನಂತೆ ಉಳಿದವನು ಏಕಾಏಕಿ ಅವಳಿಗೆ ಸೋತುದೇಕೆಂದು ತನ್ನ ಬಗ್ಗೆಯೇ ಜಿಗುಪ್ಸೆ ತಳೆದ. ತನ್ನ ಸಿದ್ಧಾಂತವನ್ನು ಬದಲಿಸುವಂತೆ ಮಾಡಿ ವಿವಾಹಕ್ಕೆ ಒಪ್ಪಿಸಿದ ಮೇಲೆ ಹೀಗೆ ಸೇಡು ತೀರಿಸಿಕೊಳ್ಳುವ ಕುಬುದ್ಧಿ ಅವಳಿಗೇಕೆ ಬಂತು?

ನಿಷ್ಠಾವಂತನಿಗೆ ವ್ರತ ಭಂಗವಾಗಿತ್ತು. ತೇಜೋವಧೆಗೆ ಸಿಕ್ಕಿ ನರಳಿದ. ಅವನಿಗೆ ತಿರಸ್ಕಾರದ ನಗೆ ಬಂತು. ಶ್ರೀಮಂತ ಮನೆತನದ ಶರ್ಮಿಳಾ ಹೇಳಿದಂತೆ ಅವಳ ತಂದೆಯ ಜಮೀನಿನಲ್ಲಿ ನೂರಾರು ಕುರಿಗಳು. ಅವುಗಳಿಂದ ಬರುವ ಉತ್ಪನ್ನ ಅಗಾಧ. ಶರ್ಮಿಳಾ ಪರಿಗಣಿಸಿದಂತೆ ತಾನೂ ಕುರಿ!

ಸ್ವರ್ಣಮ್ಮನ ಸೊಲ್ಲಡಗಿತ್ತು. ಅವಳಿಗೂ ಅದು ಸಹಿಸಲಾಗದ ಅನಿರೀಕ್ಷಿತ ಪೆಟ್ಟು. ಮಗ ವಿವಾಹದ ವ್ಯೂಹಕ್ಕೆ ಸಿಕ್ಕಿ ಹೀಗೆ ತತ್ತರಿಸಬಾರದಿತ್ತು.

ಪ್ರಣಯ ದೋಣಿ ಮುಳುಗಿತ್ತು. ಮಧುಚಂದ್ರಧಾಮವಾಗಬೇಕಿದ್ದ ಹಾರಂಗಿ

ಜಲಾಶಯಕ್ಕೆ ಲೇಖಕ 'ಮಣ್ಣಿನ ದೋಣಿ' ಬರೆಯಲು ಭಾರವಾದ ಹೃದಯ ಹೊತ್ತು ಬಂದಿದ್ದ. ಅವನಿಗೆ ಕೆಲವು ತಾಸುಗಳ ನೆಮ್ಮದಿ ದೊರಕಿಸಲು ಮಲ್ಲಿಕಾರ್ಜುನ ಅವನನ್ನು ಕುಶಾಲನಗರದ ಸರ್ಕಸ್‌ಗೆ ಕರೆತಂದಿದ್ದ. ಮನೋರಂಜನೆಗೆ ಅಲ್ಲೂ ಆತಂಕ. ಅಕಾಲಿಕ ಗುಡುಗು ಮಳೆ! ಮಳೆಯ ಹಾವಳಿಗೆ ಸಿಕ್ಕಿ ಅರ್ಧಕ್ಕೆ ನಿಂತ ಸರ್ಕಸ್‌ನಲ್ಲಿ ಕಣ್ಮನ ಸೆಳೆದವಳು ಹದಿನಾರು ವರ್ಷದ ಕಿಶೋರಿ. ಸೆಳೆತಕ್ಕೆ ಕಣ್ಣಿಲ್ಲ, ವಿವೇಚನೆ ಇಲ್ಲ. ಸಾಧಾರಣ ರೂಪಿನ, ಸಾಮಾನ್ಯ ಓದಿನ, ಕೂಲಿಕಾರ ಕುಟುಂಬದ ಬಾಲೆ ಅವಳು. ಭಾಗ್ಯ ಕಾಣದ ಸೌಭಾಗ್ಯ!

ಸೌಭಾಗ್ಯಳ ತಾಯಿಗೆ ತೋರಿದ ಮಾನವೀಯತೆ, ಸೌಭಾಗ್ಯಳ ರಕ್ಷಣೆಗೆ ನೀಡಿದ ಆಶ್ವಾಸನೆಗೆ ದೊರೆತ ಪ್ರತಿಫಲ?

ಷೋಡಶಿಯೊಡನೆ ವಿವಾಹ! ಇಪ್ಪತ್ತೈದು ವರ್ಷದ ಶರ್ಮಿಳಾ ತನಗೆ ಅಸಮಂಜಸ ಜೋಡಿ ಎಂದಿದ್ದವನಿಗೆ ಹದಿನಾರು ವರ್ಷದ ಕನ್ಯೆ! ಹಸ್ತಸಾಮುದ್ರಿಕನ ಭವಿಷ್ಯದಂತೆ ವಿಚಿತ್ರ. ವಿವಾಹದ ಯೋಗ ಬಂದಿತ್ತು....

ಕಾರ್ತೀಕ ವಿಚಾರ ಮಥನದಿಂದ ಕದಲಿ ದೃಷ್ಟಿ ಹೊರಳಿಸಿದಾಗ ಕಂಡುದು ಮಂದಗತಿಯಲ್ಲಿ ಜುಳು ಜುಳು ಹರಿದ ಹಾರಂಗಿ ನದಿ.

* * *

ಮಲ್ಲಿಕಾರ್ಜುನ ಸುಕ್ಕುಗಟ್ಟಿದ ಹಣೆ ಉಜ್ಜಿದ. ಸ್ನೇಹಿತನ ಕಥೆ ಕೇಳಿ ನಿಧಾನವಾಗಿ ಗುನುಗಿದ.

'ತಲೆಯಲ್ಲಿ ಒಯ್ದಳು ಗುಲಾಬಿ ಹೂವ.

ಉಳಿಸಿ ಹೋದಳು ಮುಳ್ಳು ಕಾಂಡವ.....'

ಕಾರ್ತೀಕನಿಗೆ ರೋಮಾಂಚನ. ಕತ್ತಲು ತುಂಬಿದ ಸರ್ಕಸ್‌ನಲ್ಲಿ ತನ್ನ ಮನದಲ್ಲಿ ಭುಗಿಲೆದ್ದ ಭಾವನೆಗಳನ್ನು ಮೂರ್ತಗೊಳಿಸಿದ ಜನಪದದ ಎರಡು ಪಂಕ್ತಿಗಳು.

"ಸೌಭಾಗ್ಯ ನನಗೇ ಹಾಡಿದ್ದು ಅನ್ನೋ ಹಾಗಿತ್ತು."

ಲೇಖಕ ಇನ್ನೂ ಅನರ್ಥಕ್ಕೆ ಸಿಕ್ಕಿಲ್ಲವೆಂಬ ಮುಖಭಾವ ತೋರಿದ.

"ಅದು ಶರ್ಮಿಳಾಗೆ ಅನ್ವಯಿಸಿದ್ದು ಅಂತ ನೀನು ಭಾವಿಸ್ದೆ.

ಸೌಭಾಗ್ಯಳ ಪಾಲಿಗೆ ನೀನು ಗುಲಾಬಿ ಹೂವು. ನಿನ್ನ ಪಾಲಿಗೆ ಅವಳೇ ಮುಳ್ಳು ಕಾಂಡ."

"ಸೌಭಾಗ್ಯ ನಿರ್ದೋಷಿ."

"ಬ್ರಹ್ಮಚಾರಿ ಶತಮರ್ಕಟಗಳಿಗೆ ಸಮವಂತೆ. ನೀನು ತೋರಿರೋದು

ಶತಮೂರ್ಖತನ. ನೀನು ಇಷ್ಟು ದಿನ ಮದುವೆ ಬೇಡ ಅಂತ ಇದ್ದದ್ದರ ಫಲ."

"ನಲವತ್ತನೆ ವಯಸ್ಸಿನಲ್ಲೂ ಮನುಷ್ಯನಿಗೆ ಪವಾಡ ಕಾದಿರತ್ತೆ ಅಂದೆ. ಪವಾಡ ನಡೀತು."

ನಿರ್ವಿಕಾರ ಉತ್ತರದಿಂದ ತುಸು ದಂಗಾದ ಮಲ್ಲಿಕಾರ್ಜುನ.

"ಅಪ್ಸರೆಯಂತ ಹುಡುಗೀರು ಘೇರಾಯಿಸಿದಾಗ ಮುಖ ತಿರುಗಿಸ್ದೆ, ಕಡೆಗೆ ಗಂಟು ಬಿದ್ದೋಳು ಕರಿ ಮುಖದ ಎಳೆ ಹುಡುಗಿ."

"ಹೆಣ್ಣಾಗಿ ಕಾಡಿತ್ತು ಮಾಯೆ."

ಅವನ ತಾಳ್ಮೆಗೆ ರೋಸಿದ ಮಲ್ಲಿಕಾರ್ಜುನ ಮಾತು ತಿರುಗಿಸಿದ.

"ಬರ್ನಾರ್ಡ್ ಅಂದ್ರೆ ಜಲಾಶಯದ ಜನವೆಲ್ಲಾ ಹೆದರ್‍ತಾರೆ. ಅವನ ಹತ್ರ ಚರ್ಚೆ ಮಾಡಿ ಪ್ರಯೋಜನ ಇಲ್ಲ. ಅವನ ಹಿಂದೆ ಕಟುಕರ ಗುಂಪೇ ಇದೆ. ಅವನ್ನ ಇಲ್ಲಿಂದ ಹೊರಡಿಸೋದಿಕ್ಕೆ ಪ್ರಯತ್ನ ಮಾಡಿದ ಕಂಟ್ರಾಕ್ಟರೊಬ್ಬ ಒಂದು ತಿಂಗಳು ಆಸ್ಪತ್ರೇಲಿದ್ದು ಈ ಸರಹದ್ದು ಬಿಟ್ಟು ಹೋದ್ನಂತೆ ಕೊಲೆ ಮಾಡಿ ತಲೆ ತಪ್ಪಿಸಿಕೊಂಡಿದ್ದಾನೆ ಅಂತ ಗಾಳಿ ಮಾತು. ಬರ್ನಾರ್ಡ್ ಭಯಂಕರ ಮನುಷ್ಯ."

ಬರ್ನಾರ್ಡ್ ಯಾವ ರೀತಿಯಲ್ಲೂ ಸಂಬಂಧಿಸಿಲ್ಲ ಎನ್ನುವಂತೆ ಕಿವುಡು ಕಿವಿ ತೋರಿದ ಲೇಖಕ ನಯವಾಗಿ ಉಸುರಿದ.

"ಬರ್ನಾರ್ಡ್‌ನ ವರ್ತನೆ, ಅಪರಾಧ ನನಗೆ ಸಂಬಂಧಿಸಿದ್ದಲ್ಲ."

ವಾಚಾಳಿ ಎರಡೂ ಕೈ ಎತ್ತಿದ.

"ಆದರೆ ಅವನು ನಿನ್ನ ಸಂಬಂಧಿ ಆಗೋನು....ಮಾವ! ಅವನ ಅಪರಾಧಕ್ಕೆ ನಿನ್ನ ತಲೆಯೂ ನಾಳೆಯಿಂದ ಕೆಡಬೇಕಲ್ಲ. ಮೊದಲು ನೀನು ಮಾಡಿರೊ ಅಪರಾಧ ಸರಿಪಡಿಸ್ಕೊ. ಆತಂತ್ರ ಸಂಸಾರದ ಬಡ ಹೆಂಗಸು ಆರೈಕೆ ಮಾಡಿದ ಕೈನ ಕಚ್ಚಿದಾಳೆ. ನಿನ್ನ ದೋಷ ಅವಳಿಗೆ ಗೊತ್ತಾಗಿದೆ. ಅವಳಿಗೆ ಮಾತು ಕೊಟ್ಟೆ ಅಂತ ಅವಳ ಮಗಳನ್ನ ಕುತ್ತಿಗೆಗೆ ನೇತು ಹಾಕ್ಕೋಬೇಕಾಗಿಲ್ಲ. ಹಾಂ! ನೀನು ಜಗ್ಗಿರೋದು ಆ ಟ್ರಕ್ ಡ್ರೈವರ್ ಬೆದರಿಕೆಗೆ. ಇದು ದಬ್ಬಾಳಿಕೆ ಕಾಲ ಅಲ್ಲ."

"ನನ್ನಲ್ಲಿ ಏನೇ ದೋಷ ಇದ್ರೂ ಬೆದರಿಕೆಗೆ ಜಗ್ಗಿದೋನಲ್ಲ."

ಅರ್ಥವಾಗದ ಮಾತಿನಿಂದ ತಲೆ ಕೆರೆದ. ತುಟಿ ಉಬ್ಬಿ ತಲೆ ಅಲುಗಿತು. ಕಣ್ಣು ಓರೆ ಮಾಡಿ ರಹಸ್ಯ ಹೊರಗೆಳೆಯುವಂತೆ ಕುಹಕ ನೋಟ ಬೀರಿದ.

"ನಿನಗೆ ಸೌಭಾಗ್ಯಳ ಮೇಲೆ ಪ್ರೇಮ ಇದ್ದರೆ ಅದು ಬೇರೆ ವಿಷಯ. ನಾನು ತುಟಿ ಎರಡು ಮಾಡೋದಿಲ್ಲ."

ಕಾರ್ತೀಕನ ಭುಜ ಗಾಬರಿಯಿಂದ ಏರಿತು.

"ಸೌಭಾಗ್ಯಳ ಮೇಲೆ ಪ್ರೇಮ? ಉಹುಂ, ನನಗೆ ಪ್ರೇಮ ಇಲ್ಲ. ಪ್ರೇಮದ ಅನುಭವ ಶರ್ಮಿಳಾ ಸಾಕಷ್ಟು ಎರೆದು ಹೋಗಿದಾಳೆ. ಈ ಮದುವೆಯಿಂದ ಮನೇಲಿ ಒಂಟಿಯಾಗಿರೊ ಅಮ್ಮನಿಗೆ ಸಂತೋಷ ಆಗಬೋದು. ಸೌಭಾಗ್ಯಳ ಕಂಠ ಚೆನ್ನಾಗಿದೆ. ಅಮ್ಮನಿಗೂ ಸಂಗೀತದ ಹುಚ್ಚು. ನನ್ನ ಬರಹಕ್ಕೂ ಅಡ್ಡಿ ಇಲ್ಲ."

ಮಿತ್ರ ಅಚ್ಚರಿಗೊಂಡ. ರಹಸ್ಯದ ಒಂದೆಳೆ ಹೊರಬಿತ್ತು.

"ಅಂದರೆ ಸೌಭಾಗ್ಯನ್ನ ಮದುವೆ ಆಗೋದಿಕ್ಕೆ ನಿನ್ನ ಅಡ್ಡಿಯೇ ಇಲ್ಲ. ಇದು ಕುರುಡು ಪ್ರೇಮ ಅಲ್ಲ. ಹಾದಿಗೆಟ್ಟ ಪ್ರೇಮ."

ಕಾರ್ತೀಕ ಏನೂ ಹೇಳದೆ ಮುಖ ಪಕ್ಕಕ್ಕೆ ತಿರುಗಿಸಿದ. ಸ್ನೇಹಿತ ಅವನ ಮುಖ ತನ್ನ ಕಡೆಗೆ ತಿರುಗಿಸಿ ಭುಜ ಒತ್ತಿದ.

"ಅರ್ಥ ಆಯ್ತು ಕಾರ್ತೀಕ. ಶರ್ಮಿಳಾ ನಿನಗೆ ಮೋಸ ಮಾಡಿದ್ಲು. ಈ ಹುಚ್ಚು ಮದುವೆಯಿಂದ ಅವಳ ಮೇಲೆ ಸೇಡು ತೀರಿಸಿಕೊಳ್ಳೋದಿಕ್ಕೆ ಹೊರಟಿದೀಯ."

ಲೇಖಕನ ಕಣ್ಣುಗಳು ತೀಕ್ಷ್ಣಗೊಂಡು ಮುಖದಲ್ಲಿ ಕೆಂಪು ಆವರಿಸಿತು.

"ವಿಪರೀತದ ಕಲ್ಪನೆ. ಅದು ನಿನ್ನಲ್ಲೇ ಇರಲಿ."

"ಕಲ್ಪನೆ ಅಲ್ಲ. ಸಾಮಾನ್ಯ ತಿಳಿವಳಿಕೆಯಿಂದ ಹೇಳ್ತಿರೊ ಮಾತು. ಮಿತಭಾಷಿ ಹಠವಾದಿಯಂತೆ. ನಿನ್ನ ಹಠ ತೀರಿಸಿಕೊಳ್ಳೊ ಆವೇಶದಲ್ಲಿ ನಿನ್ನ ಬದುಕಿಗೆ ಹಾಳು ಸುರಿಯುತ್ತೆ. ಶರ್ಮಿಳಾ ಹೋದ್ಲು. ಪೀಡೆ ಕಳೀತು. ಸೌಭಾಗ್ಯ ಇನ್ನೂ ಬಾಲೆ ಅಂತ ಭಾವಿಸಿ ಏನೊ ಹೇಳ್ತಾ ಇದೀಯ. ಅವಳು ಹೆಂಡತಿ ಅನ್ನೊ ದೃಷ್ಟಿಯಿಂದ ನಿನ್ನ ಹೊಣೆಗಾರಿಕೆ ಏನು?"

ಮಾತು ಆಳವಾಗುತ್ತಿತ್ತು. ಕಾರ್ತೀಕ ಪ್ರತಿಯಾಗಿ ಏನೂ ಹೇಳಿಲಿಲ್ಲ. ಬಲಿಗೆ ಸಿದ್ಧವಾದ ಕುರಿಯಂತೆ ತಲೆ ತಗ್ಗಿಸಿ ಹೊರಬಿದ್ದ.

ಮರುದಿನ ಬೆಳಗ್ಗೆ ಊರು ತುದಿಯ ಹಳೆ ಮನೆಯಲ್ಲಿ ಸರಳ ವಿವಾಹ ಸಾಗಿತು. ಮದುವೆಯ ಕುರುಹು ಒಂದೂ ಕಾಣದು. ತೋರಣವಿಲ್ಲ, ವಾಲಗವಿಲ್ಲ. ಕ್ರಿಶ್ಚಿಯನ್ ವಿವಾಹಕ್ಕೆ ಅದು ಬೇಡ.

ಬರ್ನಾರ್ಡ್ ಹೊಸ ಷರಟು, ಪ್ಯಾಂಟ್‌ನಲ್ಲಿ ಚಾವಣಿ ನೋಡುತ್ತಿದ್ದ. ಅವನ ಮೂವರು ಧೂರ್ತ ಸಹೋದ್ಯೋಗಿಗಳು ಗೋಡೆ ಒರಗಿ ನಿಂತಿದ್ದರು. ರೂತಮ್ಮ ತಲೆಗೂದಲಿನಲ್ಲಿ ಬಾಚಣಿಗೆ ಆಡಿಸುವುದನ್ನು ಅಲ್ಲಿಯೂ ಮರೆತಿರಲಿಲ್ಲ. ಅವಳೊಡನೆ ನಿಂತ ರಾಣಿಗೆ ಚೆಲ್ಲಾಟ ತಪ್ಪದು. ಮಲ್ಲಿಕಾರ್ಜುನ ಮೌನ ಪ್ರೇಕ್ಷಕ.

ಕಾರ್ತೀಕನ ದೇಹ ಕೀಲು ಬೊಂಬೆಯಂತೆ ನಿಂತಿತ್ತು. ಸೌಭಾಗ್ಯ ಸಾಮಾನ್ಯ ದರ್ಜೆಯ ಹೊಸ ಸೀರೆಯಲ್ಲಿ ಕಾರ್ತೀಕನ ಮುಂದೆ ನಿಂತಳು. ಇಬ್ಬರಿಗೂ

ಪಕ್ಕದಲ್ಲಿ ನಿಂತವನು ಪಾದ್ರಿಯಲ್ಲ, ಪುರೋಹಿತನಲ್ಲ, ಮಾಂಗಲ್ಯ ಕಾಣದು. ಯಂತ್ರ ಮಾನವನಂತೆ ವಧುವಿನ ಬೆರಳಿಗೆ ಉಂಗುರ ಸೇರಿಸಿದ.

ಅವಳ ಮುಖದಲ್ಲಿ ನಿರಾಶೆ, ದುಃಖ, ಅಚ್ಚರಿ ಎಲ್ಲದರ ಸಮ್ಮಿಳನ. ತಾಯಿಯ ಹಾಜರಿ ಇಲ್ಲದೆ ದೊಡ್ಡ ಬಾಗಿಲಿನ ಪಾಳು ಮನೆಯಲ್ಲಿ ಸಾಗಿದ. ಆತುರದ ಮದುವೆ ಹೆಸರಿನ ಹತ್ತು ನಿಮಿಷದ ನಾಟಕ!

"ನಾನು ಬಳಸಿದ ಕೆಟ್ಟ ಪದಗಳನ್ನು ದಯವಿಟ್ಟು ಮರೆತುಬಿಡು."

ಬರ್ನಾರ್ಡ್ ಕಾರ್ತೀಕನ ಪಕ್ಕಕ್ಕೆ ಬಂದು ಮೆಲ್ಲನೆ ಕೇಳಿಕೊಂಡ. ಮೌನಿ ತಲೆ ಎತ್ತಿದ.

"ನಿನ್ನ ಇಚ್ಛೆ ಪೂರೈಸ್ತು, ಬರ್ನಾರ್ಡ್. ನೀನು ಮದುವೆಗೆ ಬೆದರು ಹಾಕಿದ್ದು ಸೌಭಾಗ್ಯಳಿಗೆ ಹೇಳಲಿಲ್ಲವಲ್ಲ."

ಮಗಳ ಬದುಕು ಸರಿಯಾಗಿರಲಿ ಅನ್ನೊ ಚಿಂತೆ ಯಾವ ತಂದೆಗೆ ಇರೋದಿಲ್ಲ. ನಿನ್ನ ಮದುವೆ ಆದ್ರೆ ಅವಳ ಬದುಕು ಸರಿಹೋಗುತ್ತೇಂತ ಖಾತ್ರಿ ಆಗಿತ್ತು. ಮದುವೆ ಹೇಗಾದ್ರು ಆಗಿರ್ಲಿ. ಅವಳು ನಿನ್ನ ಹೆಂಡತಿ. ನಾನು ಮದುವೆಗೆ ಒತ್ತಾಯ ಮಾಡಿದ್ದು ಅವಳಿಗೆ ಗೊತ್ತಾಗಿಲ್ಲ. ಅದು ಗೊತ್ತಾಗೊ ಹೊತ್ತಿಗೆ ನಿನ್ನ ಅರ್ಥ ಮಾಡ್ಕೊಂಡಿರ್ತಾಳೆ."

"ನೆನಪಿರಲಿ, ಬರ್ನಾರ್ಡ್. ನಾನು ಸೌಭಾಗ್ಯಳನ್ನ ಮದುವೆ ಆಗಿದ್ದು ನಿನ್ನ ಬೆದರಿಕೆಗಲ್ಲ. ನಿನ್ನ ಹೆಂಡತಿಗೆ ಕೊಟ್ಟ ಮಾತನ್ನ ಉಳಿಸಿಕೊಳ್ಳೋದಿಕ್ಕೆ. ಮಾನವೀಯತೆ ತೋರಿಸೊ ಭರದಲ್ಲಿ ಮದುವೆಯ ಗಾಣಕ್ಕೆ ತಲೆ ಕೊಟ್ಟೆ."

ಪ್ರತಿ ಹೇಳಲಾಗದೆ ಬರ್ನಾರ್ಡ್ ಕಣ್ಣೊರೆಸುತ್ತ ಹೊರಬಿದ್ದ.

ಹೆಬ್ಬಾಗಿಲು ದಾಟಿದ ಮೇಲೆ ಕಾರ್ತೀಕ ಹೆಂಡತಿಯ ತೋಳು ಹಿಡಿದ. ಅವಳಿಗೆ ಮದುವೆಯ ಆಕಸ್ಮಿಕದಿಂದ ಇನ್ನೂ ಬಿಡುಗಡೆಯಾಗದ ರೋಮಾಂಚನ.

"ನನ್ನ ಜೊತೇಲಿ ಬರೋದ್ರಿಂದ ನಿನಗೆ ಸಂತೋಷವೆ, ಸೌಭಾಗ್ಯ?"

ಪ್ರಶ್ನೆಯ ಆಳ, ಆತ್ಮೀಯತೆ ಅರಿಯದ ಕಿಶೋರಿ ತಲೆ ಎತ್ತದೆ ಮೆಲ್ಲನೆ ನುಡಿದಳು.

"ನನಗೆ ಸಂತೋಷ ಆಗುತ್ತೇಂತ ಪಪ್ಪ ಹೇಳಿದ. ಮಮ್ಮಿಗೆ ನಿಮ್ಮ ಮೇಲೆ ಬಹಳ ಪ್ರೀತಿ, ನಂಬಿಕೆ. ಅವಳು ಆಸ್ಪತ್ರೆ ಸೇರಿರೋವಾಗ ಪಪ್ಪ ಈ ಮದುವೆ ಮಾಡ್ಸಿದ್ದು ಸರಿಯಾ?"

ಕಾರ್ತೀಕ ಅವಳ ನಿಷ್ಕಳಂಕತನಕ್ಕಾಗಿ ಮರುಗಿದ. ಅವಳ ಸ್ವರದಲ್ಲಿ ಅಪಾರ ನಷ್ಟದ ನೋವಿತ್ತು. ಬೆರಳಿಗೆ ಸಡಿಲವಾಗಿ ಸೇರಿದ್ದ ವಿವಾಹದ ಉಂಗುರವನ್ನು ತಿರುವಿದಳು.

"ನಿನ್ನ ಪಪ್ಪನ ಕೈಲಿ ಕನಕ ಬಹಳ ಕಷ್ಟ ಅನುಭವಿಸಿರಬೇಕು."

"ಪಪ್ಪ ತಾನೇ ಏನು ಮಾಡ್ತಾನೆ. ಯಾವಾಗಲೂ ಬಡತನ, ಮಮ್ಮಿ ಟೀಚರ್ ಆಗಿದ್ದಾಗ ಬೆಂಗಳೂರಲ್ಲಿ ಚೆನ್ನಾಗಿದ್ವಿ. ಜಯಶೀಲ ಹೋದ ಮೇಲೆ ಕೆಲಸಬಿಟ್ಟು ಈ ಅಣೆಕಟ್ಟೆಗೆ ಬಂದ್ವಿ. ಅವಳಿಗೆ ಕಾಯಿಲೆ ಬಂತು...."

ಸೌಭಾಗ್ಯ ಮಾತು ನಿಲ್ಲಿಸಿದಳು. ಮದುವೆ ಆದ ಮರು ಘಳಿಗೆಯಲ್ಲಿ ತನ್ನ ಮನೆಯ ಕಾರ್ಪಣ್ಯದ ಹೇಳಿಕೆ ಅತಿ ಎನಿಸಿತು.

ಅವನ ಹೇಳಿಕೆಯ ಚಿತ್ರ ಕಾರ್ತೀಕನ ಮನಸ್ಸಿನಲ್ಲಿ ಹಾದು ಹೋಯಿತು.

ನಗರದ ಟೀಚರ್ ಕೆಲಸದಲ್ಲಿ ಸ್ವಾರಸ್ಯ ಕಂಡ ಕನಕ. ಕಟುಕ ಗಂಡನೊಡನೆ ಬಾಳು. ಮಗ ಜಯಶೀಲನ ಸಾವು. ತಂದೆಯ ಒರಟುತನದಲ್ಲಿ ಸೌಭಾಗ್ಯಗಳಿಗೆ ಹಾರಂಗಿ ಪ್ರದೇಶದಲ್ಲಿ ನೀರಸ ಬದುಕು. ಮನೋರೋಗದಿಂದ ಹದಗೆಟ್ಟ ತಾಯಿಯ ದೇಹಸ್ಥಿತಿ....

ಸೌಭಾಗ್ಯ ಈಗ ನಿರ್ಗತಿಕ ಕಾಲೋನಿ ಮನೆಯ ನಿರ್ಲಕ್ಷಿತ ಬಾಲೆಯಲ್ಲ. ವಿವಾಹಿತ ಹೆಣ್ಣು. ಹೆಸರಾಂತ ಲೇಖಕನ ಹೆಂಡತಿ. ಅವಳಿಗೆ ಆಶ್ರಯ, ರಕ್ಷಣೆ, ಬದುಕು, ಪ್ರೀತಿ ಎಲ್ಲವೂ ಬೇಕು. ಅವಳನ್ನು ಪತ್ನಿಯಾಗಿ ಪಡೆದು ತಾನು ಅವೆಲ್ಲವನ್ನೂ ಅವಳಿಗೆ ದೊರಕಿಸಬೇಕು.

ಎರಡು ದಿನಗಳಿಗೆ ಮೊದಲು ವಿವಾಹದ ಅರ್ಥ ತಿಳಿಯದಿದ್ದ, ತನ್ನ ವಿವಾಹದ ಕಲ್ಪನೆಯನ್ನು ಮಾಡಿಕೊಳ್ಳದಿದ್ದ ಕಾಲೋನಿಯ ಮುಗ್ಧೆ ಶ್ರೀಮತಿ ಕಾರ್ತೀಕ ಎನಿಸಿಕೊಂಡು ಗೇಟಿನಿಂದ ಹೊರಬಂದಳು.

"ಎಲ್ಲಿಗೆ ಹೋಗ್ತೀಯ? ಈಗ ಊಟ ನಮ್ಮ ಮನೇಲಿ. ಟ್ಯಾಕ್ಸಿಗೆ ಹೇಳಿ ಕಳಿಸಿದೀನಿ."

ರೂತಮ್ಮ ಶರೀರ ತೂಗಿಸಿಕೊಂಡು ಒದರುತ್ತಾ ಬಂದಳು. ಬಾಚಣಿಗೆ ತಲೆಗೂದಲಿನಲ್ಲಿ ಓರೆಯಾಗಿ ನಿಂತಿತ್ತು.

"ಮತ್ತೆ ಹಾರಂಗಿಗೆ ಕಾಲಿಡೋದಿಲ್ಲ."

ನಿಶ್ಚಯ ಮಾಡಿದಂತೆ ನುಡಿದ ಕಾರ್ತೀಕ. ಗಡಸು ಮಾತಿನಿಂದ ಆವಾಕ್ಕಾದ ರೂತಮ್ಮ ಏನೂ ಹೇಳದೆ ಹಿಂದಕ್ಕೆ ಸರಿದಳು.

ಅವನು ತೋಳು ನಯವಾಗಿ ಒತ್ತಿದಳು ಸೌಭಾಗ್ಯ.

"ಮತ್ತೆ ಹಾರಂಗಿಗೆ ಬರೋದಿಲ್ವೆ? ಪಪ್ಪ ಕೆಟ್ಟೋನಿರಬೋದು, ಮಮ್ಮಿ ತುಂಬಾ ಒಳ್ಳೆಯವಳು. ಅವಳಿಗೋಸ್ಕರ ಬರೋಣ...."

ಮುಂದೆ ಮಾತು ಹೊರಡಲಿಲ್ಲ. ತಾಯಿಯ ನೆನಪಿನಿಂದ ಕಣ್ಣುಗಳು ಹನಿಗೂಡಿದವು. ಅವನಲ್ಲಿ ಮರುಕ ಏರಿ ಬಂತು.

"ಹೌದು, ಕನಕಳಿಗೋಸ್ಕರ ಖಂಡಿತ ಬರೋಣ. ನಮ್ಮ ಮದುವೆ ನೋಡೋದು ಆಗ್ಲಿಲ್ಲ ಅವಳಿಗೆ. ಈಗ ನೇರವಾಗಿ ಆಸ್ಪತ್ರೆಗೆ ಹೋಗೋಣ."

ಮುಖ ಪ್ರಫುಲ್ಲವಾಯಿತು. ಟ್ಯಾಕ್ಸಿಯಲ್ಲಿ ಹೊರಟಾಗ ಗರಿಗೆದರಿದ ಉತ್ಸಾಹದಲ್ಲಿ ಒಂದೇ ಸಮನೆ ಮಾತಾಡಿದಳು.

ಆಸ್ಪತ್ರೆಯ ಮೊಗಸಾಲೆ ಪ್ರವೇಶಿಸುತ್ತಲೇ ಎದುರು ಬಂದ ಪರಿಚಿತ ನರ್ಸ್ ಸೆಟೆದು ನಿಂತು ಶಿಷ್ಟಾಚಾರ ತಿಳಿಯದೆ ಬಳ್ಳನೆ ಹೇಳಿದಳು.

"ಕರುಳುಹುಣ್ಣಿನ ನಿಮ್ಮ ರೋಗಿ ತೀರಿಕೊಂಡು ಅರ್ಧಗಂಟೆ ಆಯ್ತು. ಹಾರಂಗಿಗೆ ಸುದ್ದಿ ಕಳಿಸಿದ್ವಿ...."

ಕಾರ್ತೀಕ ಉಸಿರು ಬಿಗಿ ಹಿಡಿದು ಹೆಂಡತಿಯನ್ನು ನೋಡಿದ. ಅವಳದು ಶಿಶು ನೋಟ. ಶಿಶುವಿನಂತೆಯೇ ಬಿಕ್ಕಳಿಸಿದಳು.

"ನೀವು ಹೇಳಿದ್ದು ಸರಿ. ನಾವು ಮತ್ತೆ ಹಾರಂಗಿಗೆ ಕಾಲಿಡೋದು ಬೇಡ."

"ಹೌದು, ಸೌಭಾಗ್ಯ, ಖಂಡಿತ ಕಾಲಿಡೋದು ಬೇಡ."

ಅವಳ ಸೊಂಪಾದ ತಲೆಗೂದಲನ್ನು ನೇವರಿಸಿ ಸಂತೈಸಿದ.

೪

ಜಿನುಗುತ್ತಿದ್ದ ಮಳೆಯಲ್ಲಿ ಆಟೋರಿಕ್ಷಾದಿಂದ ಇಳಿದ ಮಗನನ್ನು ನೋಡಿದ ಸ್ವರ್ಣಮ್ಮ ಬಾಗಿಲು ತೆರೆದು ಪಕ್ಕಕ್ಕೆ ನಿಂತಳು. ನೆನೆಯುತ್ತ ಓಡಿ ಬಂದ ಕಾರ್ತೀಕ ಸೂಟ್‌ಕೇಸ್ ವರಾಂಡದಲ್ಲಿಟ್ಟು ಮುಖದ ನೀರು ಒರೆಸಿ ನಕ್ಕ.

"ಸದ್ಯಕ್ಕೆ ನೀನು ಬರೋದಿಲ್ಲ ಅಂತ ತಿಳಿದಿದ್ದೆ. ಕಾಗದವೂ ಇಲ್ಲ. ಬರೆಯೋದಿಕ್ಕೆ ಕುಳಿತೆ ಅಂದ್ರೆ ನಿನ್ನ ಸುತ್ತಲಿನ ಪ್ರಪಂಚವೇ ಸೊನ್ನೆ."

ಸ್ವರ್ಣಮ್ಮ ಅವನ ಸೂಟ್‌ಕೇಸ್ ತೆರೆದು ಕಣ್ಣಾಡಿಸಿದಳು. ಕಾರ್ತೀಕ ತೊಯ್ದ ತಲೆಯನ್ನು ಕರವಸ್ತ್ರದಿಂದ ಒತ್ತಿದ.

"ಹಾರಂಗಿಯಿಂದ ಎಲ್ಲಿಗೂ ಹೋಗ್ಲಿಲ್ಲ. ನೇರವಾಗಿ ಹಿಂತಿರುಗ್ತಾ ಇದೀನಿ. ನಿನಗೆ ಒಂದು ಷಾಕ್ ಹೊಡೆಯುವಂತ ಸುದ್ದಿ."

ಖಾಲಿ ಹಾಳೆಗಳನ್ನು ಹೊರಕ್ಕೆ ತೆಗೆದಳು. ಪ್ರಶ್ನಾರ್ಥಕ ಕಣ್ಣುಗಳು ಏರಿದವು.

"ಒಂದು ಪಂಕ್ತಿಯೂ ಬರೆದಿಲ್ಲಾಂತ ಗೊತ್ತಾಯ್ತು. ಮಲ್ಲಿಕಾರ್ಜುನ ಮಾತಿನಲ್ಲೇ ನಿನ್ನ ಹಿಂಡಿರ್ಬೇಕು. 'ಮಣ್ಣಿನ ದೋಣಿ' ನೀರಿಲ್ಲದ ಹೊಳೇಲಿ ನಿಂತು ಹೋಗಿರಬೇಕು."

"ಅದು ಮುಳುಗು ದೋಣಿ ಆಯ್ತಮ್ಮ."

ತಾಯಿ ಕ್ಷಣ ನಿರುತ್ತರಳಾದಳು. ಮಗ ಯಾವ ವೈಪರೀತ್ಯಕ್ಕೂ

ಇಳಿಯುವುದಿಲ್ಲವೆಂದು ವಿಶ್ವಾಸ ಅವಳಿಗೆ.

"ಯಾವುದಾದ್ರು ಕಾದಂಬರಿ ಚಿತ್ರೀಕರಣಕ್ಕೆ ತೊಗೊಂಡಿರಬೋದು.'

"ಅದು ಸಂತೋಷದ ಸಂಗತಿ ಆಯ್ತು. ನಾನು ಹೇಳಿದ್ದು ನಿನಗೆ ಆಘಾತ ತಟ್ಟಿಸೋ ಸಂಗತಿ ಅಂತ."

ಅವಳ ಮುಖ ಇನ್ನೂ ಗಂಭೀರವಾಯಿತು. ಕಾರ್ತೀಕ ಅವಳನ್ನು ಮತ್ತಷ್ಟು ಅನಿಶ್ಚಿತ ಸ್ಥಿತಿಯಲ್ಲಿಡದೆ ನೇರವಾಗಿ ತಿಳಿಸಿದ.

"ನಾನು ನಿನಗೊಬ್ಬ ಸೊಸೇನ ಕರಕೊಂಡು ಬಂದಿದ್ದೀನಮ್ಮ...."

"ಕಾರ್ತು....!"

ಆತಂಕದ ಉದ್ಗಾರದಲ್ಲಿ ಮಗನ ಮೇಲಿನ ನಂಬಿಕೆಯೊಂದಿಗೆ ಅರ್ಧ ಸಂಶಯ ಬೆರೆತಿತ್ತು. ಅವಳ ಮುಖಭಾವದಿಂದ ತುಸು ತಲ್ಲಣಿಸಿದ. ಅವಳಿಂದಲೇ ಮಾತು ಮುಂದೆ ಸರಿಯಿತು.

"ಆದರೆ ಶರ್ಮಿಳಾ....."

ವಂಚಕಿಯ ಹೆಸರು ಅವನನ್ನು ತಿವಿಯಿತು.

"ಶರ್ಮಿಳಾ ಅನ್ನೋದು ಸತ್ತು ಹೋದ ಶಬ್ದ. ನಿನಗೆ ಅದರಲ್ಲಿ ಇನ್ನೂ ಆಸೆ! ನಾನು ಶರ್ಮಿಳಾನ ಕರೆತಂದಿಲ್ಲ. ನೋಡುವೆಯಂತೆ ನನ್ನ ಹೆಂಡತೀನ."

"ಜೊತೇಲಿ ಬಂದಿಲ್ಲವೆ?" ಬಾಗಿಲಿನತ್ತ ನಡೆದಳು."

"ಸೌಭಾಗ್ಯ! ಎಂತಾ ಚೆನ್ನಾಗಿದೆ ಹೆಸರು......ಮದುವೆ! ನಾನು ನಿನ್ನ ಮದುವೆ ನೋಡಬಾರದೂಂತ ತೀರ್ಮಾನ ಮಾಡಿದೆಯಾ?.....ಅಯ್ಯೋ! ಮದುವೆ ಹೆಣ್ಣು ಬಸ್ ಸ್ಟಾಪ್‌ನಲ್ಲಿ? ಅವಳ್ನ ಮಳೇಲಿ ಒಬ್ಬಳ್ನೇ ಬಿಟ್ಟು ಬಂದೆಯಲ್ಲ."

"ಕರಕೊಂಡು ಬರ್ತೀನಿ. ನೀನು ಮನೇಲಿ ಇರ್ತೀಯೊ ಇಲ್ಲವೊ ಅಂತ ನೋಡಿಕೊಂಡು ಹೋಗೋಕೆ ಬಂದೆ. ಸೌಭಾಗ್ಯ ಅದ್ಭುತ ಹೆಣ್ಣು. ಆಕಾಶದಿಂದ ಇಳಿದು ಬಂದೋಳು. ಅವಳ ಅಪ್ಪ, ಅಮ್ಮ ಯಕ್ಷಿಣಿ ಮಾಡಿದ್ರು. ಗುಂಡು ಹೊಡೆದ ಹಾಗೆ ಮಿಂಚಿನ ವೇಗದಲ್ಲಿ ಮದುವೆ ಆಗೋಯ್ತು."

"ನೀನು ಕಾದಂಬರಿ ಭಾಷೆ ಆಡ್ಬೇಡ. ಮೊದಲು ಹೋಗಿ ಸೊಸೇನ ಬೇಗ ಕರೆದುಕೊಂಡು ಬಾ."

ಕಾರ್ತೀಕ ಸರಸರ ನಡೆದ. ಮಹಡಿ ಏರಿದ ಸ್ವರ್ಣಮ್ಮ ರಸ್ತೆಯ ಮೇಲೆ ಬೆಳ್ಳಿಯ ತಂತುಗಳಂತೆ ಸುರಿಯುತ್ತಿದ್ದ ಮಳೆಯನ್ನು ನೋಡುತ್ತಾ ಕಿಟಕಿಯ ಮುಂದೆ ನಿಂತಳು.

ಮಗ ಸಂತಸದ ಅದ್ಭುತ ಸುದ್ದಿಯನ್ನು ತಿಳಿಸಿದ್ದ. ಅವನನ್ನು ಅರ್ಥ

ಮಾಡಿಕೊಳ್ಳುವುದು ಕಷ್ಟವಾದರೂ ತನಗೆಂದೂ ನಿರಾಶೆ. ನೋವು ತಟ್ಟಿಸಿದವನಲ್ಲ. ಪ್ರೀತಿಯ ಮಗ! ಪತಿಯ ಅಕಾಲ ಮರಣದ ನಂತರ ಅವಳಿಗೆ ಬದುಕಿನಲ್ಲಿ ಉಳಿದ ಆಶಾಕಿರಣ. ಬದುಕಿಗೆ ಕೊರತೆಯಿಲ್ಲ. ಆರು ವರ್ಷಗಳ ಹಿಂದೆ ಸಾರಕ್ಕಿಯ ಮಾವಿನ ತೋಟ ನಗರಾಭಿವೃದ್ಧಿಗಾಗಿ ಕೈಬಿಟ್ಟು ಹೋಗಿದ್ದರೂ ಅದರಿಂದ ಬಂದ ಒಂದೂವರೆ ಲಕ್ಷದ ಪರಿಹಾರ ಹಣದಲ್ಲಿ ಒಂದಂಸ್ತಿನ ಚಿಕ್ಕ ಮನೆ ಕೊಂಡು ಉಳಿದ ಮುಕ್ಕಾಲು ಲಕ್ಷ ಬ್ಯಾಂಕ್‌ನಲ್ಲಿ ಭದ್ರವಾಗಿತ್ತು ಕಾರ್ತೀಕನ ಬರೆಹದಿಂದಲೂ ಹಣ ಬರುತ್ತಿತ್ತು.

ಕಾರ್ತೀಕ ಈಗ ಅದ್ಭುತ ಮಡದಿಯನ್ನು ಮನೆಗೆ ಕರೆತರಲಿದ್ದ. ಅವನ ಹೆಂಡತಿಯಾಗಿ ಯಾವ ಹೆಣ್ಣಾದರೂ ಬರಲಿ, ಅವಳಿಗೆ ಸ್ವಾಗತವುಂಟು. ಅವಳಿಂದ ಮಗನಿಗೆ ನೆಮ್ಮದಿ ಸಿಕ್ಕಿದರೆ ಸಾಕು.

ಹೊರಭಾಗದಲ್ಲಿ ನೀರು ನಿಂತ ರಸ್ತೆಯ ಮೇಲೆ ಆಟೋರಿಕ್ಷಾ ಬಂದು ನಿಂತ ಶಬ್ದ ಕೇಳಿಸಿತು. ನಿಂತಂತೆ ಕಂಡ ಮಳೆ ಮತ್ತೆ ಪ್ರಾರಂಭವಾಯಿತು. ಸ್ವರ್ಣಮ್ಮ ಕೆಳಗೆ ಇಳಿದು ಬಂದಾಗ ಕಾರ್ತೀಕ ಹೆಂಡತಿಗೆ ಇಳಿಯಲು ಸಹಾಯ ಮಾಡುತ್ತಿದ್ದ.

"ಓಡು, ಸೌಭಾಗ್ಯ...."

ಕಾರ್ತೀಕ ಮಳೆಯಲ್ಲಿ ನಿಂತು ಅವಳಿಗೆ ಕೂಗಿ ಹೇಳಿ ಸಣ್ಣ ಪೆಟ್ಟಿಗೆ ಎತ್ತಿಕೊಂಡ. ಅವಳು ಓಡಲಿಲ್ಲ. ಅವನಿಗೆ ಒತ್ತು ನಿಂತು ಮಳೆಯಲ್ಲಿ ತೊಯ್ದಳು.

ಹೊಸ ಮದುವೆ ಹುಡುಗಿ ತೊಯ್ದ ಸೀರೆಯಲ್ಲಿ! ಕಾರ್ತೀಕ ಬೇಸರದಿಂದ ಮನೆಯ ಕಡೆ ನೋಡಿ ವೇಗದ ಹೆಜ್ಜೆ ಹಾಕಿದ. ಸ್ವರ್ಣಮ್ಮ ಛತ್ರಿ ತರುವುದರಲ್ಲಿ ಇಬ್ಬರೂ ಮಳೆ ಬಂದಿದ್ದರು. ಹೊಸ್ತಿಲು ದಾಟುವ ಸಂಪ್ರದಾಯವಿಲ್ಲದೆ ಸೊಸೆ ಮನೆ ಪ್ರವೇಶಿಸಿದ್ದಳು!

"ಇವಳೇ ಸೌಭಾಗ್ಯ."

ಹೆಂಡತಿಯನ್ನು ತೋರಿದ ಮಗ. ಅಚಲಳಾಗಿ ನಿಂತಳು ತಾಯಿ. ಸಾಧಾರಣ ನೂಲು ಸೀರೆಯಲ್ಲಿ ನಿಂತ ಅಂದವಿಲ್ಲದ ಬಾಲೆ!

"ಇವಳು.....ಇನ್ನೂ ಚಿಕ್ಕ ಹುಡುಗಿ!" ಉದ್ಗಾರ ಹೊರಬಂತು.

ದೃಷ್ಟಿ ಅವಳ ಕುತ್ತಿಗೆಯ ಮೇಲೆ ಹರಿದಾಡಿತು. ಮಾಂಗಲ್ಯವಿಲ್ಲ! ಮಗ ಆ ದೃಷ್ಟಿ ಅರ್ಥಮಾಡಿಕೊಂಡ.

"ಕ್ರಿಶ್ಚಿಯನ್ ಹುಡುಗಿ" ಎಂದು ವಿವಾಹದ ಉಂಗುರ ಸೇರಿದ ಬೆರಳನ್ನು ಒತ್ತಿದ. ಸೌಭಾಗ್ಯ ತುಟಿ ಕಚ್ಚಿದಳು.

ಶ್ರೀವೈಷ್ಣವ ಮತದ ಪತಿಯನ್ನು ಮನಸಾರೆ ಇಚ್ಛಿಸಿ ಪಡೆದ ವೀರಶೈವ ಅಭಿನೇತ್ರಿ,

ಮಗನ ವಿಜಾತೀಯ ವಿವಾಹಕ್ಕೆ ತಲ್ಲಣಿಸಿದಂತೆ ಕಂಡಳು. ಸೌಜನ್ಯದ ನುಡಿ ಯಾಂತ್ರಿಕವಾಗಿ ಬಂತು.

"ಸಂತೋಷ. ಮೊದಲು ತೊಯ್ದಿರೊ ಸೀರೆ ಬದಲಾಯ್ಸು. ಪ್ರಯಾಣದಿಂದ ಆಯಾಸ ಆಗಿರ್‍ಬೇಕು."

ಅವಳ ಸಣ್ಣ ಪೆಟ್ಟಿಗೆಯ ಕಡೆ ನೋಟ ಮಿಂಚಿಸಿ ಸ್ವರ್ಣಮ್ಮ ಸೊಸೆಯನ್ನು ಮೇಲಿನ ಕೋಣೆಗೆ ಕರೆದೊಯ್ದಳು. ಮೆಟ್ಟಿಲು ಏರುವಾಗ ತಲೆ ಬಿರಿಯುವಂತೆ ಹರಡಿತು ಪ್ರಶ್ನೆ. ಕಾರ್ತೀಕನ ಬುದ್ಧಿಗೆ ಗ್ರಹಣ ಹಿಡಿಯಿತೆ? ಹುಡುಗಿಯ ರೂಪು, ವಯಸ್ಸು, ನಿಲುವು ಯಾವುದೂ ಅವನ ಜೊತೆಗೆ ಅಸಮಂಜಸ! ಮಗ ಹೇಳಿದಂತೆಯೇ ಅವಳಿಗೆ ಆಘಾತ ತಟ್ಟಿಸಿದ್ದ.

ಸೌಭಾಗ್ಯ ಕೋಣೆಯಲ್ಲಿ ಕಣ್ಣು ಹರಿಸಿದಳು. ಪುಸ್ತಕಗಳಿಂದ ತುಂಬಿದ ಉಕ್ಕಿನ ರ್‍ಯಾಕುಗಳು. ಮೇಜಿನ ಮೇಲೆ ಸಣ್ಣ ವಿದ್ಯುತ್ ಲ್ಯಾಂಪ್, ಬಿಲ್ಲಿನಾಕಾರದ ಕಿಟಕಿ, ಅದರಿಂದ ಹೊರ ರಸ್ತೆ ಚೆನ್ನಾಗಿ ಕಾಣುತ್ತಿತ್ತು. ಕಿಟಕಿ ಬಾಗಿಲಿಗೆ ಹಳದಿ ತೆರೆಗಳು.

"ಕೋಣೆ ಹೇಗಿದೆ?"

ಇಬ್ಬರನ್ನೂ ಅನುಸರಿಸಿ ಬಂದಿದ್ದ ಕಾರ್ತೀಕ ಅವಳನ್ನು ಮೆಲ್ಲನೆ ಪ್ರಶ್ನಿಸಿದ.

"ಬರಹಗಾರರ ಕೋಣೆ ಅಲ್ಲವೆ."

ಅರಳಿದ ಕಣ್ಣುಗಳಲ್ಲಿ ಮೆಚ್ಚಿಗೆ ತೋರಿದಳು. ತೀವ್ರಗೊಂಡ ಮಳೆಯ ಸದ್ದು ಕೇಳಿ ಕಿಟಕಿಯಲ್ಲಿ ಇಣಿಕಿದಳು. ಅವನೂ ಅವಳ ಭುಜದ ಕಡೆಯಿಂದ ರಸ್ತೆ ನೋಡಿದ.

"ನೀನು ಬರೊ ಕಡೆಗೆಲ್ಲ ಮಳೆ ತರ್‍ತೀಯ. ನಿನ್ನ ಕಂಡ ಮೊದಲ ದಿನ ಆ ಸರ್ಕಸ್‌ನಲ್ಲಿ ಮಳೆ. ಇವತ್ತು ನನ್ನ ಮನೆಗೆ ಬಂದಾಗಲೂ ಮಳೆ ನಮ್ಮಿಬ್ಬರ ಬದುಕಿನಲ್ಲಿ ಮಳೆಯ ಪಾತ್ರ ದೊಡ್ಡದು."

ಸ್ವರ್ಣಮ್ಮ ಕಿಟಕಿ ತೆರೆ ಎಳೆದು ದೀಪ ಹಾಕಿದಳು.

ಸೌಭಾಗ್ಯ ಇಲ್ಲೇ ಇರಬೋದು ನಾನು ಪಕ್ಕದ ಕೋಣೇಲಿ ಇರ್‍ತೀನಿ.

ಕಾರ್ತೀಕ ಮನಸ್ಸು ಹೊರದೂಡಿದ ಮಾತನ್ನು ಆಡಿದ. ಅದಕ್ಕೆ ತಾಯಿ ಏನೂ ಹೇಳದಿದ್ದುದು ಅವನಿಗೆ ಸಮಾಧಾನವಾಯಿತು.

"ಹೌದು, ಹುಡುಗಿಗೆ ಪ್ರಯಾಣದ ಆಯಾಸ."

ಎಂದು ಸ್ವರ್ಣಮ್ಮ ಬೆಳಕಿನಲ್ಲಿ ಸೊಸೆಯನ್ನು ಸಮೀಪದಿಂದ ಅವಲೋಕಿಸಿದಳು.

ಕಪ್ಪು ಅಂಚಿನ ಕೆಂಪು ಸೀರೆ. ಕಪ್ಪು ಕುಪ್ಪಸದಲ್ಲಿನ ಕೃಶ ಶರೀರ. ನಸುಗಪ್ಪು ಮುಖ. ಹೊಳಪು ಕಣ್ಣುಗಳು. ಕಿವಿಗಳಲ್ಲಿ ತೂಗಿದ ಚಿನ್ನದ ರಂಗಿನ ಉಂಗುರಗಳು.

ಮನೆಗೆಲಸದಿಂದ ಒರಟಾನ ಕಪ್ಪು ಕೈಗಳು.

"ಸೌಭಾಗ್ಯಳ ತಾಯಿ ನಿನ್ನೆ ತೀರಿಕೊಂಡ್ಲು. ಆ ವಿಷಯ ನಿಧಾನವಾಗಿ ಹೇಳ್ತೀನಿ."

ಮಗನ ಮಾತು ಅವಲೋಕನಕ್ಕೆ ತಡೆ ಹಾಕಿತು. ತಲೆಯಲ್ಲಿ ಹೊಗೆ ತುಂಬಿತು. ಸಮಸ್ಯೆಯ ಸೊಸೆ! ನಿರಾಶೆ, ಜಿಗುಪ್ಸೆಯೊಂದಿಗೆ ಕನಿಕರ ಕೂಡಿತು. ಏನೂ ಹೇಳದಾದಳು.

ಅರ್ಥವಾಗಿತ್ತು. ಮಗ ಈ ಹುಡುಗಿಯ ಮೇಲೆ ಪ್ರೀತಿ ಹೊಂದಿಲ್ಲ. ಒತ್ತಾಯದ ಮದುವೆ.

"ಊಟಕ್ಕೆ ಸಿದ್ಧ ಮಾಡ್ತೀನಿ" ಹೆಜ್ಜೆ ಸರಿಸಿದಳು.

"ನಾನು ಸಹಾಯ ಮಾಡ್ಲೆ?"

ಹಿಂಜರಿಯುತ್ತ ಲಜ್ಜೆಯಿಂದ ಕೇಳಿದಳು.

"ಬೇಡ, ಬೇರೆ ಸೀರೆ ಉಟ್ಕೊ ಮೊದಲು."

ಸಶಬ್ದವಾಗಿ ಕೋಣೆಯ ಬಾಗಿಲು ಮುಚ್ಚಿ ಹೊರಬಿದ್ದಳು ಸ್ವರ್ಣಮ್ಮ ಕಿಟಕಿಯ ತೆರೆ ಉಬ್ಬಿಸಿ ಗಾಳಿ ಸುಯ್ಯನೆ ಬೀಸಿತು.

ಸೌಭಾಗ್ಯ ಮತ್ತೊಮ್ಮೆ ಕೋಣೆಯಲ್ಲಿ ತೇಲು ದೃಷ್ಟಿ ಸುತ್ತಿಸಿದಳು. ಗಾಳಿ ಚೆನ್ನಾಗಿ ಆಡುತ್ತಿದ್ದರೂ ಉಸಿರು ಬಿಗಿ ಹಿಡಿಸುವ ವಾತಾವರಣ. ಬೆಳಕು ಹರಡಿದ್ದರೂ ಮಾಸಲು ಕತ್ತಲಿನ ಪದರ.

ಹೃದಯ ಕುಸಿಯಿತು. ತನ್ನ ಮನೆಯಿಂದ, ತನ್ನವರಿಂದ ಸಹಸ್ರಾರು ಮೈಲಿ ದೂರಕ್ಕೆ ಬಂದಿರುವೆ ಎನಿಸಿತು. ವಿಶಾಲ ಮರುಭೂಮಿಯಲ್ಲಿ ಏಕಾಕಿ!

ಕಾರ್ತೀಕ ಸಮಾಧಾನದ ಮಾತು ಆಡುತ್ತಿದ್ದ.

"ನಿನಗೆ ಇಲ್ಲಿ ಎಲ್ಲಾ ಇದೆ. ಆರಾಮವಾಗಿ ಇರಬೋದು. ನನ್ನ ಅಧೀನದಲ್ಲಿ ಇರೋಳು ಅಂತ ಯಾವತ್ತೂ ತಿಳೀಬೇಡ. ನಾನು ಮನೆಯಿಂದ ಆಗಾಗ್ಗೆ ಹೊರ ಸ್ಥಳಕ್ಕೆ ಹೋಗ್ತಾ ಇರ್ತಿನಿ. ನಾನು ಕಥೆ ಬರೆಯೊ ಮನುಷ್ಯ ಅಲ್ಲವೆ? ಯಾವುದೊ ಚಿತ್ರದೋರು ನನಗೆ ಸಂಭಾಷಣೆ ಬರೆಯೊ ಕೆಲಸ ಒಪ್ಪಿಸಿದ್ದಾರೆ. ನಿನಗೆ ಇಲ್ಲಿ ಯಾವ ಕಷ್ಟವೂ ಆಗೋದಿಲ್ಲ. ಅಮ್ಮ ಬಹಳ ಒಳ್ಳೇಳು. ನಿಮ್ಮಮ್ಮ ಅಂತ ಈ ಮಾತು ಹೇಳ್ತಿಲ್ಲ."

ಹಾರ್ದಿಕವಾಗಿ ನಗೆ ತೋರಿದ.

"ಹುಂ" ಶಿಶುವಿನ ಪ್ರತಿಕ್ರಿಯೆ ಅವಳದು.

"ಸುಮ್ಮನೆ ಮನೇಲಿ ಕೂಡ್ತೋದು ಬೇಜಾರಾಗಬೋದು. ನನ್ನ ಹಾಗೇ ನಿನಗೂ ಕೆಲಸ ಬೇಕು. ನಿನ್ನ ಕಂಠ ವ್ಯರ್ಥವಾಗಬಾರದು ನೋಡು."

ನಿರ್ಮಲವಾದ ಅವಳ ಮುಖ ನೋಡಿದ.

ಬರ್ನಾರ್ಡ್ ತನಗೆ ಬೆದರಿಕೆ ಹಾಕಿದ್ದು ಇವಳಿಗೆ ತಿಳಿದಿಲ್ಲ! ಎಳೆಯ ಮನದಲ್ಲಿ ಪುಟಿಯುವ ಭಾವನೆಗಳನ್ನು ನೋಯಿಸಲು ತನಗೆ ಇಚ್ಛೆ ಇಲ್ಲ. ತನ್ನ ಕೆಲಸಗಳಿಗೆ ಇವಳು ಅಡ್ಡಿಯಾಗುವಂತೆಯೂ ಇಲ್ಲ.

ಪ್ರಶ್ನೆ ಮನದಲ್ಲಿ ಏಕಾಏಕಿ ತಲೆ ಎತ್ತಿತು. ಸೌಭಾಗ್ಯಳ ಬಾಳು ಹಾಳು ಮಾಡಿದೆನೆ?

"ನೀವು ಪರಸ್ಥಳಕ್ಕೆ ಹೋಗ್ತಾ ಇರ್ತೀರಾ?"

ಬೆದರಿದ ಹುಲ್ಲೆಯಂತೆ ಕೇಳಿದಳು. ಅವಳ ಕೆನ್ನೆ ತಟ್ಟಿದ.

'ಹೇಳ್ತೀನಿ. ಸೀರೆ ಬದಲಾಯಿಸಿ ಊಟಕ್ಕೆ ಬಾ."

ಊಟ ಮುಗಿಸಿ ಮೇಲೆ ಬಂದ ಸೌಭಾಗ್ಯ ಕೋಣೆಯ ಗೋಡೆ ಒರಗಿ ದೀಪ ನೋಡುತ್ತ ನಿಂತಳು. ಸ್ವರ್ಣಮ್ಮ ತನ್ನ ಮೇಲೆ ಹೂಡಿದ ವೀಕ್ಷಣೆಯ ನೆನಪು ಬಂತು. ಅವಳ ನೋಟ, ಮಾತು, ತನ್ನ ಬಗ್ಗೆ ಅತೃಪ್ತಿ ಸೂಚಿಸಿದ.

ಕೆಂಪು ನೆಲದ ಕೋಣೆ ಬಂದಿಖಾನೆಯಂತೆ ಕಾಣಿಸಿತು. ಜಮಖಾನೆಯ ಮೇಲೆ ಕಾಲಿರಿಸಲು ಭಯ. ದೀಪ ಗಾತ್ರದಲ್ಲಿ ಉಬ್ಬಿದಂತಾಯಿತು.

ನಿಟ್ಟುಸಿರು ಹೊರಬಂತು. ಕಾರ್ತೀಕನ ಆಶ್ರಯದಲ್ಲಿ ಭಯಪಡುವ ಅಗತ್ಯವಿಲ್ಲ. ಕೋಣೆಯ ಅವಲೋಕನಕ್ಕೆ ಈಗ ಆತುರ ಇರಲಿಲ್ಲ. ಕಣ್ಣು ಗೋಡೆಯ ಮೇಲೆ ಸುತ್ತಿತು. ಎಲ್ಲವೂ ಕಾರ್ತೀಕನ ಭಾವಚಿತ್ರಗಳು. ಮಾವಿನ ಮರದಡಿಯಲ್ಲಿ ಬುಲ್ ಬುಲ್ ತರಂಗ್ ಹಿಡಿದು ಕುಳಿತಂತೆ ತನ್ಮಯವಾಗಿ ಬರೆಯುತ್ತಿರುವಂತೆ. ಪಕ್ಷಿಗಳನ್ನು ಗಾಳಿಗೆ ತೂರುತ್ತಿರುವಂತೆ... ಎಲ್ಲವೂ ಚೆಂದದ ಭಂಗಿಗಳು. ಮೇಜಿನ ಫೋಟೋ ಸ್ಟ್ಯಾಂಡ್ ಬರಿದಾಗಿದೆ. ಅದರಲ್ಲಿ ಚಿತ್ರವಿಲ್ಲ.

ಕನ್ನಡಿಯಲ್ಲಿ ನೋಡಿಕೊಂಡಳು. ಸ್ವರ್ಣಮ್ಮನ ನೋಟದಲ್ಲಿ ತುಂಬಿದ ಸಂಶಯಕ್ಕೆ ಅರ್ಥವಿದೆ. ಪತಿ, ಮನೆ, ಪರಿಸರವನ್ನು ತುಂಬಲಾಗದ ಅಗಾಧ ನಿಮ್ನತೆ ತನ್ನಲ್ಲಿದೆ!

ಕಿಟಕಿಗೆ ಬಂದು ನಿಂತಾಗ ಅದೇ 'ಸುಂಯ್' ಗುಡುವ ಗಾಳಿ. ಅದರ ತೂರಿ ಬಂದ ತವರಿನ ಕರೆ. ಹಿತವಿರುವುದು ಹಾರಂಗಿಯಲ್ಲಿ. ಮಮ್ಮಿಯ ನರಳುವಿಕೆ, ಅಲ್ಯೂಮಿನಿಯಂ ಪಾತ್ರೆಗಳ ಟಳಟಳ ಸದ್ದು, ರೂತಮ್ಮನ ಗಡಸು ಗಂಟಲು ಕೇಳಿ ಬರಬೇಕು. ಕೆಂಪು ಕಣಗಲೆ ಗಿಡದ ನೀಳ ಕಾಂಡಗಳು ಗಾಳಿಗೆ ತುಯ್ದಾಡಿ ಗೋಡೆಗೆ ರಪರಪ ಬಡಿಯಬೇಕು. ಪಪ್ಪನ ಗದರಿಕೆಗೆ ಬೆಚ್ಚಿಬೀಳಬೇಕು. ಮಮ್ಮಿ ಹೊರಟುಹೋದಳು! ದುಃಖ ಉಮ್ಮಳಿಸಿ ಬಂತು.

ಕೋಣೆಯ ಬಾಗಿಲು ಮುಚ್ಚಿ ಹೊಸ ಪ್ರಪಂಚದಿಂದ ಬೇರ್ಪಟ್ಟು ನಿಂತಳು. ತಾನು ಇಲ್ಲಿಗೆ ಸೇರಿದವಳಲ್ಲ. ಅಲ್ಲಿಗೆ ಹಿಂತಿರುಗುವಂತಿಲ್ಲ!

ಇಂಪಾದ ರಾಗ ಅವಳನ್ನು ಎಚ್ಚರಿಸಿತು. ಹಜಾರದ ರೇಡಿಯೋದಿಂದ ಹೊಮ್ಮಿದ ಧ್ವನಿ ಮೋಡದಂತೆ ಮೇಲೆದ್ದು ಅವಳನ್ನು ಅಲುಗಿಸಿತು. ತಲೆಗೂದಲು ಸರಿಪಡಿಸಿಕೊಂಡು, ಸಂಗೀತ ಸ್ವರವನ್ನು ಸವಿಯುತ್ತ ನಿಧಾನವಾಗಿ ಮೆಟ್ಟಿಲಿಳಿದು ಬಂದಳು. ಕಾರ್ತೀಕ ಕಾಲು ಚಾಕಿ ಬೆತ್ತದ ಕುರ್ಚಿಯಲ್ಲಿ ಮೈ ಹರಡಿದ್ದ. ಅವನ ಪಕ್ಕಕ್ಕೆ ರೇಡಿಯೋಗ್ರಾಮ್. ಅದರ ಅಂಚಿಗೆ ಜೋಡಿಸಿದ ರೆಕಾರ್ಡ್‌ಗಳು.

"ನನಗೆ ಗೊತ್ತು ಸಂಗೀತ ಕೇಳುತ್ಲೇ ಇಳಿದು ಬರ್ತೀಯ ಅಂತ. ಈ ರೆಕಾರ್ಡ್ ನಿನಗೆ ಹಿಡಿಸ್ತೇ?" ಕಾರ್ತೀಕ ಕೇಳಿದ.

"ಹುಂ" ಉಸಿರ್ಗರೆದಳು.

ಮತ್ತಷ್ಟು ಕೇಳುವ ತನಕ. ಅಷ್ಟರಲ್ಲಿ ಸ್ವರ್ಣಮ್ಮ ಇಬ್ಬರನ್ನೂ ಅಡಿಗೆ ಮನೆಯಿಂದ ಕೂಗಿದಳು. ಅಡಿಗೆ ಕೋಣೆಯ ಕಟ್ಟೆಯ ಮೇಲೆ ಸೇಬು ಚೂರುಗಳ ಎರಡು ತಟ್ಟೆ, ಹಾಲಿನ ಎರಡು ಲೋಟ ಸಿದ್ಧವಾಗಿದ್ದವು.

ಹೊಗೆಯ ಒಂದು ರೇಖೆಯನ್ನೂ ಕಾಣದ ಅಡಿಗೆ ಕೋಣೆಯ ಅಚ್ಚ ಬಿಳುಪು ಗೋಡೆಯನ್ನು ಚಕಿತಳಾಗಿ ನೋಡಿದಳು. ಮೂಲೆಯ ಹೂದಾನಿ, ಕಪಾಟಿನಲ್ಲಿ ಜೋಡಿಸಿದ ಕಪ್, ಸಾಸರ್‌ಗಳು ಅಂದವಾಗಿ ಕಂಡಾಗ ತನ್ನ ಮನೆಯ ವಿರುದ್ಧ ಚಿತ್ರ ತಪ್ಪದೆ ನೆನಪಿಗೆ ಬಂತು.

"ಕೇಶವಲು ಮನೇಲಿ ಕಪ್, ಸಾಸರ್ ಇವೆ. ಆದರೆ ಇಷ್ಟು ಚೆನ್ನಾಗಿಲ್ಲ."

ಮೆಚ್ಚಿಗೆ ತೋರುವ ಭರದಲ್ಲಿ ಆ ಮಾತು ಅದೇ ಬಂತು. ಕಾರ್ತೀಕ ನಾಲಗೆ ಚಾಚಿದ.

"ಕೇಶವಲು ಅಂದ್ರೆ ಯಾರು? ನಿಮ್ಮ ಸ್ನೇಹಿತರೆ?"

ಸ್ವರ್ಣಮ್ಮ ಆಸಕ್ತಿಯಿಂದ ಕೇಳಿದಳು.

"ಪಪ್ಪನ ಸ್ನೇಹಿತರು. ಅವರೂ ಟ್ರಕ್ ನಡೆಸ್ತಾರೆ."

"ಅಂದ್ರೆ ನಿನ್ನ ಪಪ್ಪ ಟ್ರಕ್ ಡ್ರೈವರೆ?"

ಅಂಬಿನಂತೆ ಬಂತು ಪ್ರಶ್ನೆ. ಹುಡುಗಿ ತಲೆ ತಗ್ಗಿಸಿದಳು.

ಸ್ವರ್ಣಮ್ಮ ನಿರಾಶೆಯ ಹತ್ತು ಮೆಟ್ಟಿಲು ಒಟ್ಟಾಗಿ ಜಾರಿದಳು. ಸೊಸೆಯ ಬಾಲಿಶ ವರ್ತನೆ. ಅಪ್ರಬುದ್ಧ ಮಾತು ಅವಳನ್ನು ಶೀತಳ ಹೊಂಡಕ್ಕೆ ಕೆಡವಿದವು. ತಾಯಿಯ ಮುಂದಿನ ಪ್ರಶ್ನೆಗಳಿಗೆ ತಡೆ ಕೊಡುವಂತೆ ಹೇಳಿದ ಮಗ.

"ಹೌದು, ಅವಳ ಪಪ್ಪ ಬರ್ನಾರ್ಡ್ ಟ್ರಕ್ ಡ್ರೈವರ್. ಆದರೆ ಒಳ್ಳೆ ಅನುಭವಿ ಚಾಲಕ. ಸೌಭಾಗ್ಯ ಹೈಸ್ಕೂಲಿಗೆ ಒಂದು ವರ್ಷ ಹೋದೋಳು"

"ಮಮ್ಮಿ ಮನೇಲಿ ಪಾಠ, ಸಂಗೀತ ಹೇಳಿಕೊಟ್ಲು"

ಧೈರ್ಯವಾಗಿ ಮಾತು ಸೇರಿಸಿದಳು ಸೌಭಾಗ್ಯ. ಅತ್ತೆಯ ಮುಖದ ಸಂತಸ, ಪ್ರೀತಿಯ ಪ್ರತಿಕ್ರಿಯೆ ನಿರೀಕ್ಷಿಸಿದಳು. ಒಂದು ಕಾಲದಲ್ಲಿ ಖ್ಯಾತ ನಟಿಯಾದರೂ ಸ್ವರ್ಣಮ್ಮ ನಟನೆಯ ಭಾವ ತೋರಲಿಲ್ಲ. ಗಂಭೀರವಾಗಿತ್ತು ಆ ಮುಖ. ಇಬ್ಬರ ಚಕಮಕಿ ವರ್ತನೆಗಳು ಕಾರ್ತೀಕನಿಗೆ ವಿನೋದವಾಗಿತ್ತು. ಪಳಗಿದ ಅಭಿನೇತ್ರಿಯ ಮುಂದೆ ಸೌಭಾಗ್ಯ ಪ್ರದರ್ಶನದ ಪ್ರಾಣಿ!

ಅವನು ತಟ್ಟೆ, ಲೋಟ ಬರಿದು ಮಾಡಿದ. ಹುಡುಗಿ ಬಿಗಿ ಕೊರಳಿನಲ್ಲಿ ಅರ್ಧ ಹಾಲು ಸೇವಿಸಿದಳು.

"ತಟ್ಟೆ, ಲೋಟ ಹಾಗೇ ಇರಲಿ. ಬೆಳಿಗ್ಗೆ ತೊಳೆದರಾಯ್ತು."

ನಿರ್ಲಕ್ಷತೆಯಲ್ಲಿ ಹೇಳಿದ ಸ್ವರ್ಣಮ್ಮ ಹಜಾರಕ್ಕೆ ಬಂದು ಕುಳಿತಳು. ಮತ್ತೆ ಬೆತ್ತದ ಕುರ್ಚಿ ಹಿಡಿದ ಕಾರ್ತೀಕ ನಯವಾಗಿ ಸೂಚಿಸಿದ.

"ಅಮ್ಮ ಹಾಡು ಕೇಳೋ ಹೊತ್ತು. ರೇಡಿಯೋಗ್ರಾಮ್ ಬೇಡ. ನೀನು ಹಾಡು, ಸೌಭಾಗ್ಯ."

ಬೆದರಿದ ಹುಡುಗಿ ಅವನತ್ತ ಲಜ್ಜೆಯ ಮುಖ ಮಾಡಿದಳು.

"ಪರವಾಗಿಲ್ಲ ಹೇಳು" ಸ್ವರ್ಣಮ್ಮನ ಒತ್ತಾಯ ಬಂತು.

ಕುರ್ಚಿಯಿಂದ ಎದ್ದ ಕಾರ್ತೀಕ ಅವಳನ್ನು ಉತ್ತೇಜಿಸಿದ.

"ನಾಚಿಕೊಬೇಡ. ಮತ್ತೆ ನೀನು ಸರ್ಕಸ್ ಡೇರೆಯ ಕತ್ತಲಿನಲ್ಲಿದೀಯ ಅಂತ ತಿಳೀಬೇಕು."

ಹಾಗೆಂದು ಕಪಾಟಿನಿಂದ ಬುಲ್ ಬುಲ್ ತರಂಗ್ ತೆಗೆದು ಎರಡು ನಿಮಿಷ ಇಂಪಾಗಿ 'ಚಿಣ್ ಚಿಣ್' ರಾಗ ನುಡಿಸಿ ತುಂಟ ಕಣ್ಣುಗಳಿಂದ ಅವಳನ್ನು ಇರಿದ.

"ನಿಮಗೆ ಇದೂ ನುಡಿಸೋಕೆ ಬರತ್ತೆ."

ಬೆರಗಾದ ಮಿನುಗು ವಾದ್ಯದ ಮೇಲಿತ್ತು.

"ಮಾವಿನ ತೋಪಿನಲ್ಲಿ ಕಲಿತದ್ದು. ಅಮ್ಮ ಇದನ್ನ ಪೋಲಿಗಳ ವಾದ್ಯ ಅಂತಾಳೆ. ಈಚೆಗೆ ಇದನ್ನ ಬಳಸೋದು ಅಪರೂಪ. ಅಮ್ಮ ಹಾರ್ಮೋನಿಯಂ ನುಡಿಸ್ತಾಳೆ, ಒಳ್ಳೆ ಅಭಿನೇತ್ರಿ ಅಂತ ಹೆಸರು ಪಡೆದೋಳು."

ಪ್ರಶಂಸೆಯಿಂದ ನಾಚಿದ ಸ್ವರ್ಣಮ್ಮ 'ಸಾಕು' ಎಂದು ನಯವಾಗಿ ಗದರುವಂತೆ ಬೆರಳೆತ್ತಿ ಸನ್ನೆ ಮಾಡಿದಳು.

"ಹಾಡು, ಸೌಭಾಗ್ಯ" ಮತ್ತೆ ಲಘುವಾಗಿ ಅಣತಿ ಕೊಟ್ಟಳು.

"ನನಗೆ.....ನನಗೆ ಒಳ್ಳೆ ಹಾಡು ಬರೋದಿಲ್ಲ."

ತಡವರಿಸಿದಳು ಉಸಿರಾಟ ಏರಿತು.

ಕಾರ್ತೀಕ ಅವಳ ಸಮೀಪಕ್ಕೆ ಬಂದು ಕಿವಿಯಲ್ಲಿ ಹೇಳಿದ.

"ಹೆದರಬೇಡ. ಸುಮ್ಮನೆ ರಾಗ ತೆಗಿ.....ನಮ್ಮಮ್ಮನ ಗೆಲ್ಲೊ ವಿಧಾನ ಇದು."

ಸೌಭಾಗ್ಯಳಿಗೆ ತಾಯಿ ಹೇಳುತ್ತಿದ್ದುದು ನೆನಪಿಗೆ ಬಂತು, ಹಾಡು ಸುಗಮವಾಗಿ ಹೊರಬೀಳಲು ಉದ್ರೇಕ, ಬಿಗಿತ, ಲಜ್ಜೆ ಕೂಡದು.

ಕಣ್ಣು ಮುಚ್ಚಿ ಮುಷ್ಠಿ ಬಿಗಿಸಿದಳು. ರಾಗ ಹೊರಬಂತು.

'ಪ್ರೇಮಿಗಳೆರೆದರು ನೀರ ಗುಲಾಬಿಗೆ

ಝುಣ ಝುಣ ಬಳೆಯ ಕೈಗಳು ಎರಡು....'

ಹುಡುಗಿ ಕಣ್ಣು ತೆರೆದಳು. ಮುಷ್ಠಿ ಸಡಿಲವಾಯಿತು. ಸ್ವರ್ಣಮ್ಮನ ದೃಷ್ಟಿ ಮೊನಚಾಯಿತು, ತಡೆ ಇಲ್ಲದ ಅಪ್ಯಾಯ ಸ್ವರ!

ಹಾಡು ಸಾಗಿತು.

'ಮೀಸೆಯ ನೀವಿದ ಕೈಗಳು ಮತ್ತೆರಡು

ಗುಲಾಬಿ ಮಲಗಿತು ತಿಂಗಳ ಕೊನೆಗೆ....'

ಬೆರಗಾದಳು ಅಭಿನೇತ್ರಿ. ತೆಲುಗಿನ ಧಾಟಿ! ಕಿಶೋರಿಯ ಕಂಠದಿಂದ ಪ್ರೌಢ ಸುಶ್ರಾವ್ಯ ರಾಗ!

'ತಲೆಯಲಿ ಒಯ್ದಳು ಗುಲಾಬಿ ಹೂವ

ಉಳಿಸಿ ಹೋದಳು ಮುಳ್ಳು ಕಾಂಡವ....'

ಕಾರ್ತೀಕನನ್ನು ಬಡಿದೆಬ್ಬಿಸಿತು ಹಾಡು. ಸೆಟೆದು ಕುಳಿತ. ತನ್ನದೇ ಪ್ರೇಮಗಾಥೆ!

"ಇದು ತೆಲುಗಿನ ಹಾಡಲ್ಲವೆ?"

ಹಾಡು ಮುಗಿಯುತ್ತಲೇ ಸ್ವರ್ಣಮ್ಮ ಕೇಳಿದಳು.

"ಹೌದು, ನಮ್ಮ ಟೀಚರ್ ಅದನ್ನ ಕನ್ನಡಕ್ಕೆ ತಿರುಗಿಸಿ ಬರಕೊಟ್ಟರು."

"ಯಾರೊ ಚೆನ್ನಾಗಿ ಹೇಳಿಕೊಟ್ಟಿದ್ದಾರೆ."

ಹುಡುಗಿ ಹಿಗ್ಗಿದಳು. ಹಿಗ್ಗಿನಲ್ಲಿ ನಸುಗೋಪದ ಎಳೆ. ಸ್ವರ್ಣಮ್ಮ ತನ್ನ ಹಾಡು ಕೇಳಿದ ಮೇಲೆ ಹೃದಯ ಬಿಚ್ಚಿದ್ದು.

"ನನ್ನ ಮಮ್ಮಿ ಹೇಳಿಕೊಟ್ಲು."

ಕಾರ್ತೀಕ ಎದ್ದು ನಿಂತು ಮೆಲ್ಲನೆ ಚಪ್ಪಾಳೆ ತಟ್ಟಿದ.

"ಚೆನ್ನಾಗಿ ಹಾಡ್ದೆ ಅಂತ ಅಮ್ಮನ ಬಾಯಿಂದ ಬಂತು. ಅದು ನಿನಗೆ ಡಿಗ್ರಿ ಕೊಟ್ಟ ಹಾಗೆ. ಈಗ ಹೋಗಿ ನಿದ್ರೆ ಮಾಡು."

ತಲೆ ಎತ್ತಿ ನೇರವಾಗಿ ಅವನನ್ನು ನಿಟ್ಟಿಸಿದಳು. ಮಗುವಿಗೆ ತಿಳಿಸುವಂತೆ ತನಗೆ

ನಿದ್ರೆ ಮಾಡಲು ಸೂಚನೆ! ವಿಧೇಯತೆಯಿಂದ ಮೆಟ್ಟಿಲು ಏರಿದಳು. ಅವರಿಬ್ಬರೂ ತನ್ನನ್ನು ಹೊರಡಿಸಿದರು ಎಂಬ ಕಾವು ಮೈಯೇರಿತು. ಅತ್ತೆಯ ಮಾತು ಕೇಳಿಸಿತು.

"ಕಾರ್ತು, ನಿನಗೆ ಇಂಥಾ ಹುಚ್ಚು ಎಲ್ಲಿ ಹಿಡೀತು?"

ಏರುತ್ತಿದ್ದ ಹೆಜ್ಜೆಗಳು ಸ್ಥಗಿತಗೊಂಡವು.

"ಹುಚ್ಚು ಹಿಡಿಸುವಂತ ಕಂಠ ಅವಳದು, ಅಲ್ವೇನಮ್ಮ?"

"ಹೌದು, ಆ ಕಂಠಕ್ಕೋಸ್ಕರ ಮದುವೆ ಆದೆಯಾ?.... ಶರ್ಮಿಳಾ ಹಾಗೆ ಮಾಡಿದ್ಲು ಅಂತ ನೀನು ಹೀಗೆ ಮಾಡಿದೆಯಾ?"

ಮಾತು ಅಸ್ಪಷ್ಟವಾದರೂ ತನ್ನ ಕುರಿತು ವಿಷಯ ಸಾಗುತ್ತಿದೆಯೆಂಬುದು ಸ್ಪಷ್ಟ. ಕಾಲುಗಳು ಕಂಪಿಸಿದವು. ಹೆಜ್ಜೆಗಳು ವೇಗವಾಗಿ ಏರಿದವು.

ಶರ್ಮಿಳಾ ಮೇಲೆ ಸೇಡು ತೀರಿಸಿಕೊಳ್ಳಲು ಮಾಡಿಕೊಂಡ ವಿವಾಹ ತಾಯಿಯ ಅಭಿಪ್ರಾಯ ಕಟು ಸತ್ಯ. ಮಲ್ಲಿಕಾರ್ಜುನ ಅದೇ ಪ್ರತಿಕ್ರಿಯೆ ತೋರಿದ್ದ.

ಕಾರ್ತೀಕನ ಮೌನ ಕಂಡು ತಾಯಿ ಮತ್ತೆ ಹೇಳಿದಳು.

"ನೀನು ಬದುಕಿನಿಂದ ದೂರ ಆಗಿ ಬಾಗಿಲು ಮುಚ್ಚಿಕೊಂಡಿರಬಾರದು, ಕಾರ್ತು. ಧೈರ್ಯವಹಿಸಬೇಕು. ಗದುಗಿನ ಕಂಪೆನಿಯ ಒಳ್ಳೆ ನಟಿ ಅನ್ನೊ ಹೆಸರು ಹತ್ತು ಜನರ ನಾಲಿಗೆ ಮೇಲಿದ್ದಾಗ ಧೈರ್ಯಮಾಡಿ ನಿಮ್ಮ ತಂದೆ ಜೊತೆಗೆ ಬಂದೋಳು ನಾನು. ನೀನು ಇನ್ನೂ ಧೈರ್ಯ ವಹಿಸಲು ಶಕ್ತಿ ಇರೋನು. ಆದರೆ ಹುಚ್ಚು ಧೈರ್ಯ ಅಲ್ಲ. ಈ ಹುಡುಗೀನ ಯಾಕೆ ಕರಕೊಂಡು ಬಂದೆ?"

ಕಥೆ ಕೇಳಿದರೆ ತಾಯಿ ಸೌಭಾಗ್ಯಳ ಮೇಲೆ ತಾತ್ಸಾರ ಭಾವ ತಳೆಯುವಳೆಂದು ಬಲ್ಲ.

"ಅದನ್ನ ನೀನು ಅರ್ಥ ಮಾಡಿಕೊಳ್ಳಲಾರೆ."

ತಾಯಿಯ ಕೈ ಹಿಡಿದು ನಿಧಾನವಾಗಿ ನುಡಿದ. ಅವಳ ಘನತೆಗೆ ಪೆಟ್ಟಾಗಿತ್ತು. ಮರುಕ್ಷಣ ಮೆದುವಾದಳು.

"ನಿನಗೆ ಯಾವ ವಿಷಯದಲ್ಲಿ ಸಹಕಾರ ತೋರಿಲ್ಲ?"

"ಇಲ್ಲ ಅಂದೆನೆ? ಈ ವಿಷಯ ಬೇರೆ. ನನಗೆ ಬದುಕಿನ ನೋವು ಮೊದಲೇ ಗೊತ್ತಾಗಲಿಲ್ಲ."

"ಆ ನೋವು ನಿವಾರಿಸಿಕೊಳ್ಳೋದಿಕ್ಕೆ ದಾರಿ ಇತ್ತು."

"ದಾರಿಗೆ ಕತ್ತಲು ಕವಿದಿತ್ತು. ಸರ್ಕಸ್ ಗುಡಾರದಲ್ಲಿ ಹುಡುಗೀನ ನೋಡ್ದೆ. ಅಲ್ಲೂ ಕತ್ತಲು! ಕತ್ತಲಿನಲ್ಲಿ ಗುನುಗುನು ಹಾಡಿದ್ಲು. ನನ್ನ ಹೃದಯದ ಕತ್ತಲಿನಲ್ಲಿ ಸಣ್ಣ ಬೆಳಕು ಮೂಡಿದ ಹಾಗಾಯ್ತು. ಜಲಾಶಯದ ಕಾಡಿನಂತ ಭಾಗದಲ್ಲಿ ಅವಳ

ಮನೆ ನೋಡ್ದೆ. ಅವಳ ತಾಯಿ ಕೆಟ್ಟ ಗಂಡನ ಜೊತೆ ಬಾಳು ಸವೆಸಿ ಹಣ್ಣಾದ ಹೆಂಗಸು. ಅವಳಿಗೆ ಮಗಳ ಭವಿಷ್ಯದ ಚಿಂತೆ, ಸಾವಿನ ದವಡೆಯಲ್ಲಿದ್ದೋಳಿಗೆ ನಾನು ಕಿಂಚಿತ್ ಸಹಾಯ ಮಾಡ್ದೆ. ಸಾವು ಕೆಲವು ತಾಸುಗಳಷ್ಟು ಮುಂದಕ್ಕೆ ಹೋಗಿರಬೋದು. ಹುಡುಗಿಯ ರಕ್ಷಣೆಗೆ ನನ್ನಿಂದ ಮಾತು ತೊಗೊಂಡ್ಲು."

"ಅನ್ಯಾಯ, ಕಾರ್ತು! ಅಲ್ಲಿ ನಡೆದಿದ್ದು ವಂಚನೆ."

ಬಿರುಸಾಗಿ ಹೇಳಿದಳು.

"ಇರಬೋದು. ನನಗೆ ವಂಚನೆ ಆಗಿರೋದು ಅದೇ ಮೊದಲಲ್ಲ. ಹುಡುಗಿಯ ತಂದೆ, ತಾಯಿ ನನ್ನ ಮೃದುತ್ವಾನ ಬಳಸಿಕೊಂಡಿರಬೋದು."

ಬರ್ನಾರ್ಡ್‌ನ ಬೆದರಿಕೆಯ ಒಂದಂಶವೂ ಹೊರಬೀಳದಂತೆ ಎಚ್ಚರಿಕೆ ವಹಿಸಿದ. ಮತ್ತೆ ನಿರ್ವಿಕಾರವಾಗಿ ಹೇಳಿದ.

"ಇದರಲ್ಲಿ ಸೌಭಾಗ್ಯಳ ತಪ್ಪಿಲ್ಲ."

"ನಿಜವೆ?"

ವಿರೋಧಿಸುವಂತೆ ಕರ್ಕಶವಾಗಿ ಕೇಳಿದಳು.

"ಹೌದು, ಅವಳು ನಿರ್ದೋಷಿ . ಅವಳಿಗೆ ಏನೂ ತಿಳಿಯೋದಿಲ್ಲ. ನಾನು ಮಾಡಿದ್ದು ಸರಿಯೋ, ತಪ್ಪೊ ಗೊತ್ತಿಲ್ಲ. ನಾನು ಕಥೆ ಬರೀತೀನಿ. ಅವಳು ಹಾಡು ಹೇಳ್ತಾಳೆ. ನನ್ನ ಹೊಣೆಗಾರಿಕೆ ಮುಗಿದ ಮೇಲೆ ನನ್ನಿಂದ ದೂರವಾಗ್ತಾಳೆ."

ನೀಳವಾಗಿ ಉಸಿರ್ಗರೆದಳು. ಮಗನ ಭವಿಷ್ಯಕ್ಕಾಗಿ ಎಚ್ಚರಿಕೆಯಿಂದ ಕಟ್ಟಿದ ಮಹಲ್ ಬಿರುಕುತೋರಿತ್ತು.

"ನೀನು ಹಾಗೆ ಮಾಡೋದು ನ್ಯಾಯವೆ?"

"ನನ್ನ ಹೊಣೆಗಾರಿಕೆ ಅಷ್ಟೆ."

"ಹುಡುಗಿಗೆ ಏನು ದಾರಿ ತೋರಿಸ್ತೀಯ?"

ಅವನ ತುಟಿಗಳಲ್ಲಿ ನಗೆ ಮಿಂಚಿತು.

"ಸಂಗೀತ ಪಾಠಶಾಲೆ. ಅವಳು ಸಂಗೀತ ಕಲಿಯೋದು. ನೀನು ಅವಳಿಂದ ಸಂಗೀತ ಹೇಳಿಸಿ ಮೆಚ್ಚೋದು."

"ಅಂದ್ರೆ ಹುಡುಗೀನ ಪೂರ್ತಿಯಾಗಿ ನನ್ನ ವಶಕ್ಕೆ ಬಿಡ್ತೀಯ?"

ಮಗು ಗೋಣು ಆಡಿಸಿದ.

"ಅವಳು ಈ ಮನೇಲಿ ನಿನಗೆ ಜೊತೆಯಾಗಿರ್ತಾಳೆ. ಅವಳಿಗೆ ಕಂಠ ಒಲಿದು ಬಂದಿದೆ. ಕಲಿಯಬೇಕಾದ್ದು ವಿಶೇಷವಾಗಿದೆ. ನನ್ನ ಸಹಾಯ ಸಕಾಲಿಕವಾಗಿದೆ."

ಪ್ರತಿಭಟನೆಯ ಮಾತು ಅವಳಲ್ಲಿಯೇ ಅಡಗಿ ಹೋಯಿತು. ಮಗ ಪ್ರೇಮ ವಂಚಿತ. ಅವನಿಗೆ ಜೀವನದಲ್ಲಿ ಬೇಸರ ಬಂದಿದೆ. ಅಂತಹ ಪರಿಸ್ಥಿತಿಯಲ್ಲಿ ಸಾಯುವ ಹೆಂಗಸಿಗೆ ಕೊಟ್ಟ ಮಾತನ್ನು ನಡೆಸಿಕೊಡಲು ತನ್ನ ಬದುಕಿನಲ್ಲಿ ಇಂತಹ ಹೊಂದಾಣಿಕೆ ಮಾಡಿಕೊಂಡಿದ್ದಾನೆ.

ಕಾರ್ತೀಕ ಮೆಟ್ಟಿಲು ಏರಿ ಸೌಭಾಗ್ಯಳ ಕೋಣೆಯ ಮುಂದೆ ನಿಂತ.

ಪೂರ್ಣ ನಿಶ್ಶಬ್ದತೆಯಲ್ಲಿ ಮುಳುಗಿದ ಕತ್ತಲು ಕೋಣೆ. ಒನ ನಗೆಯೊಡನೆ ಪಕ್ಕದ ಕೋಣೆಗೆ ಅಡಿ ಇಟ್ಟ.

ಸೌಭಾಗ್ಯ ಕತ್ತಲು ಕೋಣೆಯಲ್ಲಿ ಕಣ್ಣು ತೆರೆದು ಮಲಗಿದ್ದಳು. ತಲೆಯಲ್ಲಿ ಪ್ರಶ್ನೆಗಳ ಹಾವಳಿ. ತನ್ನಲ್ಲಿರುವ ದೋಷ? ಹಾರಂಗಿಯ ಕಾಲೋನಿಯಲ್ಲಿ ಹುಡುಗಿಯರಿಗೆ ಸಂಗೀತದ ಗಂಧವೂ ಇರಲಿಲ್ಲ. ಅವರಿಗೆಲ್ಲ ಗಂಡನ ಪ್ರೀತಿ ದೊರಕಿದೆ. ತಾನು ಹೆಸರಾಂತ ಲೇಖಕನ ಚೆಂದದ ಮನೆಯಲ್ಲಿ ಅವನ ತಾಯಿಯೊಂದಿಗೆ ಸೇರಿರುವೆ. ಅವರಿಬ್ಬರಿಗೂ ತನ್ನ ಕಂಠದ ಹೊರತಾಗಿ ಮತ್ತೇನೂ ಬೇಡ.

* * *

ಮನೆಯ ಕೆಲಸಗಳಲ್ಲಿ ಕೈಗೂಡಿಸಿದರೂ ಹೊತ್ತು ದೂಡುವುದು ಕಷ್ಟವಾಗಿತ್ತು. ಕಾರ್ತೀಕ ಪತಿಯೆಂಬುದು ಕನಸಿನ ಸಂಗತಿಯಂತಿತ್ತು. ದಿನವೂ ಹೊಸ ವ್ಯಕ್ತಿ! ಮಾತು ಮೊದಲಿಗಿಂತಲೂ ಕಡಿಮೆಯಾಗಿತ್ತು. ಬೆಳಗ್ಗೆ ಹೊರಟರೆ ಮಧ್ಯಾಹ್ನ ಹಿಂತಿರುಗುತ್ತಿದ್ದ. ಊಟ ಮುಗಿಸಿದ ಮೇಲೆ ಕೋಣೆಯಲ್ಲಿ ಬರೆಯುವ ಕೆಲಸ. ಮತ್ತೆ ರಾತ್ರಿಯವರೆಗೆ ಮನೆಗೆ ಬರುವಂತಿಲ್ಲ. ರೇಡಿಯೋಗ್ರಾಮ್ ಕೇಳಿದ ಮೇಲೆ ಕೋಣೆಯಲ್ಲಿ ಪುನಃ ಬರವಣಿಗೆ. ಅವಳು ತನ್ನ ಕೋಣೆಯಲ್ಲಿ ಬಂಧಿನಿ.

ಅವನ ಪುಸ್ತಕಗಳ ಕೋಣೆ ತನ್ನದಾಗಿತ್ತು. ವಿಶ್ರಾಂತಿ, ನಿದ್ರೆಗೆ ಅಡ್ಡಿ ಇರಲಿಲ್ಲ. ಕಿಟಕಿಯ ಮುಂದೆ ನಿಂತರೆ ಸ್ಥಿರ ಚಿತ್ರಗಳಂತೆ ಅವೇ ದೃಶ್ಯಗಳು. ರಸ್ತೆಯ ಪಕ್ಕದ ಹೆಂಚಿನ ಮನೆಗಳ ಸಾಲು. ಅವುಗಳ ಹಿಂದಕ್ಕೆ ಹೊಸದಾಗಿ ನಿರ್ಮಿತವಾದ ವೈವಿಧ್ಯಮಯ ಕಟ್ಟಡಗಳು. ನಡುವೆ ನಾಲ್ಕು ತೆಂಗಿನ ಮರಗಳು. ವಾಹನಗಳ ಹರಿದಾಟದ ಸದ್ದು ಆ ದೂರಕ್ಕೂ ಕೇಳುತ್ತಿತ್ತು.

ಸ್ವರ್ಣಮ್ಮ ಅಂದು ಜನತಾ ಮಾರುಕಟ್ಟೆಗೆ ಕರೆದೊಯ್ಯುವಾಗ ಸೊಸೆಗೆ ಹೇಳಿದಳು.

"ಈ ಉಡುಪು ಹಾಕ್ಕೊಂಡು ಹೊರಗೆ ಬರಬಾರದು ಇನ್ನು ಮೇಲೆ."

ತನಗೆ ಅತ್ಯಂತ ಪ್ರಿಯವಾದ ಕಪ್ಪು ಕಡ್ಡಿಗೆರೆ ಇರುವ ಕಂದು ಬಣ್ಣದ ಲಂಗ, ಬಿಗಿ ತೋಳಿನ ಕುಪ್ಪಸ, ತಿಳಿ ಹಳದಿ ರಂಗಿನ ಧಾವಣಿಯ ಕಡೆ ಅತ್ತೆಯ ಬಾಣದ ನೋಟ ಹರಿದಾಡಿತ್ತು.

"ಅವರಿಗೆ ಇದರ ಮೇಲೆ ಬಹಳ ಇಷ್ಟ."

ಕಾರ್ತೀಕ ತನ್ನ ಲಂಗ, ಧಾವಣಿ ಮೆಚ್ಚಿದುದನ್ನು ನಿರ್ಭೀತಿಯಿಂದ ತಿಳಿಸಿದಳು.

"ಕಥೆ ಬರೆಯೋರಿಗೆ ಸ್ಕೂಲು ಹುಡುಗಿ, ಹೆಂಡತಿ, ಮನೆ, ಆಕಾಶ ಎಲ್ಲಾ ಒಂದೇ ತರ ಕಾಣುತ್ತೆ."

ಗೊಣಗುತ್ತ ಸರಸರ ಹೆಜ್ಜೆ ಹಾಕಿದಳು. ಮಾರುಕಟ್ಟೆ ತಲುಪುವವರೆಗೆ ಮಾತಿಲ್ಲ. ಸ್ಟಾಲ್‌ನಲ್ಲಿ ಎರಡು ಸೀರೆ, ಎರಡು ಕುಪ್ಪಸದ ಬಟ್ಟೆ ತೆಗೆದುಕೊಟ್ಟಳು.

"ಅಷ್ಟು ಆಸೆ ಇದ್ರೆ ಲಂಗ, ಧಾವಣಿ ಮನೇಲಿರೋವಾಗ ಹಾಕ್ಕೊ. ಹೊರಕ್ಕೆ ಬೇಡ." ಮತ್ತೆ ಎಚ್ಚರಿಸಿದಳು.

ಸೌಭಾಗ್ಯ ಮನೆಗೆ ಬಂದ ಮೇಲೆ ಪೆಟ್ಟಿಗೆಯಿಂದ ತೆಗೆದ ಲಂಗ, ಧಾವಣಿಗಳನ್ನು ಹಾಸಿಗೆಯ ಮೇಲೆ ಗುಪ್ಪೆ ಹಾಕಿದಳು.

"ಈ ಉಡುಪಿನಲ್ಲಿ ನೀನು ಸ್ಕೂಲು ಹುಡುಗಿ ತರ ಕಾಣ್ತೀಯ. ನನಗೆ ಇದೇ ಇಷ್ಟ."

ಅದೇ ರಾತ್ರಿ ಕೋಣೆಗೆ ಬಂದಿದ್ದ ಕಾರ್ತೀಕ ಅವಳ ನೆರಿಗೆ ಇಲ್ಲದ ಲಂಗವನ್ನು ಮೆಚ್ಚಿಗೆಯಿಂದ ನೋಡುತ್ತ ನಿಂತ. ಅವಳಿಗೆ ಅಳು, ನಗು ಒಟ್ಟಾಗಿ ಬಂತು. ತಾಯಿ, ಮಗ ಇಬ್ಬರ ಪ್ರತ್ಯೇಕ ನಾಟಕಗಳ ಮುಂದೆ ಏಕೈಕ ಪ್ರೇಕ್ಷಕಿ!

"ಅತ್ತೆ ಹೇಳಿದ್ರು, ನಾನು ಸ್ಕೂಲು ಹುಡುಗಿ ತರ ಕಾಣಿಸಬಾರದಂತೆ... ಸೀರೆಯೇ ಉಟ್ಟಿರಬೇಕಂತೆ......ನನಗೆ ಮದುವೆ ಆಗಿದೆಯಂತೆ."

"ಈ ವಿಷಯಕ್ಕೆ ಅವಳು ಯಾಕೆ ತಲೆ ಕೆಡಿಸ್ಕೋಬೇಕು. ಅಮ್ಮನಿಗೆ ಹೇಳ್ತೀನಿ ನಾನು."

ಮುಖ ಒರೆಸಿಕೊಂಡು ಕೆಳಗಿಳಿದು ಹೋದ.

ಅವಳಿಗೆ ಗಾಬರಿಯಾಯಿತು. ತನ್ನ ಉಡುಗೆ ವಿಷಯದಲ್ಲಿ ತಾಯಿ, ಮಗನ ನಡುವೆ ಚರ್ಚೆ ನಡೆಯುವುದು ಖಂಡಿತ. ಫಲಿತಾಂಶ ಏನೇ ಇರಲಿ, ವೈಷಮ್ಯಕ್ಕೆ ಮೂಲ ತಾನಾಗುವೆ.

ಮಾತು ಏನು ಸಾಗಿತೆಂದು ತಿಳಿಯಲಿಲ್ಲ. ಬುಲ್ ಬುಲ್ ತರಂಗದ ಸದ್ದು ಅಲೆಅಲೆಯಾಗಿ ಕೇಳಿ ಬರುತ್ತಿತ್ತು.

ನಿದ್ರೆ ಹತ್ತಲಿಲ್ಲ. ಅವಳಿಗೆ ಅತ್ತೆಯ ವಿಷಯದಲ್ಲಿ ಅಧಿಕ ಚಿಂತೆ ಇರಲಿಲ್ಲ. ಸ್ವರ್ಣಮ್ಮ ಮಗನಂತೆಯೇ.....ಅವಳೂ ಅರ್ಥಕ್ಕೆ ಸಿಗದ ವ್ಯಕ್ತಿ. ಅವಳು ಹೇಳಿದುದಕ್ಕೆಲ್ಲ 'ಹುಂ' ಎಂದು ವಿಧೇಯತೆಯಿಂದ ನಡೆಯುವುದರಲ್ಲಿ ತನ್ನ ಹಿತವಿದೆ ಎಂದು ಬಲ್ಲಳು.

ಕಾರ್ತೀಕ ಅವಳನ್ನು ಸಹಾನುಭೂತಿಯಿಂದ ಕಾಣುತ್ತಿದ್ದ. ಅವಳಿಗೆ ಬೇಕಿದ್ದುದು ಸಹಾನುಭೂತಿ ಅಲ್ಲ, ಪ್ರೀತಿ. ಪೋಷಕನ ದಯಾರ್ದ್ರ ಅನುಕಂಪವಲ್ಲ, ಕೈ ಹಿಡಿದವನ ಹಾರ್ದಿಕ ಪ್ರೇಮ.

ಅವನ ಮುಖದಲ್ಲಿ ಗೆಲುವು ಕಂಡಾಗ ಅವಳು ತಂದೆಯ ಮನೆಯಲ್ಲಿದ್ದಾಗ ಕಂಡ ತುಣುಕು ಚಿತ್ರಗಳನ್ನು ಅವನ ಮುಂದಿಡಲು ಉತ್ಸಾಹ ತೋರುತ್ತಿದ್ದಳು. ಪ್ರವಾಹದಿಂದ ಉಬ್ಬಿ ಹರಿದ ಹಾರಂಗಿ ನದಿಯ ವರ್ಣನೆ, ತಂದೆಯ ಸ್ನೇಹಿತ ಕುದುರೆ ಪಂದ್ಯದಲ್ಲಿ ಹಣ ಕಳೆದುಕೊಂಡು ಹುಚ್ಚನಂತೆ ಕಾಲೋನಿಯಲ್ಲಿ ರಾತ್ರಿಯೆಲ್ಲ ಅಲೆದಾಡಿದ್ದು, ತಂದೆಯ ಬೂಟಿನಲ್ಲಿ ಹಾವಿನ ಮರಿ ಕಾಣಿಸಿಕೊಂಡಿದ್ದು ... ಕಥೆಗಳನ್ನು ಹೇಳುವಾಗ ಅವಳು ರೆಕ್ಕೆ ಹರವಿಕೊಂಡ ಹಕ್ಕಿ.

ಅವನ ಮುಖದಲ್ಲಿ ಅತೀವ ಗಂಭೀರತೆ ಆವರಿಸಿದಾಗ ಅವಳಿಗೆ ಅನಿಸುತ್ತಿತ್ತು. ಇಬ್ಬರ ನಡುವಿನ ಸೇತುವೆ ಕುಸಿಯುತ್ತಿದೆ! ಕಂದರ ಆಳವಾಗುತ್ತಿದೆ.

ಮಧ್ಯಾಹ್ನದ ಬಿಸಿಲ ಝಳಕ್ಕೆ ಎರಡು ನಿಮಿಷ ಕಣ್ಣು ಮುಚ್ಚಿ ಕುರ್ಚಿ ಒರಗಿದಾಗ ಬಾಗಿಲು ಕಿರ್ರೆಂದು ಒಳಕ್ಕೆ ಸರಿಯಿತು. ಕಾರ್ತೀಕ ಬಂದಿದ್ದ. ಹೆಂಡತಿ ಇರುವ ಕೋಣೆಗೆ ಬಂದ ಪತಿಯ ಆಸಕ್ತಿ ಅಲ್ಲಿಲ್ಲ. ಆ ಮುಖದಲ್ಲಿ ಅಂತಃಪುರಕ್ಕೆ ತಪ್ಪಿ ಅಡಿಯಿಟ್ಟ ಗಂಡಸಿನ ಕಸಿವಿಸಿ.

"ನಿನ್ನೆ ರಾತ್ರಿ ಅಮ್ಮನೊಂದಿಗೆ ಏನು ತೀರ್ಮಾನ ಮಾಡ್ದೇಂತ ಕುತೂಹಲ ಇರಬೇಕು ನಿನಗೆ. ನಿನ್ನ ಉಡುಪಿನ ವಿಷಯ ಮಹಾ ದೊಡ್ಡ ಸಮಸ್ಯೆ ಅಲ್ಲ ನೋಡು. ಅಮ್ಮ ಅಂತ ಸಣ್ಣ ಸಂಗತಿಗೆ ತಲೆ ಕೆಡಿಸಿಕೊಳ್ಳೋಳು ಅಲ್ಲ. ಇನ್ನು ನೀನು ಈಜು ಉಡುಪಿನಲ್ಲಿದ್ರೂ ನಿನ್ನ ಮಾತಾಡಿಸೋದಿಲ್ಲ ಅವಳು."

ಅವನಿಗೆ ಅದು ಹಾಸ್ಯದ ಪರಮಾವಧಿಯ ಮಾತು. ಅವಳ ನಗೆ ಅವನಿಗೆ ತೃಪ್ತಿ ತಂದಿತು. ಅವನೇ ಮುಂದೆ ಹೇಳಿದ.

"ರಾತ್ರಿ ಯೋಚಿಸ್ದೆ. ನಾನು ಸ್ವಾರ್ಥಿ ಅನ್ನಿಸ್ತು. ನಾನು ಬರೆಯೋದ್ರಲ್ಲಿ, ಬುಲ್ ಬುಲ್ ತರಂಗ್‌ನಲ್ಲಿ ಮುಳುಗಿದ್ರೆ ನಿನ್ನ ಪ್ರಪಂಚ?"

ಅವಳಿಗೆ ಅದು ಕಿವಿ ನಂಬದ ಮಾತು. ಕಾರ್ತೀಕನಿಗೆ ಹೆಂಡತಿಯ ಪ್ರಪಂಚದ ಚಿಂತೆ! ಧೈರ್ಯ ಪುಟಿದು ಬಂತು.

"ಹೌದು, ನನ್ನ ಒಣ ಪ್ರಪಂಚಕ್ಕೆ ಏನೇನು ಸ್ವಾರಸ್ಯ ಕೊಡಿಸಿಕೊಡ್ತೀರಿ?"

"ನಿನ್ನ ಕಂಠ ವ್ಯರ್ಥ ಆಗಬಾರದೂಂತ, ಚೆನ್ನಾಗಿ ಯೋಚನೆ ಮಾಡಿ. ಅಮ್ಮನೊಂದಿಗೆ ಮಾತಾಡಿ ಏರ್ಪಾಟು ಮಾಡ್ಕೊಂಡು ಬಂದಿದೀನಿ."

ಅವರ ಕುತೂಹಲ ಏರುತ್ತಿದ್ದಂತೆ ಜೇಬಿನಿಂದ ಒಂದು ಫಾರಂ ಎಳೆದು ಅವಳ

ಮುಂದಿಟ್ಟ.

"ಏನಿದು? ಭರ್ತಿ ಮಾಡಿದ ಹಾಳೆ ನೋಡುತ್ತಾ ಕೇಳಿದಳು.

"ಓದು, ಅರ್ಥ ಆಗುತ್ತೆ."

"ಹೈಸ್ಕೂಲು ಒಂದನೇ ವರ್ಷಕ್ಕೆ ಬಿಟ್ಟೋಳು ಏನು ಓದ್ಲಿ? ಯಾವುದೊ ಸ್ಕೂಲು ಸೇರುವ ಫಾರಂ ತರಹ ಕಾಣತ್ತೆ."

"ವೆರಿಗುಡ್, ಅದು ಆಡ್ಮಿಷನ್ ಫಾರಂ. ವಿಬ್‌ಗ್ಯಾರ್ ಕಾನ್ಸರ್ವೆಟೋರಿಯಂ ಅಂದರೆ ಸಪ್ತವರ್ಣ ಸಂಗೀತ ನಿಲಯಕ್ಕೆ ನಿನ್ನ ಸೇರಿಸೋದಿಕ್ಕೆ ಮಾತಾಡಿ ಬಂದಿದೀನಿ. ನೀನು ಅಲ್ಲಿ ಸಂಗೀತಕ್ಕೆ ಸಂಬಂಧಿಸಿದ ಹಾಗೆ ಏನು ಬೇಕಾದ್ರೂ ಕಲಿಯಬಹುದು. ಸ್ಕೂಲಿನಲ್ಲಿ ನಿನ್ನ ಹೆಸರು ಸೌಭಾಗ್ಯ ಬರ್ನಾರ್ಡ್. ಮತ್ತೊಂದು ವಿಷಯ. ನಮ್ಮಿಬ್ಬರ ಒಳ್ಳೆಯದಕ್ಕೆ ಕೊಟ್ಟಿರೊ ವಿಷಯ.....ನಿನಗೆ ಮದುವೆ ಆಗಿಲ್ಲಾಂತ. ನಾನು ನಿನ್ನ ಪೋಷಕ. ಇಲ್ಲಿ ರುಜು ಮಾಡು."

ಬೆರಳಿನಿಂದ ಸಹಿ ಮಾಡುವ ಭಾಗ ತೋರಿದ. ಅವಳ ಮುಖವನ್ನು ಎದುರಿಸುವ ಮನಸ್ಸಾಗಲಿಲ್ಲ. ಆ ಮುಖವನ್ನು ನಿರುಕಿಸಿದ್ದಲ್ಲಿ ಅದರಲ್ಲಿನ ಮೂರು ಪ್ರಶ್ನೆಗಳು ಅವನನ್ನು ಇರಿಯುತ್ತಿದ್ದವು.

ಸಂಗೀತ ನಿಲಯಕ್ಕೆ ನನ್ನ ಸೇರಿಸಿ ನಮ್ಮಿಬ್ಬರ ಮಧ್ಯೆ ಶಿಥಿಲವಾಗುತ್ತಿರುವ ಸೇತುವೆ ಸಿಡಿಸಿ ಹಾಕುವಿರಾ? ನನಗೆ ಮದುವೆ ಆಗಿಲ್ಲವೆಂದು ತಿಳಿಸಿ ನಮ್ಮಿಬ್ಬರ ಒಳ್ಳೆಯದೇನನ್ನು ಸಾಧಿಸುವಿರಿ? ಪತಿಯೂ ಪೋಷಕನಲ್ಲವೇ?

ಹಾಳೆಯ ಅಡಿಯಲ್ಲಿ ಸಹಿ ಹಾಕುವಾಗ ಕಣ್ಣುಗಳು ತುಂಬಿ ಬಂದು ಮಂಜಾದವು. ಮತ್ತೇನೂ ಹೇಳಿದ ಕಾರ್ತೀಕ ಹೊರಬಿದ್ದ. ಮೈಯಲ್ಲಿ ಕಾವೇರಿತು. ಕಾದ ಕಬ್ಬಿಣ ನೀರಿಗೆ ಬಿದ್ದೊಡನೆ ತಣ್ಣಗಾಗುವಂತೆ ಸಹನೆ ಅದೇ ತಲೆ ಎತ್ತಿತ್ತು. ತಾಯಿಯ ಸಹನೆ ಪಡೆದವಳಿಗೆ ತಂದೆಯ ಉಗ್ರತೆಯ ಒಂದಂಶವೂ ರಕ್ತಕ್ಕೆ ಸೇರಿಲ್ಲ.

ಭಾನುವಾರ ಕಾರ್ತೀಕ ಅವಳನ್ನು ಕನ್ನಂಬಾಡಿ ಜಲಾಶಯಕ್ಕೆ ಕರೆದೊಯ್ದ. ನಿರ್ಮಾಣಾವಸ್ಥೆಯಲ್ಲಿದ್ದ ಚಿಕ್ಕ ಹಾರಂಗಿ ಜಲಾಶಯವನ್ನು ನೋಡಿದ್ದ ಸೌಭಾಗ್ಯ. ಕಾವೇರಿಯ ದೊಡ್ಡ, ಆಕರ್ಷಕ ಅಣೆಕಟ್ಟಿನ ದೃಶ್ಯದಿಂದ ಪುಳಕಿತಗೊಂಡಳು. ವಿವಿಧ ಭಂಗಿಯ ನೂರಾರು ಮಂದಿ ಅಪರಿಚಿತರು!

ಅಣೆಕಟ್ಟಿನ ಮೇಲೆ ನಿಂತು ನೀರಿನ ಆರ್ಭಟ ನೋಡುವವರು, ಸರೋವರದ ದೋಣಿಯಲ್ಲಿ ವಿಹರಿಸಿದವರು, ರಂಗು ರಂಗಿನ ಚಿಲುಮೆಗಳ ನಡುವೆ ಅಡ್ಡಾಡಿದವರು. ವರ್ಣರಂಜಿತ ಲೋಕದಲ್ಲಿ ಹರಿದಾಡಿದ ಜನ ಗುಂಪು....ಕನಸಿನಲ್ಲಿ ಕಾಣುವುದಕ್ಕಿಂತಲೂ ಮಿಗಿಲಾದ ರಮ್ಯ. ಚೇತೋಹಾರಿ ಸೀಮೆ. ಸೌಂದರ್ಯದ ಅವಲೋಕನದಲ್ಲೂ ವಿಚಿತ್ರ ನೋವು. ಇಷ್ಟೊಂದು ಚೆಲುವಿನ ತಾಣದಲ್ಲಿ, ಈ

ಜನಸ್ತೋಮದ ಮಧ್ಯೆ ತಾನು ಏಕಾಂಗಿ!

ಗುಲ್‌ಮೊಹರ್ ಬುಡ ಒರಗಿದ ಕಾರ್ತೀಕ ಹುಲ್ಲಿನ ಮೇಲೆ ಕಾಲು ಚಾಚಿ ಆಕಾಶಕ್ಕೆ ತಲೆ ಎತ್ತಿ ಕಣ್ಣು ಮುಚ್ಚಿದ್ದ.

"ನಾನು ಹದಿನೈದು ದಿವಸ ಹೊರಗೆ ಹೋಗ್ತಾ ಇದೀನಿ, ಗೊತ್ತಾಯ್ತ?"

ಸರ್ರನೆ ತಿರುಗಿ ಕೇಳಿದ. ಅವಳ ಕಣ್ಣಿನಲ್ಲಿ ನಿರಾಳ ನೋಟ. ಕೆನ್ನೆ ಉಜ್ಜಿ ನೇರವಾಗಿ ಕುಳಿತ.

"ಅತ್ತೆ ಹೇಳಿದ್ರು. ಮದ್ರಾಸಿಗೆ ಹೋಗ್ತಾ ಇದೀರಂತೆ."

"ಚಿತ್ರಕ್ಕೆ ಸಂಭಾಷಣೆ ಬರೆಯೊ ಕೆಲಸ ಸಿಕ್ಕಿದೆ."

"ಮಣ್ಣಿನ ದೋಣಿ' ಚಿತ್ರ ಆಗತ್ತಾ?"

ಚಕಿತಗೊಂಡ ಲೇಖಕ.

"ನನ್ನ ಕಾದಂಬರಿ ಹೆಸರು ಯಾರು ಹೇಳಿದ್ರು?"

"ಅತ್ತೆ ಹೇಳಿದ್ರು. ಮೊದಲು 'ಪ್ರಣಯ ದೋಣಿ' ಅಂತ ಪ್ರಾರಂಭ ಮಾಡಿದ್ರಂತೆ. ಯಾಕೊ ಬೇಜಾರು ಬಂದು ಅದನ್ನ 'ಮಣ್ಣಿನ ದೋಣಿ ಅಂತ ಬದಲಾಯಿಸಿದ್ರಂತೆ.

"ಅದನ್ನ ಪೂರೈಸಿಲ್ಲ. ಬೇರೆ ಯಾವುದೊ ಚಿತ್ರಕ್ಕೆ ಸಾಹಿತ್ಯ ಬರೆಯೊ ಕೆಲಸಕ್ಕೆ ಹೋಗ್ತಾ ಇದೀನಿ."

ಮೋಡಗಳ ಅಂಚುಗಳಿಗೆ ಹಿಡಿದ ಬೆಳ್ಳಿ ಕಟ್ಟುಗಳ ಚಿತ್ತಾರ ನೋಡುತ್ತ ಕುಳಿತಳು ಕಿಶೋರಿ. ತಾನೊಂದು ದಿಕ್ಕು ನೋಡುತ್ತಾ ಕೇಳಿದ.

"ಸಂಗೀತದ ಸ್ಕೂಲಿಗೆ ನಿನ್ನ ಹೆಸರು ಸೌಭಾಗ್ಯ ಬರ್ನಾರ್ಡ್ ಅಂತ ಯಾಕೆ ಬರೆಸ್ದೆ ಗೊತ್ತೆ?"

"ಯಾಕಂದ್ರೆ ನಿಮ್ಮಮ್ಮನಿಗೆ ನನ್ನಂತ ಸೊಸೆ ಬೇಕಾಗಿಲ್ಲ."

ಅದು ತನ್ನಲ್ಲೇ ಹೇಳಿಕೊಂಡ ಉತ್ತರ. ಅಲ್ಲೂ ಪತಿಯ ಮೇಲೆ ದೋಷ ಹೊರಿಸದೆ ಅತ್ತೆಯ ಮೇಲೆ ಶೀತಳ ಸಿಡಿಮಿಡಿ.

ಅವಳ ಮೌನ ಗಮನಿಸಿ ಮೆಲ್ಲನೆ ಹೇಳಿದ.

"ನಿನ್ನ ಬೆರಳಿನಿಂದ ಮದುವೆ ಉಂಗುರ ತೆಗೆಯೋದಿಕ್ಕೆ ಅಮ್ಮ ಹೇಳಿದ್ದೂ ಅದೇ ಕಾರಣಕ್ಕೆ. ನಾವು ಗಂಡ, ಹೆಂಡತಿ ಅನ್ನೋದು ಕೆಲವು ದಿನ ಜನಕ್ಕೆ ತಿಳಿಯೋದು ಬೇಡ, ಅದರಿಂದ ನೀನು ಸಂಗೀತ ಕಲಿಯೋದಿಕ್ಕೆ ನಾನು ಬರೆಯೋ ಕೆಲಸ ಮುಂದುವರಿಸೋದಿಕ್ಕೆ ಅನುಕೂಲ."

ಎಳೆಯ ಮಿದುಳಿಗೆ ಅರ್ಥವಾಗದು. ಆದರೂ ಅವಳಲ್ಲೇ ಜಿಜ್ಞಾಸಪೂರ್ವಕ ಪ್ರಶ್ನೆ. ಗಂಡ, ಹೆಂಡತಿ ಅನಿಸಿಕೊಂಡು ತಮ್ಮಿಬ್ಬರ ಕೆಲಸ ಸುಗಮವಾಗಿ ಸಾಗದೆ?

ಪ್ರತಿಭಟನೆಯ ಕಿಡಿ ಮೆಲ್ಲನೆ ಸಿಡಿದು ಅದೇ ನಂದಿ ಹೋಯಿತು. ಪ್ರತಿಭಟಿಸಲು ತಾನು ಯಾರು? ಪ್ರತಿಭಟಿಸಿ ಹೋಗುವುದೆಲ್ಲಿಗೆ?

ಕೊರಳು ಬಿಗಿಯಿತು. ತಾನು ಎಳೆಯ ಸಸಿ. ನಿರ್ದಯ ಕೈಯೊಂದು ಸಸಿಯನ್ನು ಕಿತ್ತು ಹೊಸ ಮಣ್ಣಿಗೆ ನೆಟ್ಟಿದೆ. ಎಳೆ ಬೇರುಗಳು ನಿರರ್ಥಕ ರೋಷದಿಂದ ಕಂಪಿಸುತ್ತಿವೆ.

ತಗ್ಗಿದ ಮುಖವನ್ನು ಸೊಂಪಾದ ಕೂದಲು ಮರೆ ಮಾಡಿತ್ತು. ಅವಳ ನಿಸ್ಸಹಾಯಕ, ಮೋಹಕ ಕುಳಿತ ಭಂಗಿಯನ್ನು ನೋಡುತ್ತಿದ್ದ ಕಾರ್ತೀಕ ಯೋಚನೆಗೆ ಸಿಕ್ಕಿದ.

ಸೌಭಾಗ್ಯಳನ್ನು ತಾನು ಪ್ರೀತಿಸುವುದಾದರೆ....?

ಪ್ರೀತಿಸಲು ಅಡ್ಡಿಯೇನು? ಸೌಭಾಗ್ಯ ಅಪರಿಚಿತ ಹೆಣ್ಣಲ್ಲ. ತನ್ನ ಹೆಂಡತಿ! ಹೆಂಡತಿಯೆಂಬ ಭಾವನೆ ಹೃದಯಕ್ಕೆ ಇಳಿದಿಲ್ಲ. ಬಿಡಲಾಗದ, ಕೂಡಿಸಿಕೊಳ್ಳಲಾಗದ ದ್ವಂದ್ವ, ತನ್ನಲ್ಲಿ ಯಾವುದೋ ಶಕ್ತಿಯ ಪ್ರಭಾವ ಅಧಿಕವಾಗದಿದ್ದಲ್ಲಿ ಸೌಭಾಗ್ಯಳನ್ನು ತೋಳುಗಳಲ್ಲಿ ಬಂಧಿಸಿಕೊಳ್ಳುತ್ತಿದ್ದೆ. ಅವಳ ಸಮೃದ್ಧ ತಲೆಗೂದಲಿನಲ್ಲಿ ಬೆಳಕು ಹರಿಸುತ್ತಿದ್ದೆ. ಎಲ್ಲವೂ ಕನಸು! ಸಮೀಪದಲ್ಲಿದ್ದರೂ ಸೌಭಾಗ್ಯ ತನ್ನಿಂದ ಬಲು ದೂರ.

ಸೌಭಾಗ್ಯಳಿಗೂ ಮಸಕು ಕಲ್ಪನೆ. ದೂರದಿಂದ ಧಾವಿಸಿ ಬಂದು ಕಾರ್ತೀಕನನ್ನು ಸಮೀಪಿಸಿದಂತೆ. ಅವನಿಗಾಗಿ ಕಾತರಿಸಿದಂತೆ ಹೆಂಡತಿಯೆಂಬ ಘನತೆಯಲ್ಲಿ ನಿಂತಂತೆ....ಪೊಳ್ಳು ಕನಸು! ಕಾರ್ತೀಕ ಹೆಂಡತಿಯನ್ನು ಪಡೆದ ಮೇಲೂ ತನ್ನದೇ ಆದ ಏಕಾಕಿ ಜೀವನಕ್ಕೆ ಕಾಲಿಡುತ್ತಿದ್ದಾನೆ!

'ಮಣ್ಣಿನ ದೋಣಿ' ಅಂತ ಯಾಕೆ ಹೆಸರು ಕೊಟ್ರಿ ನಿಮ್ಮ ಕಥೆಗೆ? ಮಣ್ಣಿನ ದೋಣಿ ಎಲ್ಲಾದ್ರೂ ಇರುತ್ತಾ?..... ಅಂದರೆ ಮಣ್ಣಲ್ಲಿ ಮಾಡಿದ ಬಣ್ಣದ ಆಟದ ದೋಣಿ....."

ಸಾವರಿಸಿಕೊಂಡು ಕುಳಿತ ಕಾರ್ತೀಕ ಆಸಕ್ತಿಯಿಂದ ಉತ್ತರಿಸಿದ.

"ಮಣ್ಣಿನ ದೋಣಿ ಎಲ್ಲಿದ್ದೀತು? ಬದುಕು ಸಮುದ್ರದ ಹಾಗೆ, ಒಂದು ದೊಡ್ಡ ನದಿಯ ಹಾಗೆ. ಅದರಲ್ಲಿ ಸಾಗೋಕೆ ಮಣ್ಣಿನ ದೋಣಿಯ ಪ್ರಯಾಣ ಹೇಗೇಂತ ಒಂದು ದುರಂತದ ಕಲ್ಪನೆ. ಮಣ್ಣಿನ ದೋಣಿ ಅಂತ ತಿಳಿದೂ ನದಿ ಹಾಯೋಕೆ ಹೊರಟ ಮೂರ್ಖ."

"ಯಾರು?" ಕಾತರದ ಪ್ರಶ್ನೆ.

"ಸ್ವಯಂ ನಾನೇ."

ಶರ್ಮಿಳಾ ಅವನ ಮುಂದೆ ಕಟ್ಟಿದ ಹಾಗೆ ನಿಂತಿರಬೇಕು.

ಕಿಶೋರಿಯ ಎದೆ ತುಯ್ದಾಡಿತು. ಪರಾಧೀನಳ ಕೋಶ ತರಂಗಗಳಲ್ಲಿ ಎದ್ದಿತು.

"ನಾನು ಹೇಳ್ತೀನಿ. ನೀವು ದೊಡ್ಡ ನದಿ ಇದ್ದ ಹಾಗೆ. ಅದರ ಮೇಲೆ ತೇಲು ಬಿಟ್ಟ ಮಣ್ಣಿನ ದೋಣಿ ನಾನು. ಎಷ್ಟು ಹೊತ್ತು ತೇಲೋದಿಕ್ಕೆ ಸಾಧ್ಯ? ಹೇಳ ಹೆಸರಿಲ್ಲದ ಹಾಗೆ ಕರಗಿ ಹೋಗ್ತೀನಿ."

ಅವನ ಕೆನ್ನೆಗೆ ರಪ್ಪನೆ ಬಾರಿಸಿದಂತಾಯ್ತು. ಮುಗ್ಧ ಮುಖದ ಹಿಂದೆ ಪ್ರೌಢ ಮಾತು! ಮಾತು ಹೊರಡಲಿಲ್ಲ.

ಸೊಂಪು ಕೂದಲು ಎಡಬಲ ತೂಗಾಡಿತು. ಅವಡು ಕಚ್ಚಿ ಮತ್ತೆ ಹೇಳಿದಳು.

"ನಿಮಗೆ ನಾನು ಬೇಕಾಗಿಲ್ಲ. ಒಂದಲ್ಲ ಒಂದು ದಿನ ನೀವು ಇದಕ್ಕೆ ಪಶ್ಚಾತ್ತಾಪ ಪಡ್ತೀರಿ."

ಮುಂದೆ ಹೇಳಲಾಗದೆ ಎದ್ದು ನಿಂತು ತಲೆ ತಗ್ಗಿಸಿದಳು.

ಕಾರ್ತೀಕ ಉಸಿರುಗಟ್ಟಿದ. ಮೈಯಲ್ಲಿ ಚಳಿ ಆಡಿತು. ಅವಳ ಸ್ವರ ಬಾಲಿಶವಾಗಿದ್ದರೂ ಶಬ್ದಗಳು ಕಿಡಿ ಕಾರಿದ್ದವು.

ಃ

ಎದೆಗೆ ಪುಸ್ತಕ ಅವಚಿ ತಲೆ ತಗ್ಗಿಸಿ ಸಂಗೀತ ಶಾಲೆಯ ಗೇಟು ದಾಟಿ ಬಂದ ಸೌಭಾಗ್ಯ ತನ್ನ ಹೆಸರಿನ ಕೂಗು ಕೇಳಿ ಮೈ ಅದುರಿಸಿ ನೋಡಿದಳು. ಬಣ್ಣದ ಛತ್ರಿ ಹಿಡಿದು ಬಸು ಸ್ಟಾಪ್ ಗೋಡೆಗೆ ಒರಗಿ ನಿಂತ ಯುವತಿ ಕಾಣಿಸಿದಳು. ತನಗಾಗಿ ಕಾದು ನಿಂತವಳಂತೆ ಕೈ ಆಡಿಸಿದಳು.

ಸೌಭಾಗ್ಯ ಹಿಂದಕ್ಕೆ ನೋಡಿದಳು. ತನ್ನ ಹಿಂದೆ ಯಾರೂ ಇಲ್ಲ. ತನಗೇ ಅವಳು ಕೈ ಆಡಿಸಿದುದು....ಅಪರಿಚಿತೆ!

"ಸೌಭಾಗ್ಯ ಬರ್ನಾರ್ಡ್, ನಿಮ್ಮನ್ನೇ ಕೂಗ್ತಾ ಇರೋದು....."

ಕಣ್ಣು ಕುಕ್ಕುವ ಕೆಂಪು, ಕಪ್ಪು ತಿರುವು ಪಟ್ಟೆಗಳ ಸೀರೆ. ಕುತ್ತಿಗೆಯ ಎಡಬಲ ತೂಗಾಡಿದೆ ಬಾಬ್ ಕೂದಲು. ಆಧುನಿಕತೆ ಚೆಲ್ಲುವ ಚೆಂದದ ಮುಖದಲ್ಲಿ ಕಿರು ನಗೆ. ಬಣ್ಣದ ಛತ್ರಿ ತಿರುಗಿತು.

"ನನ್ನ ಹೆಸರು ಹೇಗೆ ಗೊತ್ತಾಯ್ತು?"

ವಿನಯದ ಮೆದು ಕಂಠದಲ್ಲಿ ಕೇಳಿದಳು.

"ನೀವಿಂತೂ ಸುತ್ತಲೂ ಯಾರಿದಾರೆ ಅಂತ ತಲೆ ಎತ್ತಿ ನೋಡದಿದ್ರೆ ನಾನು ನೋಡ್ಡೋದಿಲ್ಲವೆ? ನಾನೂ ಇದೇ ಸ್ಕೂಲ್‌ನಲ್ಲಿ ಕಲೀತಾ ಇರೋದು. ನಿನ್ನೆ ದಿನ ನಿಮ್ಮನ್ನು ಮಾತಾಡಿಸೋಣಾಂತ ಕಾದಿದ್ದೆ. ನೀವು ಸರಸರ ಹೊರಟ್ಹೋದ್ರಿ."

ಸೌಭಾಗ್ಯಳ ನಸುಗಪ್ಪು, ಮುಖ, ತಲೆಯ ಪೊದೆಗೂದಲನ್ನು ಪರೀಕ್ಷಿಸುವಂತೆ ಸಮೀಪದಿಂದ ನೋಡಿದಳು. ವೀಕ್ಷಣೆ ನಾಚಿಕೆ ತಂದಿತು.

ಕಾಗದ ಪೋಸ್ಟ್ ಮಾಡಬೇಕಾಗಿತ್ತು. ಸ್ಕೂಲ್ ಬಿಡುತ್ಲೇ ಬೇಗ ಹೊರಟೆ."

"ಆ ಕಾಗದವೂ ಸರಸರ ಅಂತ ಊರು ಸೇರಿರಬೇಕು."

ಇಬ್ಬರೂ ನಕ್ಕರು. ಅವಳು ಸೌಭಾಗ್ಯಳ ತಲೆಗೂದಲನ್ನು ತೂಗುವಂತೆ ಎತ್ತಿ ನೋಡಿದಳು.

"ನನಗೆ ಸ್ನೇಹಿತೆ ಇಲ್ಲಾಂತ ಯೋಚನೆ ಮಾಡ್ತಿದ್ದೆ. ನೀವು ಸಿಕ್ಕಿದ್ದು ಒಳ್ಳೇದಾಯ್ತು."

ಬಣ್ಣದ ಛತ್ರಿಯನ್ನು ಆಸಕ್ತಿಯಿಂದ ನೋಡಿದಳು.

"ನಿಮ್ಮ ಸ್ನೇಹಿತೆ ಆಗೋದಿಕ್ಕೆ ಕಾದಿದೀನಿ. ಬಹಳ ಗಂಭೀರ ಸ್ವಭಾವದೋರ ಹಾಗೆ ಕಾಣ್ತೀರಿ. ನನ್ನನ್ನೂ ಹಾಗೇಂತ ತಿಳೀಬೇಡಿ. ಬೇಕಾದಷ್ಟು ಮಾತಾಡ್ತೀನಿ. ಮಾತಾಡ್ಸಿ ಸತಾಯಿಸಿಬಿಡ್ತೀನಿ. ಹುಟ್ಟಿದ ದಿನವೇ ಮಾತಾಡಿದೋಳು ಅಂತ ನಮ್ಮಣ್ಣ ಹೇಳ್ತಾನೆ. ನಮ್ಮ ಹೆಸರು ಮೀನಾಕ್ಷಿ. ನಾನು ನಮ್ಮಣ್ಣ ವಸಂತನಗರದಲ್ಲಿದೀವಿ. ಕಂಟೋನ್ಮೆಂಟ್ ರೈಲ್ವೇ ಸ್ಟೇಷನ್‌ಗೆ ಹೋಗೋ ದಾರಿ. ನಮ್ಮಣ್ಣ ಪೇಪರ್ ವ್ಯಾಪಾರ ಮಾಡ್ತಾನೆ. ನೀವಿರೋದೆಲ್ಲಿ?

"ಜಯನಗರ"

"ತಂದೆ ಏನ್ಮಾಡ್ತಾರೆ?"

ಸುಲಭವಾಗಿ ಹಾದು ಬಂದ ಪ್ರಶ್ನೆಗೆ ನಿಧಾನವಾಗಿ ಉತ್ತರ ಬಂತು.

"ಹಾರಂಗಿ ಪ್ರಾಜೆಕ್ಟ್‌ನಲ್ಲಿದ್ದಾರೆ.

"ಇಂಜಿನಿಯರ್ ಮಗಳು!..... ಇಂಜಿನಿಯರ್ ಅಂದ್ರೆ ತಲೆ ಬೇಸರ. ನಮ್ಮ ತಂದೆಗೂ ಅದೇ ಮಾತು ಅನ್ವಯಿಸುತ್ತೇಂತ ಕೆಂಪಾಗಬೇಡಿ. ನಮ್ಮೂರಲ್ಲಿ ತೋಟದ ಬಾವಿ ಹಾಕೋದಿಕ್ಕೆ ಇಂಜಿನಿಯರ್, ಸಿಮೆಂಟ್ ಬಾವಿಗಳನ್ನ ಮಾಡಿಸೋದಿಕ್ಕೆ ಇಂಜಿನಿಯರ್. ಮನೆ ಕಟ್ಟೋದಿರಲಿ, ಹಳೆ ಮನೆ ರಿಪೇರಿಗೂ ಇಂಜಿನಿಯರ್. ಆ ಪದಕ್ಕೆ ಬೇಜಾರುಪಟ್ಟು ನಮ್ಮಣ್ಣ ವ್ಯಾಪಾರಕ್ಕೆ ಇಳಿದುಬಿಟ್ಟ."

ತೂಬು ಎತ್ತಿದ ಕೆರೆ ನೀರಿನಂತೆ ಮಾತು ಹರಿಸಿದಳು ಮೀನಾಕ್ಷಿ. ಸೌಭಾಗ್ಯ ಏನೂ ಹೇಳಲಿಲ್ಲ.

"ನೀವು ಕ್ರಿಶ್ಚಿಯನ್ನರೆ?"

ವಾಚಾಳಿ ಅವಳ ತುಂಬುಗೂದಲನ್ನು ಸವರುತ್ತಾ ಕೇಳಿದಳು.

"ಹೌದು"

ತಪ್ಪು ಮಾಡಿದವಳಂತೆ ತಲೆ ತಗ್ಗಿಸಿದಳು ಬಾಲೆ. ಮೀನಾಕ್ಷಿ ಯಾವುದೋ

ನಿರಾಶೆ. ಎತ್ತಿದ ಕಣ್ಣು ಇಳಿಸಿದಳು.

"ಬರ್ನಾರ್ಡ್ ಹೆಸರು ಕೇಳಿದಾಗಲೇ ಅರ್ಥವಾಯ್ತು. ಆದರೂ ಕೇಳ್ದೆ. ನಿಮ್ಮನ್ನ ನೋಡಿದಾಗ ನನ್ನ ಕಣ್ಣು ಸೆಳೆದಿದ್ದು ಈ ನಿಮ್ಮ ತಲೆಗೂದಲು!.... ನಿಮ್ಮ ಕುತ್ತಿಗೆ ಹೀಗೆ ಬರಿದಾಗಿರಬಾರದು. ಒಂದು ಶಿಲುಬೆ ಸರ ಇದ್ರೆ ಚೆಂದ. ನೀವು ತುಂಬ ಚೆನ್ನಾಗಿ ಹಾಡ್ತೀರಿ. ನಿಮ್ಮ ಟೀಚರ್ ನಿಮ್ಮನ್ನ ಹೊಗಳಿದ ಮದುವಣಗಿತ್ತಿ ಹಾಗೆ ತಲೆ ತಗ್ಗಿಸಿ ಕೂತುಬಿಟ್ರಿ. ಕಿಟಕಿ ಆಚೆಯಿಂದ ನೋಡ್ದೆ. ನಾನು ಇಲ್ಲಿ ಪಾಪ್ ಸಂಗೀತ ಕಲೀತಾ ಇದೀನಿ. ನಮ್ಮಣ್ಣನಿಗೆ ಅದೇ ಇಷ್ಟ. ನಿನ್ನೆ ಕಾಗದ ಯಾರಿಗೆ ಹಾಕಿದ್ರಿ?"

ಅಸಂಬದ್ಧ ಪ್ರಶ್ನೆಯಿಂದ ಮುಖ ಮತ್ತಷ್ಟು ಗಂಭೀರವಾಯಿತು.

"ಗೊತ್ತಿಲ್ಲ. ಮಮ್ಮಿ ಪೋಸ್ಟ್ ಮಾಡೋದಿಕ್ಕೆ ಕೊಟ್ಟಿದ್ರು."

"ಬನ್ನಿ, ಹೋಗೋಣ."

ಮೀನಾಕ್ಷಿ ಛತ್ರಿ ತಿರುಗಿಸುತ್ತಾ ಮೈ ಕುಲುಕಿಸಿ ನಡೆದಳು. ಎಲ್ಲಿಗೆಂಬುದರ ಅರಿವಿಲ್ಲದೆ ಸೌಭಾಗ್ಯ ಅವಳೊಂದಿಗೆ ಸಾಗಿದಳು. ರೆಸ್ಟೋರೆಂಟ್ ಸಮೀಪಿಸಿದಾಗ ಒಲ್ಲೆ ಎಂದವಳನ್ನು ಒತ್ತಾಯಿಸಿ ಒಳಕ್ಕೆ ಕರೆದೊಯ್ದಳು ಮೀನಾಕ್ಷಿ. ಬೇರರ್ ಆಮ್ಲೆಟ್‌ಗೆ ಆರ್ಡರ್ ಪಡೆದು ಹೋದ.

"ನೀವು ಹೋಟೆಲ್‌ಗೆ ಮೊದಲ ಸಲ ಬಂದೋರ ಹಾಗೆ ನಡಕೊಳ್ತಿದೀರಿ."

ಅವಳ ನುಡಿ ಸತ್ಯವಾದರೂ 'ಹುಂ'ಗುಡುವಂತಿಲ್ಲ.

"ಹಾಗಲ್ಲ. ನೀವು ನನ್ನ ಬಹಳ ಲಕ್ಷ್ಯವಿಟ್ಟು ನೋಡ್ತಾ ಇದೀರಿ. ನನಗೆ ನಾಚಿಕೆ ಆಗ್ತಿದೆ." ತಡವರಿಸದೆ ಹೇಳಿದಳು.

"ಸುಂದರ ವಸ್ತು ಸದಾ ಕಾಲದ ಸಂತೋಷ ಅಂತಾರೆ ಇಂಗ್ಲಿಷ್‌ನಲ್ಲಿ. ಸುಂದರ ವಸ್ತುನ ನೋಡ್ತಾ ಇದೀನಿ."

ನಸುಗಪ್ಪು ಕೆನ್ನೆಗಳಲ್ಲಿ ರಂಗೇರಿತು.

"ಹಾಸ್ಯ ಮಾಡ್ತಾ ಇದೀರಿ. ನಾನು ಎಷ್ಟು ಸುಂದರ ಅನ್ನೋದು ನನಗೆ ಗೊತ್ತು. ನನ್ನ ಸ್ನೇಹಿತ ಈ ಕಪ್ಪು ಮುಖವನ್ನ ಪದೇ ಪದೇ ಎತ್ತಿ ಆಡ್ತಿದ್ಲು. ನನಗಿರೋದು ಎರಡು ಆಸ್ತಿ. ಅದೂ ಎಷ್ಟು ನಿಜವೋ ಗೊತ್ತಿಲ್ಲ. ಒಂದು ಈ ತಲೆಗೂದಲು. ತಲೆಗೆ ಹೊರೆ. ಮತ್ತೊಂದು ಕಂಠ."

ಅದು ಹೆಮ್ಮೆಯಿಂದ ಬಂದ ಮಾತು ಆಗಿರಲಿಲ್ಲ. ಕಾರ್ತೀಕ ತನ್ನಲ್ಲಿ ಮೆಚ್ಚಿದ್ದ ಆ ಎರಡು ಅಂಶಗಳ ಬಗೆಗೆ ಅಷ್ಟೊಂದು ವಿಶ್ವಾಸ.

ಮೀನಾಕ್ಷಿ ಮತ್ತಷ್ಟು ಗಾಢವಾಗಿ ಅವಳನ್ನು ನೋಡಿದಳು.

"ನೀವು ಎರಡು ಪಂಕ್ತಿ ಹಾಡಿದಾಗಲೇ ಟೀಚರ್ ನಿಮ್ಮನ್ನ ಮೆಚ್ಚಿದ್ರು. ನಿಜಕ್ಕೂ ಸೊಗಸಾದ ಕಂಠ! ಆದರೆ ನನ್ನ ಸೆಳೆದಿದ್ದು ಆ ಸಮೃದ್ಧ ಕೇಶ."

ಎರಡು ಕೈಗಳನ್ನೂ ಕೇಶರಾಶಿಯ ಮೇಲೆ ಆಡಿಸಿದಳು. ಪ್ರತಿಕ್ರಿಯೆ ಇರಲಿಲ್ಲ. ಮಾತಿನ ಪ್ರಮಾಣ ಕುಗ್ಗಿತೆನ್ನಬೇಕು.

"ನಮ್ಮ ಮನೆಗೆ ಬರಬೇಕು ನೀವು." ಏಕಾಏಕಿ ಆಹ್ವಾನ ನೀಡಿದಳು.

"ಯಾವತ್ತು?"

"ಇವತ್ತು, ಈಗಲೇ."

ಗಾಬರಿಗೊಂಡಳು ಸೌಭಾಗ್ಯ.

"ಉಹುಂ."

"ಯಾಕೆ, ನಿಮ್ಮ ಮಮ್ಮಿಗೆ ಅಷ್ಟು ಹೆದರ್ತೀರಾ?"

ತನ್ನ ಕಲ್ಪನೆ ಮುಂದಿಟ್ಟಳು.

"ಉಹುಂ....ಹುಂ, ಒಂದು ರೀತಿಯಲ್ಲಿ ನಿಜ. ಇನ್ನೊಂದು ದಿನ ಬರ್ತೀನಿ."

"ಹಾಗಾದ್ರೆ ನಾನು ಇವತ್ತು ನಿಮ್ಮ ಮನೆಗೆ ಬರ್ತೀನಿ."

ಬೆಚ್ಚಿದವಳ ಮೇಲೆ ಹಾವು ಎಸೆದಂತೆ ಆಯಿತು. ಎದೆ ದಬದಬ ಬಾರಿಸಿತು. ಈ ಮಾತುಗಾತಿ ಸ್ವರ್ಣಮ್ಮನನ್ನು ಭೇಟಿಯಾದರೆ ತನ್ನ ಗತಿ? ಅದಕ್ಕೂ ಮೊದಲು ಇವಳನ್ನು ಮನೆಗೆ ಕರೆದೊಯ್ಯಲು ತನಗಿರುವ ಸ್ವಾತಂತ್ರ್ಯ?

"ಬನ್ನಿ"

ಕಂಪನದಲ್ಲಿ ತಾನು ಸೌಜನ್ಯದ ಮಾತು ಹೇಗೆ ಆಡಿದೆನೆಂಬುದು ತಿಳಿಯದು.

"ಸರಿ, ನಾನೂ ಇನ್ನೊಂದು ದಿನ ಬರ್ತೀನಿ."

ಮೀನಾಕ್ಷಿ ಅವಳನ್ನು ಬೆಪ್ಪುಗೊಳಿಸುವುದರೊಂದಿಗೆ ಅವಳ ತಲೆಯ ಮೇಲಿನ ಬೆಟ್ಟ ಇಳಿಸಿದಳು. ಆಮ್ಲೆಟ್, ಕಾಫಿ ಪೂರೈಸಿ ರೆಸ್ಟೋರೆಂಟ್‌ನಿಂದ ಹೊರಬರುತ್ತಲೇ ಛತ್ರಿ ಮತ್ತೆ ಅರಳಿಸಿದಳು.

ಹತ್ತು ಗಜಗಳ ದೂರಕ್ಕೆ ಸ್ಕೂಟರ್ ನಿಂತಿತು. ಅರಳಿದ ಛತ್ರಿ ಮತ್ತೆ ಮಡಚಿಕೊಂಡಿತು.

"ಬರ್ತೀನಿ, ಮಿಸ್ ಬರ್ನಾರ್ಡ್. ನನಗೆ ಸ್ಕೂಟರ್ ಕಾಯ್ತಾ ಇದೆ ಬೈ ಬೈ.

ಬಣ್ಣದ ಪಟ್ಟೆಗಳ ಸೀರೆ ಕಣ್ಮರೆಯಾಗುವತನಕ ಆ ದಿಕ್ಕು ನೋಡುತ್ತ ನಿಂತಳು ಸೌಭಾಗ್ಯ. ಹೆಜ್ಜೆ ನಿಧಾನವಾಗಿ ಸರಿಯಿತು.

ಮನೆ ಸಮೀಪಿಸಿದಂತೆ ಮೀನಾಕ್ಷಿಯ ಮುಖ, ವಿಚಿತ್ರ ಮಾತುಗಳ ಗುಂಗು

ಕರಗಿ ಹೋಯಿತು. ವೈಶಾಖದ ಅತ್ಯಂತ ಬಿಸಿಲಿನ ತಾಪ ವಾರದ ಹಿಂದಿನ ಪರಿಸ್ಥಿತಿಯನ್ನು ನೆನಪಿಗೆ ತಂದಿತು.

ಬಂದಿಖಾನೆಯಂತಹ ಮನೆ. ತನ್ನಲ್ಲೇ ಅತೃಪ್ತಿಯನ್ನು ಹುದುಗಿಟ್ಟುಕೊಂಡ ಅತ್ತೆ. ಅಪರಿಚಿತನಂತೆ ಬೇರೆ ಕೋಣೆಯಲ್ಲಿ ಉಳಿಯುವ ಪತಿ. ಗಂಭೀರ ಪರಿಸರ!

ಅದರ ಹಿಂದೆಯೇ ಸರಿದು ಬರುತ್ತಿತ್ತು. ಹಾರಂಗಿ ಕಾಲೋನಿಯ ಪ್ರಪಂಚ. ರೋಗದಿಂದ ನರಳುವ ಕನಕ. ಅರಚುವ ತಂದೆ. ತಲೆ ಚಿಟ್ಟು ಹಿಡಿಸುವ ಅಂಟಿ ರೂತಮ್ಮ. ಹೊಗೆ ಹಿಡಿದು ಕಪ್ಪಾದ ಮನೆ. ಕೆಂಪು ಕಣಗಲೆ ಗಿಡ. ಟ್ರಕ್ ಸದ್ದು....................

ಸಂಗೀತ ಶಾಲೆ ಸೇರಿದ ಆರು ದಿನಗಳಲ್ಲಿ ಹಿಂದಿನ ಆ ಎರಡು ಮನೆಗಳ ಚಿತ್ರಗಳೂ ಮಸುಕಾಗಿದ್ದವು. ಮನೆಯಲ್ಲಿನ ಪುಸ್ತಕಗಳ ಓದು, ಸಂಗೀತ ಪಾಠ ಅವಳ ಏಕಾಕಿತನದ ಸಮಯಗಳನ್ನು ಆಕ್ರಮಿಸಿದವು. ಶಾಲೆಯಲ್ಲಿ ಮೊದಲ ದಿನ ಮೆಲ್ಲನೆ ದಾಳಿ ನಡೆಸಿದ ಅಂಜಿಕೆ, ನಾಚಿಕೆ ಎರಡು ದಿನಗಳಲ್ಲಿ ದೂರ ಸರಿದವು. ನೆರಳಿನಂತೆ ಗಜಗಳ ದೂರಕ್ಕೆ ಕಾಣುತ್ತಿದ್ದ ಬೋಧಕರು, ಸಹಪಾಠಿಗಳು ಸ್ಪಷ್ಟ ಆಕಾರ ತಳೆದು ಸಮೀಪದಲ್ಲಿ ಕಾಣತೊಡಗಿದರು.

ಮನೆಯಲ್ಲಿ ಎರಡನೆ ವ್ಯಕ್ತಿಯ ಸಾಮೀಪ್ಯ ದೊರೆಯುತ್ತಿದ್ದುದು ರಾತ್ರಿಯ ಅರ್ಧ ತಾಸು. ಅವಳು ಹಾಡುತ್ತಿದ್ದಳು. ಸ್ವರ್ಣಮ್ಮ ಗಂಭೀರವಾಗಿ ಕೇಳುತ್ತಿದ್ದಳು. ಅತ್ತೆಯ ಸುಪ್ತ ಮನೋಭಾವ, ಸೊಸೆಯ ಮಾನಸಿಕ ತುಮುಲಗಳ ನಡುವೆ ಆಗಿದ್ದ ಒಪ್ಪಂದ ಅದಷ್ಟೆ.

ಹದಿನೈದು ದಿನಗಳು ಮದ್ರಾಸಿನಲ್ಲಿರುವುದಾಗಿ ಹೇಳಿ ಹೋಗಿದ್ದ ಕಾರ್ತೀಕ ವಾರ ಕಳೆಯುವ ಮೊದಲೇ ಹಿಂತಿರುಗಿದ್ದ. ಯಾವುದೊ ಶಕ್ತಿ ಸೌಭಾಗ್ಯಳನ್ನು ಹಳೆಯ ಆವರಣಕ್ಕೆ ಎಳೆದು ಕೆಡವಿದಂತಾಯಿತು.

ಕಾರ್ತೀಕ ತಾಯಿಗೆ ಸಿನಿಮಾ ರಂಗದಲ್ಲಿ ಆರು ದಿನ ಪಡೆದ ಅನುಭವದ ವರದಿ ಕೊಡುತ್ತಿದ್ದ.

ಸಿನಿಮಾ ಲೋಕದಲ್ಲಿ ಕಥೆ, ಸಂಭಾಷಣೆಗಳಿಗೆ ನಿರ್ದಿಷ್ಟ ನೀತಿ, ನಿಯಮ ಇಲ್ಲವಂತೆ! ನಿರ್ದೇಶಕ, ನಿರ್ಮಾಪಕ ಸಾಹಿತ್ಯದಲ್ಲಿ ಹೊಂದಾಣಿಕೆ ಮಾಡಿ ಪೂರೈಸಿದ ಮೇಲೆ ಚಿತ್ರದ ನಾಯಕ ತನ್ನ ಬದಲಾವಣೆ ಸೂಚಿಸಿದ್ದು, ಅದು ಸೆಟ್‌ನಲ್ಲಿ ಮತ್ತೆ ರೂಪಾಂತರಕ್ಕೆ ಸಿದ್ಧವಾಗಬೇಕೆನ್ನುವ ಸೂಚನೆ....ಮೂರು ದಿನಗಳು ಕಳೆದ ಮೇಲೆ ಅವನು ಮದ್ರಾಸಿಗೆ ಹೊರಡಬೇಕು.

ನಾಟಕದ ಅಭಿನೇತ್ರಿಗೆ ಸಿನಿಮಾ ಜಗತ್ತು ತೆಗಳಲು ನಾಲಗೆ ಹರಿತವಾಗಿತ್ತು.

"ನಾಟಕದ ಸಾಹಿತ್ಯದ ಹಾಗಲ್ಲ ಅದು. ಚಿತ್ರ ಸಾಹಿತ್ಯ ಅಂದರೆ ಪತ್ರಕ್ಕೆ ಸಂಬಂಧ

ಪೆಟ್ರೋರೆಲ್ಲರ ಇಷ್ಟದ ಪ್ರಕಾರ ಬರವಣಿಗೆ ಹಿಗ್ಗಿಸೊ, ಹಿಗ್ಗಿಸೊ ಕೆಲಸ. ಅದು ಗೊತ್ತಿದ್ದೂ ಒಪ್ಪಿಕೊಂಡಿದೀಯ. ಸಾಹಿತಿಯ ಪ್ರತಿಭೆಗೆ ಮೂಲೆ ತೋರಿಸೊ ಜಾಗ ಅಂದ್ರೆ ಸಿನಿಮಾ ರಂಗ."

"ಅವರ ಮಟ್ಟಕ್ಕೆ ಇಳಿದು ಬರೆಯೊ ಕೆಲಸ ಸಾಕು. ಒಪ್ಪಿರೊ ಕೆಲಸ ಪೂರೈಸಿದ ಮೇಲೆ ಆ ಜಾಗಕ್ಕೆ ಕಾಲಿಡೋದಿಲ್ಲ."

ಸೌಭಾಗ್ಯಳಿಗೆ ಆ ಮಾತಿನಿಂದ ಹರ್ಷವಾಗಿತ್ತು. ಹಾಗಾದರೆ ಕಾರ್ತೀಕ ಮನೆಯಲ್ಲಿ ಹೆಚ್ಚು ಹೊತ್ತು ಉಳಿಯುತ್ತಾನೆ.

ಹರ್ಷದ ಮಧ್ಯೆ ಸಣ್ಣ ಬಿರುಕು, ಕಾರ್ತೀಕ ಇಲ್ಲೇ ಉಳಿದರೂ ಹಳೆಯ ಆವರಣದ ಮರು ಸೃಷ್ಟಿ. ಗಂಭೀರ ಪರಿಸರ!

ನಿಧಾನವಾಗಿ ಮೆಟ್ಟಿಲು ಇಳಿದು ಬಂದಳು. ಕಾರ್ತೀಕ ಬುಲ್ ಬುಲ್ ತರಂಗ್ ಹಿಡಿದು ನುಡಿಸುತ್ತಿದ್ದ. ಆ ವಾದ್ಯ ತಮ್ಮಿಬ್ಬರ ನಡುವಿನ ಕಂದರವನ್ನು ಮತ್ತಷ್ಟು ಹಿಗ್ಗಿಸುತ್ತಿದೆ ಎನಿಸಿತು. ಅವಳ ಅನಿಸಿಕೆಯನ್ನು ತಿರುವಿ ಹಾಕುವಂತೆ ಅವನು ವಾದ್ಯ ಪಕ್ಕಕ್ಕೆ ಸರಿಸಿ ಸಾವರಿಸಿ ಕುಳಿತುಕೊಂಡು ಅವಳನ್ನು ಹೊಸಬಳಂತೆ ನಿರುಕಿಸಿದ. ಬದಲಾವಣೆ ಕಂಡಿತ್ತು. ಸಪ್ತವರ್ಣ ಸಂಗೀತ ಶಾಲೆಯ ಆರು ದಿನಗಳ ಅನುಭವ ಮುಖದಲ್ಲಿ ಚೆನ್ನಾಗಿ ಮನೆ ಮಾಡಿತ್ತು.

"ಹೌದು, ಸೌಭಾಗ್ಯ"

ಮಿತಭಾಷಿ ಕುರ್ಚಿಯ ಹಿಂದಕ್ಕೆ ಒರಗಿ ಬಲಗೈ ತಲೆಯ ಹಿಂದೆ ಸೇರಿಸಿದ. ಪ್ರತಿ ನುಡಿಯದೆ ಭಾವಗೀತೆ ಹಾಡಿದಳು. ಕಂಠದ ಬದಲಾವಣೆ ಅವಳಿಗೆ ತೃಪ್ತಿ ತಂದಿತ್ತು. ಅವನಲ್ಲಿ ಮೆಚ್ಚಿಗೆ ಕಾಣಲಿಲ್ಲ.

"ಹಾಡು ಹಿಡಿಸಲಿಲ್ಲವೆ?"

ಗಂಭೀರವಾಗಿ ಕೇಳಿದಳು. ಸ್ವರ್ಣಮ್ಮನ ಹಣೆಯಲ್ಲಿ ನರಗಳು ಉಬ್ಬಿದವು. ನಗರದ ಹವೆಯಲ್ಲಿ ಹುಡುಗಿಗೆ ದಿಟ್ಟತನ ಬೆಳೆಯುತ್ತಿದೆ! ಕಾರ್ತೀಕ ಕುರ್ಚಿಯಲ್ಲಿ ಮುಂದಕ್ಕೆ ಸರಿದ.

"ಹಾಡು ಹಿಡಿಸ್ತು. ಆದರೆ ಕಂಠದಲ್ಲಿ ಒತ್ತಾಯಕ್ಕೆ ಹಾಡುವ ಒಡಕು ಸ್ವರಕೂಡಿ ಬಂದಿದೆ. ನಾನು ಹೇಳಿದ್ದು ಸರಿ ಇಲ್ಲದೆ ಇರಬೋದು. ನನ್ನ ಸಂಗೀತದ ಅಭಿರುಚಿ ಅಷ್ಟಕ್ಕಷ್ಟೆ."

ಬಾಲೆಯ ದೃಷ್ಟಿ ಮೊನಚಾಯಿತು.

"ನಿಮಗೆ ನಿರಾಶೆ ಆಗಿರೋದು ನನ್ನಿಂದ."

ಮೆಲ್ಲನೆ ಆಡಿದ ಪದಗಳು ಕುತ್ತಿಯಲ್ಲಿ ಉರಿದವು. ಅವು ಸ್ವರ್ಣಮ್ಮನ ಕಿವಿ

ಸೇರಲಿಲ್ಲ. ಆಡಿದ ಮಾತುಗಳಿಗಾಗಿ ಪಶ್ಚಾತ್ತಾಪಪಡುವ ಅಗತ್ಯವಿಲ್ಲ. ತನ್ನಿಂದ ಪತಿಗೆ ನಿರಾಶೆ ಆಗಿರುವುದು ನಿಜ. ಮದುವೆ ಆದಾಗ ತನ್ನನ್ನು ಅವನು ಪ್ರೀತಿಸಿರಲಿಲ್ಲ. ಮಧುರ ಧ್ವನಿ ಆಗ ಅವನನ್ನು ಆಕರ್ಷಿಸಿತ್ತು. ಈ ಧ್ವನಿಯೂ ಆಕರ್ಷಿಸಲಾರದು ಎಂಬುದು ಅವನ ಅಭಿಪ್ರಾಯ. ಬದುಕಿನ ಆಸೆಯ ಬೇರುಗಳು ಅಲುಗಿದವು.

ಕಾರ್ತೀಕ ಕುರ್ಚಿಯಿಂದ ಎದ್ದ.

"ಹಾಡಿನಲ್ಲಿ ಜಾನಪದದ ಹಿಂದಿನ ಎಳೆತ ಇದೆ. ಅದು ತಾಯಿ ಹೇಳಿಕೊಟ್ಟ ರೀತಿ ಅಂತ ತಿಳಿತೀನಿ. ಬೇರೆಯವರನ್ನ ತೃಪ್ತಿಪಡಿಸೊ ಒಂದು ಬದಲಾವಣೆ ಈಗ ಅದರಲ್ಲಿ ಸೇರಿಕೊಂಡಿದೆ. ಅಂದರೆ ಶಾಲೆಯಲ್ಲಿ ಕಲೀತಾ ಇರೋದು ಒತ್ತಾಯದ ಮೇಲೆ."

ತುಸು ಕಟುವಾಗಿದ್ದ ಅವನು. ಅತ್ತೆಯ ಕಡೆ ತಿರುಗಿದಳು ಸೌಭಾಗ್ಯ. ತೀರ್ಪು ಬಂತು.

"ನೀನು ಹೇಳಿದ್ದು ಸರಿಯಲ್ಲ, ಕಾರ್ತು. ಸೌಭಾಗ್ಯ ಮನೆಯಲ್ಲಿ ಏನೇ ಕಲಿತಿದ್ರೂ ಈಗ ಇಳಿದಿರೋದು ಶಾಸ್ತ್ರೀಯ ಸಂಗೀತ ಕ್ಷೇತ್ರಕ್ಕೆ. ಅದು ಪ್ರಾರಂಭದಲ್ಲಿ ಒತ್ತಾಯದ ಕಲಿತ. ದಿನ ಕಳೆದರೆ ಕಂಠ ಒತ್ತಾಯದ ಧಾಟಿಯಿಂದ ದೂರವಾಗಿ ಹದವಾಗುತ್ತೆ. ಹುಡುಗಿಯೂ ತೊಡಕಿಗೆ ಸಿಕ್ಕಿದಾಳೆ."

ಮಾರ್ಮಿಕವಾಗಿ ಮಗನನ್ನು ನೋಡಿದಳು. ಸೌಭಾಗ್ಯ ಸಮಾಧಾನದಿಂದ ಮೆಟ್ಟಿಲು ಏರಿದಳು.

ಕಾರ್ತೀಕ ಮದ್ರಾಸಿಗೆ ಹೊರಟ ಮೇಲೆ ಅವಳಿಗೆ ಶಾಲೆಯ ಆವರಣದ ಸೆಳೆತ ಅಧಿಕವಾಯಿತು. ಅವಳ ಕಾತರ ಹೆಚ್ಚಿಸುವಂತೆ ಬಣ್ಣದ ಛತ್ರಿಯ ಮೀನಾಕ್ಷಿ ಎರಡು ದಿನ ಕಾಣಲಿಲ್ಲ. ಮೂರನೆಯ ದಿನ ತರಗತಿಗೆ ವೇಗದ ಹೆಜ್ಜೆ ಹಾಕಿದವಳನ್ನು ಕೆಂಪು ಹೂಗಳ ಛತ್ರಿ ಅಡ್ಡ ಹಾಕಿತು.

"ನಿಲ್ರಿ, ಸೌಭಾಗ್ಯ ಬರ್ನಾರ್ಡ್. ನಿಮ್ಮ ಮುದಿ ಕೋಗಿಲೆ ಇವತ್ತು ರಜ, ಅವಳಿಗಿಂತ ನಾನೇ ಚೆನ್ನಾಗಿ ಪಾಠ ಹೇಳಿಕೊಡ್ತೀನಿ. ಯಾಕಿಷ್ಟು ಒದ್ದಾಡ್ತೀರಿ, ಬನ್ನಿ."

ಅವಳ ತೋಳು ಹಿಡಿದು ಗೇಟು ದಾಟಿದಳು ಮೀನಾಕ್ಷಿ.

"ಎಲ್ಲಿಗೆ ಹೋಗಿದ್ರಿ ಎರಡು ದಿನ?"

ಕಳೆದ ವಸ್ತುವನ್ನು ಮತ್ತೆ ಪಡೆದಂತೆ ಕೇಳಿದಳು.

"ಯಾವುದೊ ದ್ರಾಕ್ಷಿ ತೋಟ ನೋಡೋದಿಕ್ಕೆ ಅಣ್ಣ ಕರಕೊಂಡು ಹೋಗಿದ್ದ ನಾವೂ ದ್ರಾಕ್ಷಿ ಬೆಳಿತೀವಿ.

ರೆಸ್ಟೋರೆಂಟಿನ ಮೂಲೆಯ ಮೇಜು ಹಿಡಿದರೆ. ಮೀನಾಕ್ಷಿಯ ಹತ್ತು ಮಾತಿಗೆ ಅವಳದು ಒಂದು ಮಾತು. ಸರಿಸಮವಾಗಿ ಆಡಲು ವಿಷಯ ಯಾವುದೂ ಇಲ್ಲ. ಪಡೆದ ಅನುಭವ ಸೀಮಿತ. ಹರಟೆಯ ರಾಣಿಯ ಹರಿತವಾದ ಪದಸರಣಿಗೆ ಅವಳು ಚಕಿತಳಾಗಿ ಕಿರುನಗೆ ತೋರುತ್ತಿದ್ದಳು.

ಮೀನಾಕ್ಷಿಗೆ ಏಕಾಏಕಿ ಮಾತು ನಿಲ್ಲಿಸಿ ಸೌಭಾಗ್ಯಳ ಮುಖವನ್ನು ಗಾಢವಾಗಿ ವೀಕ್ಷಿಸುವ ಹುಚ್ಚು. ಸೊಂಪು ಕೂದಲಿನ ಮೇಲೆ ಈರ್ಷ್ಯೆ ಸುರಿಯುವ ನೋಟ.

ಮೀನಾಕ್ಷಿಯ ಸ್ವಂತ ಊರು ಬೇಗಂಚೆರ್ಲಾ. ಹೈದರಾಬಾದಿಗೆ ನಲವತ್ತು ಮೈಲಿ ದೂರದ ಬೆಟ್ಟಗುಡ್ಡಗಳ ಮಧ್ಯೆ ನಿಂತ ಪ್ರದೇಶ. ಅಲ್ಲೊಂದು ದೊಡ್ಡ ಎಸ್ಟೇಟು. ಅದರಲ್ಲಿ ಕೈಗಾರಿಕೆ. ಬೆಂಗಳೂರಿನ ಹವ ಸೊಗಸಾದುದೆಂದು ಅಣ್ಣನೊಂದಿಗೆ ಬಂದಳಂತೆ. ಪಾಪ್ ಸಂಗೀತ ಕಲಿಯುವ ಇಚ್ಛೆ ಏಕಾಏಕಿ ಉಂಟಾಯಿತಂತೆ.

ಮೀನಾಕ್ಷಿ ಮೂವತ್ತೊಂದು ವರ್ಷದ ಅವಿವಾಹಿತೆ. ಹತ್ತಾರು ಊರುಗಳನ್ನು ಸುತ್ತಿದ ಅನುಭವಿ ಯುವತಿ. ಅರಳು ಹುರಿದಂತೆ ಮಾತು. ವಾರದ ಪರಿಚಯದಲ್ಲಿ ಸೌಭಾಗ್ಯಳ ಮುಗ್ಧತೆಗೆ ಮೀಟುಗೋಲು ಹಾಕಿ ಅವಳಲ್ಲಿ ಕಾವು, ಕಲ್ಪನೆ ಮೂಡಿಸಿದವಳು.

ಇಬ್ಬರು ಹೈಗ್ರೌಂಡ್ಸ್ ಕ್ಲಬ್‌ನಲ್ಲಿ ಸಾಮೂಹಿಕ ನೃತ್ಯ ನೋಡಿದರು. ಅದನ್ನು "ಬ್ಯಾಲೆ" ಎಂದು ಪರಿಚಯ ಮಾಡಿಕೊಟ್ಟಳು ಮೀನಾಕ್ಷಿ. ಎರಡು ದಿನಗಳ ನಂತರ ಪಾಪ್ ಸಂಗೀತ ಕಾರ್ಯಕ್ರಮಕ್ಕೆ ಭೇಟಿ. ಬ್ರಿಗೇಡ್ ರಸ್ತೆಯ ದೊಡ್ಡ ಸಿನಿಮಾ ಮಂದಿರ ಪ್ರವೇಶಿಸಿದಾಗ ಸೌಭಾಗ್ಯ ಹಠ ಹಿಡಿದು ಪ್ರಥಮ ಬಾರಿಗೆ ಹಣ ಕೊಟ್ಟು ಟಿಕೆಟ್ ತೆಗೆದುಕೊಂಡಳು. ಹೊರ ಆವರಣದಲ್ಲಿ ಸಾಲುಗಟ್ಟಿ ನಿಂತ ನೂರಾರು ವಾಹನಗಳು. ದೊಡ್ಡ ಪ್ರಮಾಣದ ಚಿತ್ರಗಳು ವರ್ಣರಂಜಿತ ಉಡುಗೆ ತೊಡುಗೆಗಳಲ್ಲಿ ಗುಂಪು ಗುಂಪಾಗಿ ಆಗಮಿಸುವ ಜನಗಳನ್ನು ಕಂಡಾರ ಕುಶಾಲನಗರದ ಸಾಮಾನ್ಯ ದರ್ಜೆಯ ಸಿನಿಮಾ ತಪ್ಪದೆ ನೆನಪಿಗೆ ಬಂದು ಅವಳನ್ನು ಎರಡು ಕ್ಷಣ ಮೂಢಳನ್ನಾಗಿಸಿ ಹೃದಯಕ್ಕೆ ಭಾರ ತುಂಬಿತು.

ಇಂಗ್ಲಿಷ್ ಪ್ರಣಯ ಚಿತ್ರ ಅದು. ಅಚ್ಚರಿ, ಉದ್ರೇಕದಲ್ಲಿ ಕುರ್ಚಿಯ ಹಿಡಿ ಒತ್ತಿದಳು. ಹಿತವಾದ ಹಾಸ್ಯ. ಗಂಡು ಹೆಣ್ಣಿನ ಚಕ್ಕಂದದಲ್ಲಿ ತುಸು ಅಧಿಕವೆನಿಸಿದ ಚುಂಬನ. ಪ್ರಣಯದ ಉಗ್ರತೆ. ಅವಳಿಗೆ ವಿನೂತನ ನೋಟ! ಮೀನಾಕ್ಷಿ ಚಾಕಲೇಟ್ ಸವಿಯುತ್ತ ನಿರ್ವಿಕಾರವಾಗಿ ಚಿತ್ರ ವೀಕ್ಷಿಸಿದಳು. ಸೌಭಾಗ್ಯ ವ್ಯಗ್ರತೆಗೆ ಒಳಗಾಗಿದ್ದಳು. ಮಿದುಳಿನಲ್ಲಿ ಮಿಡಿತ.

ಮೀನಾಕ್ಷಿ ತನಗಿದ್ದ ವೇಗದ ಪ್ರವೃತ್ತಿಯ ಆಧುನಿಕ ಸ್ನೇಹಿತರನ್ನು ದೂರದಿಂದ ಬೆರಳು ಮಾಡಿ ತೋರಿಸಿ ಸೂಕ್ಷ್ಮವಾಗಿ ವಿವರಿಸಿದಳು. ಬೇಗ ಅರ್ಥವಾಗದ

ಪ್ರಣಯ ರಹಸ್ಯಗಳನ್ನು ತುಣುಕು ಮಾತು. ಕಣ್ಣಿನ ಚಲನೆಯಲ್ಲಿ ಸೂಚಿಸಿದಳು. ಅವಳ ಆಕರ್ಷಕ ಲಂಗ, ಧಾವಣಿಯನ್ನು ಜಗ್ಗಿ ಲಘುವಾಗಿ ಮೈ ಒತ್ತಿದಳು.

ಪ್ರತಿಕ್ರಿಯೆ ತೋರದ ಮುಗ್ಧ ಷೋಢಶಿ!

"ಬರ್ನಾರ್ಡ್ ಬಚ್ಚಿ! ನೀವು ಬಹಳ ಸಪ್ಪೆ. ಇನ್ನೆರಡು ದಿನ ಕಳೆದರೆ ನೀವೇ ಪ್ರೇಮೀನ ಹುಡುಕಿಕೊಳ್ತೀರಿ. ಪ್ರೇಮ ಹಳೆಯದಾದ ಮೇಲೆ ಮದುವೆ ಇದ್ದೇ ಇದೆ."

ತುಸು ಅರ್ಥವಾಗುವ ಮಾತು. ತನ್ನ ಪ್ರಸ್ತುತ ಪರಿಸ್ಥಿತಿಗೆ ಅರ್ಥ ವಿವರಣೆ ಸಾಲದು.

ಸೌಭಾಗ್ಯ ತಲ್ಲಣಿಸಿದಳು. ತನಗೆ ಮದುವೆ ಆಗಿದೆ. ಪ್ರೇಮ ತನ್ನ ವೈವಾಹಿಕ ಜಗತ್ತಿನಲ್ಲಿ ಸುಳಿದಾಡದು.

ಶ್ರೀಮಂತರು ಭೇಟಿ ನೀಡುವ ಹೊಟೇಲು ಅವಳನ್ನು ಆಕರ್ಷಿಸಿರಲಿಲ್ಲ. ಶೂನ್ಯ ದೃಷ್ಟಿ ನೀರಿನ ಲೋಟದ ಮೇಲಿತ್ತು.

"ಆ ಮುದುಕಿ .....ತಪ್ಪಾಯ್ತು. ನಿಮ್ಮ ಮಮ್ಮಿ ಬಹಳ ಸೀರಿಯಸ್. ಮನೆಗೆ ಬಂದೋರ ಜೊತೇಲಿ ಎರಡು ಮಾತು ಆಡೋದಿರಲಿ, ನಗುಮುಖವಾದರೂ ತೋರಿಸಬೇಡವೇ?"

ಗೋಡೆಯ ಚಿತ್ರ ನೋಡುತ್ತಿದ್ದ ಸೌಭಾಗ್ಯ ಕದಲಿದಳು. ಕ್ಷಮೆ ಯಾಚಿಸುವ ಸಂಗತಿ ಅದು. ಹಿಂದಿನ ದಿನ ಮನೆಗೆ ಕರೆದೊಯ್ದಿದ್ದ ಮೀನಾಕ್ಷಿಯನ್ನು ವರಾಂಡದಲ್ಲಿ ಕೂಡಿಸಿದಾಗ ಸ್ವರ್ಣಮ್ಮ ಹೊಸ ಮುಖದ ಕಡೆ ದೃಷ್ಟಿ ಮಿಂಚಿಸಿ ಒಳಗೆ ನಡೆದಿದ್ದಳು. ಪರಿಚಯಕ್ಕೆ ಆಸಕ್ತಿ ಕಿಂಚಿತ್ತೂ ತೋರಿರಲಿಲ್ಲ. ಸೌಭಾಗ್ಯ ಅವಳನ್ನು ಮಹಡಿಗೆ ಕರೆದೊಯ್ದು ತನ್ನ ಕೋಣೆಯಲ್ಲಿ ಕೂಡಿಸಿ ಹಣ್ಣಿನ ರಸದ ಲೋಟ ನೀಡಿದಾಗ 'ಹಾಯ್' ಎಂದು ಬೇಸರ ಪ್ರಕಟಿಸಿದಳು ಮೀನಾಕ್ಷಿ. ನಿಮಿಷದಷ್ಟು ಕೂಡದೆ ಹರಿದಾಡಿದಳು.

ಕಪಾಟಿನಿಂದ ಬುಲ್ ಬುಲ್ ತರಂಗ್ ತೆಗೆದು ತಂತಿ 'ಚಿಣ್" ಎನಿಸಿ, "ನಿಮ್ಮ ರಕ್ಷಕ ಐವತ್ತು ವರ್ಷಗಳಷ್ಟು ಹಿಂದಿನವ" ಎಂದಳು. ಪುಸ್ತಕಗಳ ಸಮುದಾಯದಲ್ಲಿ ಕೈ ಆಡಿಸಿ, "ಇಂಗ್ಲಿಷ್ ಪುಸ್ತಕಗಳೇ ಇಲ್ಲ. ಕನ್ನಡ ಕನ್ನಡ! ಕನ್ನಡ ಪುಸ್ತಕಗಳು ಬುದ್ಧಿ ಚಿಕ್ಕದು ಮಾಡುತ್ವೆ, ಬಚ್ಚಿ" ಎಂದು ಮುಖ ಮುದುರಿದಳು. 'ಮಣ್ಣಿನ ದೋಣಿ' ಬರಹದ ಪುಟಗಳನ್ನು ಸರಸರ ತಿರುವಿದಾಗ ಬರಹಗಾರನ ವ್ಯಕ್ತಿತ್ವದ ವಿಮರ್ಶೆ ಬಂತು. "ಸಂನ್ಯಾಸಿ ಮನುಷ್ಯ. ಜೀವನದಲ್ಲಿ ಸೊಗಸು ಹುಡುಕೊ ಗೋಜಿಗೆ ಹೋಗದ ನಿರಾಶಾವಾದಿ. "ಮೇಜಿನ ಮೇಲಿದ್ದ ಖಾಲಿ ಫೋಟೋ ಸ್ಟ್ಯಾಂಡ್ ನೋಡಿ ತಲೆ ಕುಣಿಸಿದಳು. "ಇದು ಹೆಂಡತಿ ಸತ್ತವನ ಕೋಣೆ ಅಥವಾ

ಹೆಂಡತಿ ಬಿಟ್ಟವನ ಕೋಣೆ" ಹಾಗೆಂದು ಕಟುವಾಗಿ ಉಚ್ಚರಿಸಿದಾಗ ಸೌಭಾಗ್ಯಳಿಗೆ ಕಿರಿಚಿಕೊಳ್ಳುವಂತಹ ಉದ್ವೇಗ. ಏರಿದ್ದ ಉಸಿರಾಟ ತಡೆದಿದ್ದಳು.

ಸೌಭಾಗ್ಯಳಿಗೆ ತಾನಿರುವ ಸ್ಥಳದ ಅರಿವಾಯಿತು.

"ನಿಮ್ಮ ಮಮ್ಮಿಗೆ ಮಾತಾಡಿದ್ರೆ ಮುತ್ತು ಉದುರುತ್ತೆ. ಅನ್ನೊ ಬಿಗುಮಾನ."

ಎರಡನೆಯ ಬಾರಿಗೆ ಮಾತು ಚುಚ್ಚಿದಾಗ ಸೌಭಾಗ್ಯ ತನ್ನ ತಪ್ಪಿಲ್ಲ ಎಂದು ತಿಳಿಸುವ ಆತುರದಲ್ಲಿ ಕೇಳಿದಳು.

"ಯಾವ ಮಮ್ಮಿ?"

"ನಿಮ್ಮ ಮನೆಯಲ್ಲಿರೊ ಮಮ್ಮಿ. ಬೇರೆಯೋಳ ಮಮ್ಮಿ ವಿಷಯ ನನಗೆ ಯಾಕೆ?"

"ಅವರು ನನ್ನ ಮಮ್ಮಿ ಅಲ್ಲ. ನನ್ನ ನಿಜವಾದ ಮಮ್ಮಿ ಕನಕ ತೀರಿಹೋದ ಮೇಲೆ ರಕ್ಷಣೆಗೆ ಬಂದೋರು.....ಸ್ವರ್ಣಮ್ಮ."

ಮೀನಾಕ್ಷಿ ಪ್ರತಿಮೆಯಾಗಿ ಕುಳಿತಳು. ನಿನ್ನೆ ನೋಡಿದಾಕೆ ಸೌಭಾಗ್ಯಳ ಮಮ್ಮಿ ಅಲ್ಲ! ನಿಜವಾದ ಮಮ್ಮಿ ಕನಕ ತೀರಿಹೋದಳು!

ಮೀನಾಕ್ಷಿಗೆ ತನ್ನನ್ನು ಹತೋಟಿಯಲ್ಲಿಡಲಾಗದಂತಹ ವಿಚಿತ್ರ ಭಾವ ಕಳೆದ ಹೋದ ಸಿರಿ ಮತ್ತೆ ದೊರೆತಂತೆ ಸಂತಸ. ತಲೆಯಲ್ಲಿ ಹತ್ತಾರು ಕೀಟಗಳು ಹೊಕ್ಕು ಮಿದುಳನ್ನು ತಿವಿದು ಎಚ್ಚರಿಸಿದಂತೆ.

ಕನಕ! ಭಾವಪರವಶತೆಯಿಂದ ಮೆಲ್ಲನೆ ಹೊರಬಂದಳು ಮೀನಾಕ್ಷಿ. ಅವಳ ಮುಖದಲ್ಲಿ ಕಂಡ ಭಾವತರಂಗಗಳಿಂದ ಸೌಭಾಗ್ಯ ತಲ್ಲಣಿಸಿದಳು.

"ಕನಕ ಯಾರು?" ಮುಖ ಮುಂದೆ ತಂದಳು.

"ನನ್ನ ಮಮ್ಮಿ....' ಸೌಭಾಗ್ಯಳ ಸ್ವರ ಕಂಪಿಸಿತು.

"ನಿಮ್ಮ ಮಮ್ಮಿ ಯಾಕೆ ತೀರಿ ಹೋಗಿದ್ದು?"

ಹತ್ತಾರು ಸಂಗತಿಗಳನ್ನು ಸಂಗ್ರಹಿಸುವ ಬಲಯುತ ಕಾತರ, ಆಸಕ್ತಿ ಅವಳಲ್ಲಿ ಕಂಡಿತು.

"ಕರುಳು ಹುಣ್ಣು ಆಗಿತ್ತು. ಕುಶಾಲನಗರದ ಆಸ್ಪತ್ರೇಲಿ ತೀರಿ ಹೋದ್ಲು" ಕಣ್ಣು ಜಲಪರದೆಯಿಂದ ಮಂಜಾಯಿತು.

"ಕುಶಾಲನಗರ! ಮತ್ತೆ ಹಾರಂಗಿ?"

"ಅಲ್ಲಿಂದಲೇ ಹಾರಂಗಿ ಅಣೆಕಟ್ಟೆಗೆ ಹೋಗೋದು"

"ಡ್ಯಾಡಿ?"

"ಅವರು ಹಾರಂಗಿಯಲ್ಲೇ ಇರೋದು."

"ಅವರಿಬ್ಬರ ಫೋಟೋ ನಿಮ್ಮ ಮನೇಲಿ ಇದೆಯಾ?"

"ಇಲ್ಲ"

"ಈ ಎರಡನೆಯ ಮಮ್ಮಿ ಯಾರು?"

"ಕಾದಂಬರಿ ಬರೀತಾರಲ್ಲ ಕಾರ್ತೀಕ....ಅವರ ತಾಯಿ. ಹೆಸರು ಸ್ವರ್ಣಮ್ಮ. ಮಮ್ಮಿ ಹೋದ ಮೇಲೆ ನನ್ನ ಸಾಕ್ತಾ ಇದಾರೆ."

ಮಾತು ಭಾರವಾಗಿ ಬಂತು. ಮೀನಾಕ್ಷಿ ಮತ್ತಷ್ಟು ಪ್ರಶ್ನೆ ಹಾಕುವಳೆಂದು ಭಾವಿಸಿದಳು. ಆದರೆ ಮೀನಾಕ್ಷಿ ನಿಮಿಷದ ಮೌನ ತಾಳಿದಳು.

"ಸೌಭಾಗ್ಯ. ನಿಮಗೆ ಚಂದ್ರಬಾಬು ಗೊತ್ತೆ?"

ಅವಳತ್ತ ನೋಡದೆ ನಿಧಾನವಾಗಿ ಕಾಫಿ ಲೋಟ ಎತ್ತಿದಳು.

"ಹಾಗಂದ್ರೆ ಯಾರು?"

ಲೋಟ ಇಳಿಸಿ ಮೇಜಿಗಿಟ್ಟಳು ಬಾಲೆ.

"ದೇವಕಿ?"

"ಇಲ್ಲ"

ಸೌಭಾಗ್ಯಳ ಬೆರಳು ಮೇಜು ಸವರಿತು. ಮೀನಾಕ್ಷಿಯ ಮುಖ ಹಿಂದಕ್ಕೆ ಸರಿಯಿತು.

"ಇಬ್ಬರೂ ಬೇಗಂಚೆರ್ಲಾದೋರು. ನಾನೂ ಅಲ್ಲಿಯೋಳೆ."

ಮುಂದೇನೂ ಹೇಳಲಿಲ್ಲ. ಅವಳ ಅಸಂಬದ್ಧ ಪ್ರಶ್ನೆಗಳಿಂದ ತಲ್ಲಣಗೊಂಡ ಬಾಲೆ ತಲೆ ತಗ್ಗಿಸಿ ಪುಸ್ತಕ ತಿರುವಿದಳು. ತನ್ನ ವಿಷಯಗಳನ್ನು ಅಧಿಕವಾಗಿ ತಿಳಿಸಬಾರದೆಂಬುದು ಗತಿಸಿದ ಕನಕಳ ಎಚ್ಚರಿಕೆ!

ಹೊರಬಂದಾಗ ಸ್ಕೂಟರ್‌ನ ಜೋಡಿ ಹಾರನ್ ಶಬ್ದ ಕೇಳಿಸಿತು. ಗಂಭೀರ ನಗೆಯೊಂದಿಗೆ ವಾಹನದ ಕಡೆಗೆ ಕೈ ತೋರಿದಳು ಮೀನಾಕ್ಷಿ. ಚಿಪ್ಪಿನಂತಹ ಕಪ್ಪು ಟೋಪಿ ಹಾಕಿದ ಅದೇ ಗೆಳೆಯ. ಸೌಭಾಗ್ಯಳನ್ನು ನಿರುತ್ಸಾಹಗೊಳಿಸುವಂತೆ ಸರಿದು ಹೋದಳು.

ಮತ್ತೆರಡು ದಿನಗಳ ನಂತರ ಮೀನಾಕ್ಷಿಯ ಮನೆಗೆ ಭೇಟಿ ಕೊಡುವ ತವಕ. ಆಹ್ವಾನ ಬಲವಾಗಿತ್ತು. ಅವಳ ಮನೆಯಲ್ಲಿ ಬರಬಹುದಾದ ಪ್ರಶ್ನೆಗಳಿಗೆ ತನ್ನ ಉತ್ತರ ಏನೆಂಬ ಆತಂಕ.

ಛತ್ರಿ ಹಿಡಿಯದೆ ಬಂದ ಮೀನಾಕ್ಷಿಯ ಮುಖದಲ್ಲಿ ಉತ್ಸಾಹವಿರಲಿಲ್ಲ.

"ನಮ್ಮಣ್ಣ ಶಿವಮೊಗ್ಗಕ್ಕೆ ಹೋಗಿದಾನೆ. ಇನ್ನೊಂದು ದಿನ ಮನೆಗೆ ಹೋಗೋಣ. ಇವತ್ತು ಒಂದು ಥರಾ ಜಾಗಕ್ಕೆ ಕರಕೊಂಡು ಹೋಗ್ತೀನಿ."

ಅವಳ ಮನೆಗೆ ಭೇಟಿ ಕೊಡುವ ಕಾರ್ಯ ಕಳೆದರೆ ಸಾಕು ಎಂದು ಪರಿತಪಿಸಿದವಳಿಗೆ ಬೇಸರವಾಯಿತು. ಕರೆದೊಯ್ಯಲಿರುವ ಹೊಸ ಜಾಗ ಯಾವುದೆಂದು ಕೇಳುವುದರಲ್ಲಿ ಮೀನಾಕ್ಷಿ ಕೈ ತಟ್ಟಿ ಆಟೋರಿಕ್ಷಾ ನಿಲ್ಲಿಸಿದಳು.

"ಈಜುಕೊಳ!"

ಉದ್ಗಾರ ತೆಗೆದಳು ಬಾಲೆ. ವಾಹನ, ಮಹಿಳೆಯರ ಸ್ವಿಮಿಂಗ್‌ಫೂಲ್ ಮುಂದೆ ನಿಂತಿತ್ತು.

"ಹೌದು, ಸ್ವಿಮಿಂಗ್ ಫೂಲ್"

ಎಂದು ಅವಳ ಕೈ ಹಿಡಿದು ಎಳೆದೊಯ್ದಳು. ಒತ್ತಾಯಕ್ಕೆ ಮಣಿಯದೆ ದಾರಿ ಇರಲಿಲ್ಲ. ಕಡಿಮೆ ಆಳದ ನೀರಿಗೆ ಇಳಿದುದಾಯ್ತು. ನೀರಿಗಿಳಿದ ಮೇಲೆ ಚಳಿಯ ಬಿಡುಗಡೆ. ರಬ್ಬರ್ ಟ್ಯೂಬ್‌ನ ಬಳೆಯಲ್ಲಿ ಮೈ ಹೊಂದಿಸಿ ಕೈ ಕಾಲು ಬಡಿದಳು. ನೀರಿನಿಂದ ಎದ್ದ ಮೇಲೆ ಮತ್ತೆ ಚಳಿ ಮೈ ಜುಂ ಎನಿಸಿತು.

ಈಜುಕೊಳಕ್ಕೆ ತಾನು ಇಳಿದ ಸುದ್ದಿ ಸ್ವರ್ಣಮ್ಮನಿಗೆ ತಿಳಿದರೆ ಮನೆಯಲ್ಲಿ ಹೊಸ ಆವರಣದ ಸೃಷ್ಟಿ! ಕಾರ್ತೀಕ ಅದರಿಂದ ತಬ್ಬಿಬ್ಬಾಗುವುದು ನಿಜ.

ನೆಮ್ಮದಿಗೆಟ್ಟ ರಾತ್ರಿ ಕಳೆದು ಶಾಲೆಯ ಬಳಿ ಬಂದಾಗ ಮೀನಾಕ್ಷಿಯ ಸುತ್ತಲೂ ಸುಳಿದ ಸ್ನೇಹಿತರನ್ನು ಗಮನಿಸಿದಳು. ಕಾರ್ತೀಕನ ನೆನಪು ಅಳಿಸುವಂತಹ ನಿಲುವು, ಗಂಭೀರತೆ ಯಾವನಿಗೂ ಇಲ್ಲ.

ಕಾರ್ತೀಕನ ನೆನಪು ಅಳಿಸುವುದು! ತನಗೆಲ್ಲಿಯದು ಈ ಕ್ಷುದ್ರ ಯೋಚನೆ? ಪತ್ನಿಯೆಂಬ ಹೆಸರು ಕೊಟ್ಟು ಬಂಧನ ತೊಡಿಸಿ ಏಕಾಕಿ ಅಲೆದಾಡುವ ಪತಿಗೆ ತನ್ನ ಬಗೆಗೆ ಇದೇ ಯೋಚನೆ ಇದ್ದೀತು.

"ನನ್ನ ಬಾಯ್‌ಫ್ರೆಂಡ್‌ನ ಭೇಟಿಯಾಗಿ .....ಮಿಸ್ಟರ್ ಸುಧಾಕರ."

ಸಂಗಾತಿಯ ಹೆಸರನ್ನು ರಾಗವಾಗಿ ಎಳೆದಳು ಮೀನಾಕ್ಷಿ. ಬಣ್ಣದ ಛತ್ರಿ ಎಡಬಲ ಓಲಾಡಿತು.

"ಬಾಯ್‌ಫ್ರೆಂಡ್.....?"

ಅಚ್ಚರಿಯ ಪ್ರಶ್ನೆಯಲ್ಲ. ಪದದ ಅರ್ಥ ತಿಳಿಯದೆ ಉದ್ಗರಿಸಿದ ಬೆಪ್ಪುತನ ಅದು. ಮೀನಾಕ್ಷಿಗೆ ಮೈ ಪರಚಿಕೊಳ್ಳುವಂತಹ ಬೇಸರ.

"ನೀವು ಈ ಸಿಟಿಯಲ್ಲಿ ಇರೋದಿಕ್ಕೆ ಲಾಯಕ್ ಇಲ್ಲ. ಬಚ್ಚಿ ಅಂದ್ರೆ ಸಖತ್ ಬಚ್ಚಿ. ಇಗೊ, ಮಿಸ್ಟರ್ ಸುಧಾಕರ...."

ಸುಧಾಕರನ ಕೈ ಹಿಡಿದು ಮುಂದಕ್ಕೆ ಎಳೆದಳು. ಮತ್ತಷ್ಟು ಬೆಪ್ಪುತನ ತೋರಲು ಇಚ್ಛಿಸದೆ ಕಷ್ಟದಿಂದ ಮುಖ ಎತ್ತಿದಾಗ ಕಂಡವನು ವಿಚಿತ್ರ ಪೋಷಾಕುಗಳ ಇಪ್ಪತ್ತೊಂದರ ಯುವಕ. ನಾಚಿಕೆ ಹತ್ತಿದ ನಸುಗಪ್ಪು ಮುಖದಲ್ಲಿ ತೆಳುವಾಗಿ ಹರಡಿದ ಮ್ಲಾನತೆ. ಪರಿಚಿತ ನೋಟ, ನಿಲುವುಗಳ ಅಪರಿಚಿತ! ಸ್ಕೂಟರ್‌ನಲ್ಲಿ ಮೀನಾಕ್ಷಿಯನ್ನು ಒಯ್ಯುವವನು.

ಅವನ ದೃಷ್ಟಿ ಅವಳ ಪೊದೆಕೂದಲಿನ ಮೇಲಿತ್ತು. ಮಾತಿಗೆ ಪ್ರಾರಂಭಿಸಿದವನು ಯಾರನ್ನೊ ಕಂಡು ಇಬ್ಬರಿಗೂ ಬೈ ಬೈ ಹೇಳಿ ಸ್ಕೂಟರ್ ಹತ್ತಿದ.

ಮೀನಾಕ್ಷಿ ಕಣ್ಣು ಮೀಟಿದಳು.

"ಸುಧಾಕರನ ಜೊತೇಲಿದ್ರೆ ಅದೇ ಮಜಾ."

'ಬಾಯ್‌ಫ್ರೆಂಡ್' ಪದದ ಅರ್ಥ ಈಗ ಅರ್ಧ ಮಸುಕಾಗಿ ಕಾಣಿಸಿತು. ಸೌಭಾಗ್ಯ ರೋಮಾಂಚನಕ್ಕೆ ಸಿಕ್ಕಿದಳು. ಕೆನ್ನೆಗಳಲ್ಲಿ ನಿಧಾನವಾಗಿ ರಂಗೇರಿತು.

"ಮೀನಾಕ್ಷಿ, ಅವರು ನಿಮಗಿಂತ ಚಿಕ್ಕೋರು....."

ಕಿಶೋರಿಗೆ ಪ್ರೌಢ ಮಾತು ಹೃದಯದಿಂದ ಮೀಟಿ ಬಂದಿತ್ತು.

"ಮೂವತ್ತೊಂದರ ಹುಡುಗಿಗೆ ಇಪ್ಪತ್ತೊಂದರ ಹುಡುಗನ ಗೆಳೆತನ ಕೇಳಿದರೆ ಏನು ಗೊತ್ತಾಗುತ್ತೆ. ಅನುಭವಿಸಿ ನೋಡ್ಬೇಕು."

ಅಶ್ಲೀಲ ಮಾತಿನ ಆಳಕ್ಕೆ ಅವಳು ಬೇಗ ಇಳಿಯಲಾಗಲಿಲ್ಲ. ವಿಚಾರ ಅವಳಲ್ಲಿ ಭುಗಿಲೆಬ್ಬಿಸಿತು.

ಮೂವತ್ತೊಂದರ ಹೆಣ್ಣಿಗೆ ಇಪ್ಪತ್ತೊಂದರ ಯುವಕ! ಸಂಗ ಅನುಭವಿಸಿ ನೋಡಬೇಕು! ವಿಪರ್ಯಾಸದ ಹೋಲಿಕೆ ತಪ್ಪದೆ ಬಂತು.

ತನಗೆ ಹದಿನಾರು....ಕಾರ್ತೀಕನಿಗೆ ನಲವತ್ತು.

"ಸುಧಾಕರ ನಮ್ಮ ಕನ್ಸರ್ವೆಟೋರಿಯಂನಲ್ಲೇ ಪಿಯಾನೊ ಕಲೀತಾ ಇದಾನೆ. ಹೆಣ್ಣಿಗಿಂತಲೂ ನಾಚಿಕೆ ಅವನಿಗೆ. ನಿಮ್ಮ ಮೈಯಲ್ಲಿ ಕಾವು ಏರ್ತಾ ಇರೊ ಹಾಗೆ ಕಾಣುತ್ತೆ. ನನ್ನ ಬಾಯ್‌ಫ್ರೆಂಡ್‌ನ ಹಾರಿಸಿಬಿಟ್ಟೀರಿ."

ಅವಳ ಕೆನ್ನೆ ಸವರಿ, ತೋಳು ನೋಯುವಂತೆ ಹಿಂಡಿ ಕಿಲಕಿಲ ನಕ್ಕರು ಮೀನಾಕ್ಷಿ, ಸೌಭಾಗ್ಯ ಗೋಡೆಗೆ ಒರಗಿ ಬೆವರು ಒರೆಸಿಕೊಂಡಳು. ಉಸಿರಾಟ ತೀವ್ರವಾಗಿತ್ತು. ಮೀನಾಕ್ಷಿ ಹೇಳಿದಂತೆಯೇ ಮೈಯಲ್ಲಿ ಕಾವು ಏರುತ್ತಿತ್ತು.

ಮೀನಾಕ್ಷಿ ಚರ್ಮದ ಕೈ ಚೀಲದಿಂದ ಮಡಿಸಿದ ಪುಸ್ತಕ ತೆಗೆದುಕೊಟ್ಟಳು. ದಪ್ಪನೆಯ ಹದಿನಾರು ಪುಟಗಳ ವರ್ಣಚಿತ್ರಗಳ ಸಣ್ಣ ಹೊತ್ತಿಗೆ. ಸೌಭಾಗ್ಯ ಆಸಕ್ತಿಯಿಂದ ಪುಟ ತಿರುವಿದಳು. ಕಣ್ಣುಗಳು ಅರಳಿದವು. ಮತ್ತೆ ನಿಸ್ತೇಜವಾದವು.

ಬತ್ತಲೆ ಚಿತ್ರಗಳು! ನಾನಾ ಭಂಗಿಯಲ್ಲಿ ನಿಂತ, ಕುಳಿತ ಗಂಡು ಹೆಣ್ಣುಗಳ ಉದ್ರೇಕ ಹುಟ್ಟಿಸುವ ವಿನ್ಯಾಸಗಳು!

ಮೈಯಲ್ಲಿ ಏರಿದ ಕಾವು ಕುದಿಯುವ ಬಿಂದು ಮುಟ್ಟುವ ಸ್ಥಿತಿ, ಸೌಭಾಗ್ಯ ಪುಸ್ತಕ ಹಿಂತಿರುಗಿಸಿ ಬೊಂಬೆಯಾಗಿ ನಿಂತಳು. ನಿರೀಕ್ಷಿಸಿದ ಬದಲಾವಣೆಗಳ ಅವಳ ಮುಖದಲ್ಲಿ ಕಾಣದ ಮೀನಾಕ್ಷಿಗೆ ನಿರಾಶೆಯಾಯಿತು.

"ಕೋಪ ಬಂತೆ, ಮಿಸ್ ಬರ್ನಾರ್ಡ್?"

ಬರ್ನಾರ್ಡ್ ಬೊಂಬೆ ಯಾವ ಉತ್ತರವನ್ನೂ ಕೊಡದೆ ತಲೆ ಆಡಿಸಿತು. ಮೀನಾಕ್ಷಿ ಹೇಳಿದಳು.

"ಮದ್ರಾಸಿನಿಂದ ತಂದ ಪುಸ್ತಕ. ಸುಧಾಕರನಿಗೆ ತೋರಿಸೋದಿಕ್ಕೆ ತೊಗೊಂಡು ಬಂದೆ. ಅವನೂ ನಿಮ್ಮ ಹಾಗೆ ಬಚ್ಚ. ಅವನಿಗೆ ಮಜಾ ಅನ್ನೋದು ನಾನೇ ಹೇಳಿಕೊಡಬೇಕೂಂದ್ರೆ ಏನು ಹೇಳ್ಲಿ?"

ತಲೆ ತಟ್ಟಿಕೊಂಡಳು. ಉತ್ತರ ಹೊಳೆಯದೆ ಮೆಲ್ಲನೆ ಹೆಜ್ಜೆ ಸರಿಸಿದಳು ಕಿಶೋರಿ. ಮೀನಾಕ್ಷಿ ಅವಳ ಕೈ ಹಿಡಿದು ಮತ್ತೆ ಕಾಂಪೌಂಡ್ ಒರಗಿ ನಿಂತಳು.

"ನೀವು ಮಾತಾಡ್ದೆ ಇರೋದು ನೋಡಿದ್ರೆ ತುಂಬ ಕೋಪ ಬಂದಿರೊ ಹಾಗೆ ಕಾಣುತ್ತೆ. ಇಲ್ಲ, ಚಿತ್ರಗಳಿಂದ ಆಗಿರೊ ಖುಷಿ ನಿಮ್ಮ ಮೈಯಲ್ಲಿ ಇಳೀತಾ ಇರ್ಬೇಕು, ನನ್ನ ತಪ್ಪಿಲ್ಲ. ಆ ಚಿತ್ರಗಳು ನಾನು ತೆಗೆದಿದ್ದೆ? ಮದುವೆ ಆಗದೆ ಇದ್ದೋರಿಗೆ ತರಬೇತಿ ಕೊಡೊ ಚಿತ್ರಗಳು..."

ಅವಳ ಕೊರಳು ಸವರಿದಳು. ಸೌಭಾಗ್ಯಳಿಗೆ ಉಸಿರುಕಟ್ಟಿದಂತಾಗಿತ್ತು. ತುಟಿ ಬಲವಾಗಿ ಕಚ್ಚಿ ಓಡಿದಳು. ರಸ್ತೆಯ ತುದಿಯವರೆಗೆ ಓಡಿ ತಿರುವಿನಲ್ಲಿದ್ದ ವಿದ್ಯುತ್ ಕಂಬ ಒರಗಿ ಉಬ್ಬಸಪಡುತ್ತ ನಿಂತಳು.

ಮದುವೆ ಆಗದಿದ್ದವರಿಗೆ ತರಪೇತು ಕೊಡುವ ಚಿತ್ರಗಳು! ಮದುವೆಯಾದವಳಿಗೆ ತರಬೇತಿ? ಹಾರಂಗಿ ಕಾಲೋನಿಯಲ್ಲಿ ಗೆಳತಿ ರಾಣಿ ತುಣುಕು ಮಾತುಗಳಲ್ಲಿ ಮಾರ್ಮಿಕವಾಗಿ ತಿಳಿಸುತ್ತಿದ್ದುದು ಅವೇ ಸಂಗತಿಗಳು. ಅರ್ಥವಾಗುವ ಮೊದಲೇ ಕಲ್ಪನೆಗಳು ಆವಿಯಾಗುತ್ತಿದ್ದವು. ಈಗ ಬತ್ತಲೇ ಚಿತ್ರಗಳು ಕಲ್ಪನೆಗೆ ರೂಪುಗೊಟ್ಟು ನಿಲ್ಲಿಸುತ್ತಿವೆ. ಅಪ್ರಬುದ್ಧ ತಲೆಯಲ್ಲಿ ಬಣ್ಣದ ಹೊಗೆ ಎಬ್ಬಿಸಿದ ನಗ್ನ ವಿನ್ಯಾಸಗಳು!

ಅವಳ ಬೆನ್ನಿಗೆ ಬಂದು ಆತು ನಿಂತಳು ಮೀನಾಕ್ಷಿ. ಛತ್ರಿ ಮಡಿಸಿದಳು.

"ಯಾಕೆ ಹೀಗೆ ಓಡಿಬಂದ್ರಿ? ಯಾರೂ ಕಾಣದ ಚಿತ್ರಗಳಲ್ಲ ಅವು."

ಸಂತೈಸುವಂತೆ ತಲೆ ಸವರಿದಳು. ಇನ್ನೂ ಅವಳಲ್ಲಿ ಆಡುತ್ತಿದ್ದ ಏದುಸಿರನ್ನು ಅಣಕವಾಡಿದಳು.

"ನೀವು....ನೀವು ಯಾಕೆ ಈ ಛತ್ರಿ ಯಾವಾಗಲೂ ಹಿಡಿದಿರ್ತೀರಿ?'

ಪಕಪಕ ನಕ್ಕಳು ಪ್ರೌಢೆ.

"ಬೂಟಾಟಿಕೆ ಮಾತು ಆಡ್ತೀರಾ. ನಾನು ಕೇಳಿದ್ದಕ್ಕೆ ನೀವು ಹೇಳ್ತಾ ಇರೋದೇನು?"

"ಇಲ್ಲ, ಇಲ್ಲ..ಈ ಛತ್ರಿ ಯಾಕೇಂತ ನಿಜವಾಗ್ಲು ಹೇಳಿ."

'ಉಫ್' ಎಂದು ಕೈ ಕಟ್ಟಿ ನಿಂತಳು.

"ನಾನು ಓದಿದ್ದು ಬೆಜವಾಡದಲ್ಲಿ. ಅಲ್ಲಿ ಬಿಸಿಲು ನಿಮಗೆ ಗೊತ್ತಿಲ್ಲ. ಬೆಂಕಿ ತಲೆ ಮೇಲೆ ಸುರಿದ ಹಾಗೆ. ಯಾರ ಕೈಲಿ ನೋಡಿದ್ರೂ ಒಂದು ಛತ್ರಿ, ಒಂದು ಬೀಸಣಿಗೆ. ಹತ್ತು, ಹತ್ತು ಗಜ ದೂರಕ್ಕೆ ಒಂದು ಸೋಡಾ ಅಂಗಡಿ. ನಿಮಗೆ ಛತ್ರಿಯ ಸೈಕೊ ಹತ್ತೋದಾದ್ರೆ ನಾಳೆಯಿಂದ ಈ ಛತ್ರಿ ತರೋದಿಲ್ಲ.

ಛತ್ರಿಯ ಸೈಕೊ! ಹಾಗೆಂದರೆ?

ಪ್ರಶ್ನೆ ಹಾಕಿ ವಿಷಯ ಕೆದಕಿಕೊಳ್ಳುವ ಉಸಾಬರಿ ಬೇಕಿರಲಿಲ್ಲ.

"ಛತ್ರಿ ತೊಗೊಂಡು ಬನ್ನಿ. ನನಗೆ ಭಯ ಇಲ್ಲ."

ಗಾಬರಿಯಿಂದ ನುಡಿದಳು. ನಗ್ನ ಚಿತ್ರಗಳು ತಲೆಯಿಂದ ದೂರವಾಗಿ ಇರಲಿಲ್ಲ.

"ಅಂದರೆ ನಾನು ತೋರಿಸಿದ ಚಿತ್ರಗಳು ನಿಮಗೆ ಹಿಡಿಸಿವೆ. ನನ್ನಿಂದ ತಪ್ಪೇನೂ ಆಗಿಲ್ಲವಲ್ಲ?"

"ಇಲ್ಲ"

ಮುಂದಿನ ಪ್ರಶ್ನೆಗಳ ದಾಳಿ ತಪ್ಪಿಸುವ ಚಿಂತೆಯ ಭರದಲ್ಲಿ ಸಮ್ಮತಿಸಿದಳು. ಮೀನಾಕ್ಷಿ ನಿರ್ಗಮಿಸಿದುದು ದುಃಸ್ವಪ್ನ ಕಳೆದಷ್ಟು ಹಿತವಾಗಿತ್ತು.

* * *

ನಗರದ ಮೇಲೆ ಎಳೆ ಬಿಸಿಲಿನ ಹೊದಿಕೆ ಹರಡಿದ್ದ ದಿನ ಅದು. ಸೌಭಾಗ್ಯ ಶಾಲೆಯಿಂದ ಬರುವ ಹೊತ್ತಿಗೆ ಕಾತರದ ಕಣ್ಣುಗಳ ಸುಧಾಕರ ಕಾದು ನಿಂತಿದ್ದ. ಅವನಲ್ಲಿದ್ದ ತೀವ್ರತೆ, ಅದರೊಂದಿಗೆ ಚಕ್ಕಂದವಾಡಿದ ಸಂಕೋಚ ಅವಳ ಆಸಕ್ತಿ ಕೆರಳಿಸಿತು. ನೀಳ ದೇಹದ ದೀರ್ಘ ಕೇಳಿ ಎದುರು ಮನೆಯ ಗೋಡೆ ಒರಗಿ ರಸ್ತೆಯ ಎರಡು ಕಡೆಗೆ ಗಮನಿಸುತ್ತಿದ್ದರೂ ಅವಳಿಗಾಗಿ ಕಾದಿರುವುದು ಸ್ಪಷ್ಟವಾಗಿತ್ತು.

ಸೌಭಾಗ್ಯ ನಸು ನಗೆ ಬೀರಿದಳು. ಮೀನಾಕ್ಷಿಯ ಪ್ರಭಾವದಿಂದ ಅವಳ ರೂಪು ಆಕರ್ಷಕ ವಿನ್ಯಾಸ ಪಡೆದಿತ್ತು.

ಎದೆಯ ಮೇಲೆ ಎಡಬಲ ಇಳಿಬಿದ್ದ ಜೋಡಿ ಜಡೆಗಳ ಸಂಗಮದಲ್ಲಿ ದೊಡ್ಡ ಕೆಂಪು ಗುಲಾಬಿ. ಅದರ ಮೇಲೊಂದು ರಿಬ್ಬನ್. ಬಿಳುಪು ಷರ್ಟ್, ಹಸಿರು ಸ್ಕರ್ಟ್. ಎತ್ತರದ ಹಿಮ್ಮಡಿಯ ಹಸಿರು ಪಾದರಕ್ಷೆಗಳು. ಸ್ಫುಟವಾಗಿ ಕೊರದಿಟ್ಟ

ದೇಹದ ಅಂಗಗಳು.

ಅವಳ ನಸುನಗೆಯಿಂದ ಉತ್ತೇಜಿತನಾದರೂ, ವಿಶ್ವಾಸ ಸಾಲದೆ ಕಸಿವಿಸಿಗೊಂಡಿತ್ತು ಅವನ ನೋಟ. ಮುಖದಲ್ಲಿ ಅಳಿಯದ ನಾಚಿಕೆ ಸಂಕೋಚ. ಮೀನಾಕ್ಷಿಯ ಗೆಳೆಯರಲ್ಲಿ ಅವನೊಬ್ಬನೇ ಮಿತಭಾಷಿ, ಗಂಭೀರ ಪ್ರಕೃತಿಯವ ಸಿನಿಮಾ, ಕುದುರೆ ಪಂದ್ಯ, ಕಾರು ಪಂದ್ಯ, ನೃತ್ಯ....ನೂರಾರು ವಿಷಯಗಳಿಂದ ತಲೆ ಚಿಟ್ಟು ಹಿಡಿಸುವವರ ಮಧ್ಯೆ ಏಕೈಕ ಸೌಮ್ಯ ಭಾವದ ವ್ಯಕ್ತಿ.

"ಅವತ್ತು ನನ್ನ ಸ್ನೇಹಿತ ಕರೆದ. ಪರಿಚಯ ಪೂರ್ತಿ ಆಗೋದಿಕ್ಕೆ ಮೊದಲೇ ಹೊರಟುಬಿಟ್ಟೆ, ಕ್ಷಮಿಸಿ. ಮೀನಾಕ್ಷಿ ನಿಮ್ಮ ವಿಷಯ ಹೇಳಿದ್ರು."

ಸುಧಾಕರ ಕೆಂಪೇರಿದ ಮುಖ ಪಕ್ಕಕ್ಕೆ ತಿರುಗಿಸಿ ಹೇಳಿದ. ತನಗಿಂತಲೂ ಹೆಚ್ಚಿನ ಸಿಗ್ಗು ಇವನಿಗೆ ಎನಿಸಿದಾಗ ಅವಳಿಗೆ ಧೈರ್ಯ ಏರಿತು.

"ನೀವು ಶಾಲೆಯ ಹೊರಗೆ ಕಾಣಿಸೋದೇ ಇಲ್ಲ."

ಅವನಿಗಿಂತಲೂ ಸ್ನೇಹಪ್ರಿಯೆ ಎಂಬಂತೆ ಹೇಳಿದಳು. ಅವನ ಮುಖದಲ್ಲಿ ಒಣ ನಗೆ ಸರಿದು ಹೋಯಿತು.

"ನನಗೆ ಸಮಯ ಸಿಗೋದಿಲ್ಲ."

"ಏನು ಕೆಲಸ ಮಾಡ್ತೀರಿ?"

"ವಿಪರೀತ ಕೆಲಸ. ಪಿಯಾನೊ ಅಭ್ಯಾಸವೂ ಸರಿಯಾಗಿ ಮಾಡ್ತಿಲ್ಲ."

ಕೆಲಸ ಯಾವುದೆಂದು ತಿಳಿಸಲಿಲ್ಲ. ಪ್ರಶ್ನೆ ಹಾಕಬೇಕೆಂಬ ಆಸೆಗೆ ತಡೆಗೊಟ್ಟಳು.

"ಮತ್ತೆ ಕಾಣ್ತೇನಿ....ಬೈ ಬೈ."

ದಿನವೆಲ್ಲ ಮಾತಾಡುವಂತೆ ಕಾದು ನಿಂತವನು ಏಕಾಏಕಿ ಹೆಜ್ಜೆ ಸರಿಸಿದ, ನಿಲ್ಲುವ ಆಸೆಯನ್ನು ಒತ್ತಾಯದಿಂದ ಸರಿಸಿರುವುದು ಸ್ಪಷ್ಟವಾಗಿತ್ತು.

ಶನಿವಾರ ಸೌಭಾಗ್ಯಳೊಂದಿಗೆ ಇಬ್ಬರು ಗೆಳತಿಯರನ್ನು ಮಿಲ್ಲರ್ ರಸ್ತೆಯ ಕಡೆಗೆ ಕರೆದೊಯ್ದಳು ಮೀನಾಕ್ಷಿ. ಪ್ರಮುಖ ರಸ್ತೆಯಿಂದ ಎರಡು ಅಡ್ಡರಸ್ತೆ ದಾಟಿ ಬಂದರೆ ಭವ್ಯ ಮನೆಗಳಿಂದ ದೂರವಾಗಿ ಖಾಲಿ ನಿವೇಶನ ಒಂದರ ಹಿಂದಕ್ಕೆ ನಿಂತ. ಆಕರ್ಷಣೆ ಇಲ್ಲದ ಹಳೆಯ ಫಲಕದ ಕಾಫಿ ಹೌಸ್. ಹೊರಗಡೆ ನಿಂತ ಎರಡು ಕಾರುಗಳು, ಹತ್ತಾರು ಸ್ಕೂಟರುಗಳು ಹೊಟೇಲಿನ ಜನಪ್ರಿಯತೆಯನ್ನು ತೋರಿದ್ದವು.

ಮೇಜಿನ ಸುತ್ತಲೂ ಹುಡುಗಿಯರು 'ಕಿಲಕಿಲ' ಅಲೆಯೆಬ್ಬಿಸಿ ಕುಳಿತರು ಸೂಪ್ ಬಟ್ಟಲುಗಳು ಬಂದವು. ಚಮಚ ಇಳಿಸಿದ ಮೀನಾಕ್ಷಿ ಪಕ್ಕದ ಮೇಜಿಗೆ ಕಾಫಿಯ ಟ್ರೇ ಹಿಡಿದು ಬರುತ್ತಿದ್ದವನ ಕಡೆ ಬೆರಳು ತೋರಿಸಿದಳು.

"ಅದು ನೋಡು ಯಾರೂಂತ...." ಸೌಭಾಗ್ಯಳ ಕೈ ಒತ್ತಿದಳು.

"ಸುಧಾಕರ!" ಚಕಿತಳಾಗಿ ಪಿಸುಗಿದಳು ಸೌಭಾಗ್ಯ.

ಸುಧಾಕರನಿಗೆ ಪಿಯಾನೊ ಅಭ್ಯಾಸ ಸಾಧ್ಯವಾಗದಂತೆ ವಿಪರೀತ ಕೆಲಸ ಕೊಟ್ಟಿರುವ ಸ್ಥಳ ಇದೇ ಎಂದು ತಿಳಿಯಿತು.

ಟ್ರೇ ಹಿಡಿದಂತೆಯೇ ಅವಳ ಕಡೆಗೆ ನಗೆಮುಖದಲ್ಲಿ ಬಂದ. ಅವನಿಗೆ ಈಗ ಸಂಕೋಚವಿರಲಿಲ್ಲ. ಕಣ್ಣುಗಳು ಅವಳ ಮೇಲೆ ಹರಿದಾಡಿದವು.

ತಿಳಿ ಹಸಿರು ಸೀರೆ, ಕುಪ್ಪಸ. ಕುತ್ತಿಗೆಯಲ್ಲಿ ದಪ್ಪನೆಯ ಅಣುಕು ಮುತ್ತುಗಳ ಸರ. ರಿಬ್ಬನ್ ಬಿಗಿತದಲ್ಲಿ ನಿಂತ ಸೊಂಪು ಕೂದಲು. ಕನಸಿನ ಕಣ್ಣುಗಳು.

ಕಿಡಿ ಹಾರಿಸಿತು ಚೆಲುವಿನ ರಾಶಿ. ಟ್ರೇನಿಂದ ತುಳುಕಿದ ಕಾಫಿ ಅವಳ ಸೆರಗಿನ ಮೇಲೆ ಚೆಲ್ಲಿತು. ಅವನ ಕಣ್ಣುಗಳಲ್ಲಿ ಬೆಳಕು ಅರಿತು.

"ತಪ್ಪಾಯ್ತು, ನಿಮ್ಮ ಸೀರೆಗೆ...."

ಕ್ಷಮೆಯಾಚಿಸಿ ಒದ್ದೆ ಹತ್ತಿ ತಂದು ಲಘುವಾಗಿ ಸೆರಗು ಒರೆಸಿದ.

"ಪರವಾಗಿಲ್ಲ, ನೀವು ಇಲ್ಲಿ ಕೆಲಸ ಮಾಡೋದು ನನಗೆ ಗೊತ್ತಿರಲಿಲ್ಲ" ಮೋಹಕವಾಗಿ ನುಡಿದಳು.

"ಹೆಚ್ಚು ಹೊತ್ತು ಇಲ್ಲೇ ಕಳೆಯೋದು."

ಅವನ ಬಗೆಗೆ ತಾತ್ಸಾರ ಉಂಟಾಗಲಿಲ್ಲ. ಅಂಕುರಿಸಿದ ಅಭಿಮಾನ ಪರಿಚಯವನ್ನು ಮತ್ತಷ್ಟು ಗಾಢಗೊಳಿಸಿತು.

ಸ್ವರ್ಣಮ್ಮನಿಗೆ ಸೊಸೆಯ ಸಂಗೀತ ಶಾಲೆಯ ಬದುಕು ಒಂದು ಅಧ್ಯಯನದಂತಿತ್ತು. ಮುಗ್ಧ ಹುಡುಗಿಯ ಮುಖದಲ್ಲಿ ನಗೆಯ ನೆರಳು ಕಾಣುತ್ತಿದೆ. ದುಃಖ, ಅತೃಪ್ತಿ ಸುಪ್ತವಾಗಿದೆ. ಸಂತಸದ ಬದುಕಿನ ದಿಕ್ಕಿಗೆ ಸರಿದ ನಡಿಗೆಯಲ್ಲಿ ಈಗ ಜಿಗಿತ ಕಾಣುತ್ತಿದೆ. ಕೀಳು ಮನೆತನದ ಹುಡುಗಿ ಈಗ ನಗರದಲ್ಲಿ ತನ್ನ ಮಟ್ಟವನ್ನು ಕಂಡುಕೊಳ್ಳುವುದು ಸರಿ. ಮಟ್ಟಕ್ಕೆ ಏರಿದ ಮೇಲೆ ತನ್ನ ಪತಿಯಿಂದ ಸ್ವತಂತ್ರಳಾಗಲು ಒತ್ತಡ ಹಾಕುತ್ತಾಳೆ. ಅದರಿಂದ ಕಾರ್ತೀಕನಿಗೆ ನೆಮ್ಮದಿ!.....

ಶಾಲೆಯ ಹೊರಗೆ ಸಂಜೆ ಸೇರಿದಾಗ ಸುಧಾಕರ ತಡೆದಿಟ್ಟ ಮೆಚ್ಚಿಗೆ ಹೊರಗೆಡಹಿದ.

"ನೀವು ಇಷ್ಟು ಇಂಪಾಗಿ ಹಾಡ್ತೀರಿ ಅಂತ ಗೊತ್ತಿರಲಿಲ್ಲ."

"ಮೀನಾಕ್ಷಿ ಹಾಗೆ ನೀವು ಕಿಟಕಿ ಹತ್ರ ನಿಂತು ಕದ್ದು ಕೇಳಿರಬೇಕು" ಹಿಗ್ಗಿನಿಂದ ಪ್ರತಿ ನುಡಿದಳು ಸೌಭಾಗ್ಯ.

ಸುಧಾಕರ ತಲ್ಲೀನತೆಯಲ್ಲಿ ನಿಟ್ಟಿಸಿದ.

ಗಾಳಿಗೆ ಹಾರಾಡಿದ ತುಂಬುಗೂದಲು. ತೆಳು ನಡುವಿನಲ್ಲಿ ಪಟ್ಟೆ ಹಾಕಿದ

ಸ್ಕರ್ಟ್. ಎದೆಯ ಸಂಗೀತದ ಪುಸ್ತಕ ಒತ್ತಿದ ನಯವಾದ, ನಸುಗಪ್ಪು ಬೆರಳು.

"ಕಂಠ ಚೆನ್ನಾಗಿದೆ. ಹಣ ಸಂಪಾದನೆಗೆ ಹಾಡಬೇಕಾಗಿ ಬಂದರೆ ಹಾಡ್ತೀರಾ?"

ಸಾಕಷ್ಟು ಸಂಗ್ರಹವಾಗದ ಘನತೆಗೆ ಮೆಲ್ಲನೆ ತಟ್ಟಿದಂತಾಯ್ತು.

"ಹಾಡ್ತೀನಿ" ಒಣ ಉತ್ತರ ಬಂತು.

"ಮಧುರವಾದ ಧ್ವನಿಯ ಜೊತೆಗೆ ಬೇರೆ ಅರ್ಹತೆಗಳೂ ಇದ್ದರೆ ಬದುಕಿನಲ್ಲಿ ಎಷ್ಟು ಸುಖ!"

ಮಾತು ಅರ್ಥವಾಗದೆ ಮುಖದಲ್ಲಿ ನಲಿವು ಕುಸಿಯಿತು.

"ನೀವು ಹೇಳ್ತಾ ಇರೋದೇನು?"

ಅವನಲ್ಲಿ ತುಂಟ ನಗೆ ಕಾಣಿಸಿತು.

"ಬೇರೆ ಕಲೆಗಾರರ ಹಾಗೆ ನೀವು ಕಷ್ಟಪಡಬೇಕಾಗಿಲ್ಲ. ನಿಮ್ಮಲ್ಲಿ ಧ್ವನಿ, ಚೆಲುವು ಎರಡೂ ಸೇರಿವೆ. ನೀವು ಒಳ್ಳೆ ಸಂಗೀತಗಾರಳಾಗೋದಿಕ್ಕೆ, ಮದುವೆ ಆಗೋದಿಕ್ಕೆ ಕಷ್ಟವಾಗೋದಿಲ್ಲ."

ಅವಾಕ್ಕಾದಳು. ಮದುವೆ ಆಗಲು ಹೆಣ್ಣಿಗೆ ಏನೇನು ಅರ್ಹತೆಗಳು ಬೇಕು?

"ನನಗೆ ಮದುವೆ ಆಗಿದೆ...."

ಹೃದಯದಿಂದ ಪುಟಿದೆದ್ದ ಆ ಮಾತು ಹೊರಬರಲಿಲ್ಲ.

ವಿಶ್ವಾಸ ತನ್ನಲ್ಲಿ ದ್ವಿಗುಣಗೊಂಡಿತು. ಕಂಠ ಮೆಚ್ಚಿದ ಕಾರ್ತೀಕ ತನ್ನ ಚೆಲುವಿಗೂ ಮಾರುಹೋಗಿ ಮದುವೆಯಾಗಿರಬೇಕು! ಅವನಿಂದ ರಕ್ಷಣೆ, ಕನಿಕರ, ಸಹಾಯ ಎಲ್ಲವೂ ದೊರೆತರೂ ಪ್ರೇಮ ಕಿಂಚಿತ್ತೂ ಇಲ್ಲ. ತಾನು ಪ್ರೇಮ ವಂಚಿತೆ!

ದೂರದ ಕಟ್ಟಡಗಳ ಸಾಲು. ತಂತಿ ಬೇಲಿಯ ದೊಡ್ಡ ಆಟದ ಮೈದಾನ. ಸುತ್ತಲೂ ಹರಿದಾಡಿದ ವಾಹನಗಳು. ಎಲ್ಲದರ ಮೇಲೂ ಅವಳದು ಶೂನ್ಯ ನೋಟ. ತಾನು ಏಕಾಂಗಿ!

"ನಿಮ್ಮ ಮನಸ್ಸು ನೋಯಿಸಿದೆ, ಕ್ಷಮಿಸಿ. ನೀವು ಯಾರನ್ನೊ ಪ್ರೀತಿಸ್ತಾ ಇದೀರಿ ಅಂತ ಊಹಿಸಬಲ್ಲೆ."

ಸುಧಾಕರ ಮೌನಿಯನ್ನು ಕದಲಿಸುವಂತೆ ಧೈರ್ಯವಾಗಿ ಮಾತು ಎಳೆದ. ತಲೆ ಕ್ಷುದ್ರ ಪ್ರಾಣಿಯಂತೆ ಬುಸುಗುಟ್ಟಿ ತಲೆ ಅಲುಗಿಸಿದಳು.

"ಇಲ್ಲ, ಇಲ್ಲ...."

ಸೂರ್ಯ ಮುಳುಗಲು ತಾಸು ಮೊದಲಿನ ತಂಪು ಸಂಜೆ. ತಂಗಾಳಿ ಬೀಸಿತು, ಮೈದಾನದ ಬೇಲಿಯ ತಿರುವಿನಲ್ಲಿ ಜನಸಂಚಾರವಿರಲಿಲ್ಲ. ಸುಧಾಕರ ಅವಳ

ಭುಜವನ್ನು ತೋಳಿನಿಂದ ಬಳಸಿದ. ಆ ತೋಳಿನ ಕಂಪನ ಅವಳಿಗೆ ಅರಿವಾಯಿತು. ತೋಳು ಸರಿಸಲಿಲ್ಲ!

"ನಾನು ಈತನಕ ಯಾರನ್ನೂ ಪ್ರೀತಿಸಿಲ್ಲ. ಈಗ....ಪ್ರೀತಿ ಅಂದ್ರೆ ಏನೂಂತ.... ಸೌಭಾಗ್ಯ, ನನಗೆ ಅರ್ಥ ಆಗ್ತಾ ಇಲ್ಲ ನೀವು."

ಅವನಿಗೆ ತಾನೇಕೆ ಅರ್ಥವಾಗಬೇಕೆಂಬುದು ಅವಳಿಗೆ ತಿಳಿಯದು. ರಸ್ತೆಯ ಅಂಚಿಗೆ ಬಂದಿದ್ದರು. ಬೇಲಿಯ ಪೊದೆ ದಟ್ಟವಾಗಿದ್ದ ಭಾಗ ಅದು.

ಅವಳ ಸಮೃದ್ಧ ತಲೆಗೂದಲು ಸವರಿದ. ಕಲ್ಲಿನಂತೆ ನಿಂತಳು.

"ಸುಧಾಕರ.....!"

ಆ ಕರೆಯಲ್ಲಿ ಪ್ರತಿರೋಧ, ರೋಷ, ತಿರಸ್ಕಾರ ಇರಲಿಲ್ಲ. ತಾನು ಚಕಿತಳಾದೆನೆಂಬ ಮುಗ್ಧ ಉದ್ಗಾರ ಅದು.

"ನಿಮ್ಮನ್ನು ನೋಡಿದ ಮೊದಲನೆ ದಿನವೇ ಈ ನಿಮ್ಮ ಸೊಂಪಾದ ಕೂದಲು ನೇವರಿಸೊ ಆಸೆ ನನಗೆ. ನಿಮ್ಮನ್ನ ಪ್ರೀತಿಸೊ ಕಲ್ಪನೆಯೂ ಇರಲಿಲ್ಲ. ಆದರೆ ನಾನೇನು ಮಾಡ್ಲಿ?"

ಅವಳ ನರಗಳು ಬಿಗಿದವು. ಉದ್ರೇಕ, ರೋಮಾಂಚನ, ಭಯ ಎಲ್ಲದರ ಸಾಮೂಹಿಕ ದಾಳಿ.

ಉಚ್ಚರಿಸಲಾಗದ ಧೈರ್ಯದ ಪ್ರತಿಕ್ರಿಯೆ ತಲೆಯಲ್ಲಿ ಮಿಂಚಿತು!

ವಿವಾಹದ ಚೌಕಟ್ಟಿನಲ್ಲಿ ಬಂಧಿಸಿರುವ, ವಯಸ್ಸು ಮೀರಿದ ಕಾರ್ತೀಕನಿಗೆ ವಿಧೇಯತೆಯಿಂದ ಶಿಶುವಿನಂತೆ ಅಂಟಿಕೊಳ್ಳುವ ಬದಲು, ಕಾದಿರುವ ಈ ತರುಣ ಪ್ರೇಮಿಯ ಕರೆಗೆ ಸಮ್ಮತಿ ನೀಡುವುದರಲ್ಲಿ ತನ್ನ ಬದುಕಿನ ಹಿತ ಅಡಗಿದೆ!

೬

ಬಸ್ಸಿನ ಕಿಟಕಿ ಗಾಜಿಗೆ ಹಣೆ ಒತ್ತಿದಳು ಶರ್ಮಿಳಾ. ಬೆಂಗಳೂರು ಸಮೀಪಿಸಿದಂತೆ ಎದೆಬಡಿತ ಏರಿತು. ನಲವತ್ತು ದಿನಗಳ ಹಿಂದೆ ಈ ನಗರದಿಂದ ನೂರು ಆಸೆ ಹೊತ್ತು ತರಾತುರಿಯಲ್ಲಿ ಹೊರಟರು.....ಹೊರಟಂದಿನಿಂದ ಸಾಗಿದುದೇನು?

ಕಣ್ಣು ಮುಚ್ಚಿ ನಿಟ್ಟುಸಿರು ಹಾಕಿದಳು.

ಕಾರ್ತೀಕ ಬರಹದಲ್ಲಿ ತೊಡಗದೆ ಇದ್ದಲ್ಲಿ! ಬುಲ್ ಬುಲ್ ತರಂಗದಲ್ಲಿ ತಲ್ಲೀನನಾಗದೆ ಇದ್ದಲ್ಲಿ!....ತಾನು ಈ ಗತಿಗೆ ಬರುತ್ತಿರಲಿಲ್ಲ. ಇಲ್ಲಿಯೇ ಖ್ಯಾತ ಬರಹಗಾರನ ಹೆಂಡತಿಯಾಗಿ ಹಕ್ಕಿಂತೆ ಹಾರಾಡಬಹುದಿತ್ತು. ಅವನಂತೆ ತಾನೂ ಪಕ್ಷಿ ಪ್ರೇಮಿಯಾಗಿ ಪಂಜರಗಳಿಂದ ಹತ್ತಾರು ಪಕ್ಷಿಗಳನ್ನು ಗಗನಕ್ಕೆ ಹಾರಿಸಿ

ಸಂತಸಪಡಬಹುದಿತ್ತು.

ಛೇ, ಕಾರ್ತೀಕನ ದೋಷವೇನಿದೆ? ತಾನು ಬುದ್ಧಿಹೀನೆ, ಅವಿವೇಕಿ ಚಂಚಲ ಸ್ವಭಾವದ ಆತುರಗಾತಿ. ಕಾರ್ತೀಕನನ್ನು ಪ್ರಣಯ ಲೋಕಕ್ಕೆ ಕಾಲಿರಿಸುವಂತೆ ಮಾಡಿದವಳು ತಾನು. ಆದರೆ ವಶವಾದುದು ಪ್ರದೀಪನಿಗೆ, ಕಾರು ಓಟದ ಪ್ರವೀಣ ಉಡುಪು, ಮಾತುಗಳಿಂದ ಮೋಡಿ ಮಾಡಿ ತನ್ನ ಮನಸ್ಸನ್ನು ಮರ್ಕಟಗೊಳಿಸಿ ಅಂತಿಮವಾಗಿ ಗೆದ್ದಿದ್ದ.

ಪ್ರದೀಪ ತನ್ನ ಪಾಲಿಗೆ ಬರಲಿದ್ದ ನಾಗಮಂಗಲದ ದೊಡ್ಡ ಆಸ್ತಿಯ ಚಿತ್ರ ಕೊಟ್ಟು ಅವಳಿಗೊಂದು ಬಣ್ಣದ ಕನಸು ತೋರಿಸಿದ್ದ. ಅವನ ಸ್ವಭಾವ ನಿಜಸ್ಥಿತಿ ಅರಿಯದೆ ಅವನಿಗೆ ಸೋತಿದ್ದಳು. ಅವನನ್ನು ಕಳೆದುಕೊಳ್ಳುವೆನೆಂಬ ಭೀತಿ, ಆತುರದಲ್ಲಿ ತಾನೇ ಪ್ರೇರೇಪಿಸಿ ಅವನೊಂದಿಗೆ ಪಲಾಯನ ಮಾಡಿ ಕಾರ್ತೀಕನಿಗೆ ಮರಳುಗಾಡು ಕಾಣಿಸಿದ್ದಳು.

ಆತುರದ ತೀರ್ಮಾನದಿಂದ ಒಳಿತಾಗಲಿಲ್ಲ. ಕನಸಿನ ಗೋಪುರ ಕುಸಿದಿತ್ತು. ಆಸೆಯ ಬದುಕು ಮೃಗಜಲವಾಗಿತ್ತು. ಪ್ರದೀಪನೊಂದಿಗೆ  ಏಳು ದಿನಗಳ ಮಧುಚಂದ್ರ ಕಳೆದು ಅವನ ಸ್ವಂತ ಊರಿಗೆ ಕಾಲಿಟ್ಟಾಗ ಕಂಡುದು? ವೈಶಾಖದ ಬೆಂಕಿಗೂಡು ಅದು. ನಾಗಮಂಗಲದ ಜಮೀನು ಎಲ್ಲಿಂದೆಲ್ಲಿಗೆ ನೋಡಿದರೂ ಕುರುಚಲುಗಳ ಬಂಜರು ಹಾಸು. ಉಳುಮೆಗೆ ಬರುವ ಭೂಮಿ ಚೂರು ಇಲ್ಲ.

ಇಡೀ ಬದುಕಿನ ತಾಣ ಇದು! ಕಂಪಿಸಿದಳು ಕೋಮಲ ತನುವಿನ ಹೆಣ್ಣು.

ದೇಗುಲದಂತಹ ಹಳೆಯ ತೊಟ್ಟಿಗಳ ದೊಡ್ಡ ಮನೆ. ಮಾತಿಗೆ ನುಣುಚಿಕೊಳ್ಳುವ ಪತಿ. ಮನೆ ತುಂಬಿದ ಹೆಡ್ಡ ಗ್ರಾಮೀಣ ಬಂಧುಗಳು. ಚಾತುರ್ಯಗಳನ್ನೆಲ್ಲ ಬಳಸಿ ತನ್ನನ್ನು ಗೆದ್ದ ಪ್ರೇಮಿ ಊರಿಗೆ ಒಯ್ದ ಮೇಲೆ ಏಕಾಏಕಿ ಸರಳ ಬದುಕಿನ ಬಗೆಗೆ ಕೃತಕ ಮಾತುಗಳನ್ನಾಡುವ ಗ್ರಾಮೀಣ ಪತಿಯಾಗಿದ್ದ. ತನ್ನ ದೊಡ್ಡ ಮನೆತನದ ವಿಷಯದಲ್ಲಿ ಹತ್ತಾರು ಬಣ್ಣದ ಪದಗಳನ್ನು ಬಳಸುವುದರೊಂದಿಗೆ ಆಸೆಗಳಿಗೆ ತಣ್ಣೀರು ಹಾಕುವ ನಾಲ್ಕು ಮಾತುಗಳನ್ನು ನಯವಾಗಿ ಆಡುತ್ತಿದ್ದ. ಪ್ರದೀಪ ನಯವಂಚಕ! ಕಾರ್ತೀಕ ಹಾಗೆಂದೂ ತೋರಿಕೆಯ ಮಾತು ಆಡಿರಲಿಲ್ಲ. ಆ ಮಿತಭಾಷಿ ತನ್ನ ಘನತೆಗೆ ಕಿಂಚಿತ್ತೂ ಧಕ್ಕೆ ತಂದಿರಲಿಲ್ಲ.

ಊರಿನಲ್ಲಿ ಕ್ಷಣವೂ ನಿಲ್ಲದೆ ಸಿಟಿಗೆ ಹಿಂತಿರುಗುವೆನೆಂದು ಅವಳು ಹಠ ಹಿಡಿದಾಗ ಪ್ರದೀಪ ನಮ್ರವಾಗಿ ಉತ್ತರಿಸಿದ.

"ಇರೋದ್ರಲ್ಲಿ ಹೊಂದಿಕೋಬೇಕು, ಶರ್ಮಿಳಾ. ನಾಲ್ಕು ದಿನ ಹೋದರೆ ಎಲ್ಲಾ ಸರಿ ಹೋಗುತ್ತೆ. ನೀನು ಮನೆಗೆ ಹಿಂತಿರುಗಲೇಬೇಕು ಅಂದ್ರೆ ಹೋಗಬೋದು. ನಿನ್ನ ಹಿಂದೆ ಬರೋದಿಲ್ಲ ನಾನು. ನನ್ನ ಹಿಂದೆ ಬಂದೋಳು ನೀನು ಅನ್ನೋದು

ನೆನಪಿರಲಿ. ಮದುವೆ ಆದ ಹೆಣ್ಣು ಅನ್ನೋದನ್ನೂ ನೀನು ಮರೆತ ಹಾಗೆ ಕಾಣುತ್ತೆ."

ಕೋಪದಲ್ಲಿ ಕಂಪಿಸಿದಳು.

"ಬೆಳಗಾಂಗೆ ಹೋಗೋಣಾಂತ ಹೇಳಿದ್ರಿ. ಸುಳ್ಳು ಹೇಳಿ ಮೋಸ ಮಾಡಿದ್ರಿ. ಇದು ಇಂಥ ಬೆಂಗಾಡು ಅಂತ ತಿಳಿದಿರ್ಲಿಲ್ಲ. ಇಲ್ಲಿ ನನಗೆ ಬದುಕೇ ಇಲ್ಲ."

"ನೀನೂ ಸುಳ್ಳು ಹೇಳಿದೀಯ, ಶರ್ಮಿಳಾ. ನಿಮ್ಮಪ್ಪ ಕುಣಿಗಲ್‌ನಲ್ಲಿ ರೇಸ್ ಕುದುರೆ ಸಾಕ್ತಾ ಇದಾರೆ ಅಂತ ಹೇಳಿದ್ದಿ. ಧನಗೂರಿನಲ್ಲಿ ಕುರಿ ಇಟ್ಟಿರೋದೊಂದೇ ನಿಜ...."

ಅವಳ ಆರ್ಭಟ ನಿಲ್ಲುತ್ತಲೇ ಮತ್ತೆ ಒರಟಾಗಿ ನುಡಿದ.

"ಹೊರಡೋದು, ಉಳಿಯೋದು ನಿನಗೇ ಬಿಟ್ಟಿದೀನಿ."

ಶರ್ಮಿಳಾ ಹೊರಟೇಬಿಟ್ಟಳು.

ಬೆಂಗಳೂರು ತಲುಪಿದೊಡನೆ ಮೊದಲು ಕಾರ್ತೀಕನನ್ನು ಕಾಣುವುದು ಅವಳ ನಿರ್ಧಾರವಾಗಿತ್ತು. ಅವಳು ಎಣಿಸಿದ ತಾಣದಲ್ಲಿ ಕಾರ್ತೀಕ ಕಾಣದಿದ್ದಾಗ ನಿರಾಶೆಯಾಯಿತು. ಕಾರ್ತೀಕನ ಮನೆಗೆ ಟ್ಯಾಕ್ಸಿಯಲ್ಲಿ ಸರಿದಾಗ ಸ್ವರ್ಣಮ್ಮನನ್ನು ಎದುರಿಸುವುದು ಹೇಗೆಂಬ ಭಯ ಕಂಡಿತು.

ಪರಿಚಿತವಾದ ಕಬ್ಬಿಣದ ಗೇಟಿನ ಮುಂದೆ ಟ್ಯಾಕ್ಸಿ ನಿಂತಾಗ ಮನೆಯಿಂದ ಸಂಗೀತ ಸ್ವರ ಕೇಳಿಬಂತು. ನೆಮ್ಮದಿ ತಪ್ಪಿದ ಆ ಸ್ಥಿತಿಯಲ್ಲೂ ಶರ್ಮಿಳಾಗೆ ಅನಿಸಿತು. ನಾಟಕದ ಅಭಿನೇತ್ರಿಗೆ ಸಂಗೀತದ ಹುಚ್ಚು ಈ ಜನ್ಮದಲ್ಲಿ ತಪ್ಪುವ ಹಾಗಿಲ್ಲ!

ಕಂಪನದ ಬೆರಳು ಕರೆ ಗಂಟೆ ಒತ್ತಿತು. ಸಂಗೀತ ನಿಂತಿತು. ಬಾಗಿಲು ತೆರೆದಾಗ ಕಂಡವಳು ನೀಲಿ ಸ್ವೆಟರ್, ನೀಲಿ ಸ್ಕರ್ಟ್ ಧರಿಸಿದ ಹೊರಗೂದಲಿನ ಹುಡುಗಿ.

"ಯಾರು ಬಂದಿರೋದು?....ಒಳಗೆ ಹೋಗು ನೀನು, ಸೌಭಾಗ್ಯ...."

ಅಣತಿ ಕೊಡುತ್ತ ಸ್ವರ್ಣಮ್ಮ ಮೆಟ್ಟಿಲು ಇಳಿದು ಬಂದಳು. ಬೆಳಗಿನ ಒಂಬತ್ತು ಗಂಟೆ ವೇಳೆಯಲ್ಲಿ ಮನೆಗೆ ಭೇಟಿ ಕೊಡುವವರು ವಿರಳ. ಸೌಭಾಗ್ಯ ಹೊರಗಡೆ ನಿಂತಿದ್ದ ಎತ್ತರದ ನಿಲುವಿನ, ಚೆಲುವಿನ ವ್ಯಕ್ತಿಯ ಕಡೆ ನೋಡಿ ಮಾತಿಲ್ಲದ ಒಳಕ್ಕೆ ನಡೆದಳು. ಪರಿಚಿತೆಯನ್ನು ಅನಿರೀಕ್ಷಿತವಾಗಿ ನೋಡಿದ ಸ್ವರ್ಣಮ್ಮ ಕಣ್ಣು ಹಿಗ್ಗಿಸಿ ಮುಖ ಓರೆಮಾಡಿ ನಿಂತಳು.

'ಪ್ರಣಯ ದೋಣಿ'ಯ ಕಥಾ ನಾಯಕಿ! ಕಾರ್ತೀಕನನ್ನು 'ಮಣ್ಣಿನ ದೋಣಿ'ಯಲ್ಲಿಳಿಸಿ ದಂಡೆಗೆ ಹಾರಿದವಳು.

"ಒಳಗೆ ಬಾ, ಶರ್ಮಿಳಾ. ನೀನು ಬರ್ತೀಯ ಅಂತ ಮಾತ್ರ ಭಾವಿಸಿರಲಿಲ್ಲ."

ತಾಳ್ಮೆ ಕಳೆದುಕೊಳ್ಳದೆ ಹಾಗೆಂದ ಸ್ವರ್ಣಮ್ಮ ಹಜಾರಕ್ಕೆ ಬಂದಳು. ಶರ್ಮಿಳಾ ಸೋಫಾ ಮೇಲೆ ಕುಳಿತು ಕರವಸ್ತ್ರದಿಂದ ಮುಖ ಒತ್ತಿಕೊಂಡಳು.

ಕಿಚನ್‌ನಲ್ಲಿ ಪಾತ್ರೆಯ ಸದ್ದು ಕೇಳಿ ಕಣ್ಣು ಕಿರಿದು ಮಾಡಿದಳು ಸ್ವರ್ಣಮ್ಮ.

"ಸೌಭಾಗ್ಯ, ಅಂಡಗಿಗೆ ಹೋಗಿ ಸೋಪ್ ಪೌಡರ್ ತೊಗೊಂಡು ಬಾ."

ಅತ್ತೆಗೆ ತಾನು ಅಲ್ಲಿರುವುದು ಇಷ್ಟ ಇಲ್ಲವೆಂದು ಅರಿವಾಯಿತು. ಮನೆಯಲ್ಲಿ ಸೋಪ್ ಪೌಡರ್ ಇದ್ದರೂ ಪ್ರತಿ ನುಡಿಯದೆ ಹೊರಬಿದ್ದಳು.

ಸ್ವರ್ಣಮ್ಮ ಹಾಗೆಯೇ ನಿಂತು ನೆಮ್ಮದಿಗೆಟ್ಟು ತಳಮಳಿಸುತ್ತಿದ್ದ ಶರ್ಮಿಳಾ ಮುಖವನ್ನು ನಿಟ್ಟಿಸಿದಳು. ತನ್ನ ಪ್ರೀತಿಯ ಮಗನನ್ನು ಪ್ರಣಯದ ಕೂಪಕ್ಕೆ ತಳ್ಳಿ ಗಾಯಗೊಳಿಸಿ ಹೋದವಳನ್ನು ಸುಲಭವಾಗಿ ಮರೆಯುವುದೆಂತು?

"ಚೆನ್ನಾಗಿದ್ದೀರಾ?"

ಮಾತು ಹೇಗೆ ಪ್ರಾರಂಭಿಸಬೇಕೆಂದು ತೊಳಲಾಡಿದವಳು ತಲೆತಗ್ಗಿಸಿ ಶ್ರಮದಿಂದ ಪ್ರಶ್ನಿಸಿದಳು.

"ಚೆನ್ನಾಗಿದೀನಿ. ನನ್ನ ಆರೋಗ್ಯ ವಿಚಾರಿಸಲಿಕ್ಕೆ ನೀನು ಬಂದೋಳಲ್ಲಾಂತ ಗೊತ್ತಿದೆ."

ಗಡಸು ನುಡಿಯಿಂದ ಬೆಚ್ಚಿದ ಶರ್ಮಿಳಾ ತಲೆ ಎತ್ತಿದಳು.

"ನಿಮಗೆ ವಿಪರೀತ ಕೋಪ ಬಂದಿದೆ. ನಾನು ಕಾರ್ತೀಕನ ವಿಷಯ ಮಾತಾಡೋದಿದಕ್ಕೆ ಬಂದಿದ್ದು."

"ಕಾರ್ತೀಕ ವಿಷಯ ಮಾತಾಡೋದು ಏನಿದೆ?.....ನಿನ್ನ ಗಂಡ ಬಂದಿದಾನೇನು ಜೊತೆಯಲ್ಲಿ?"

ಬಾಗಿಲಿನತ್ತ ನೋಡಿದಳು.

"ಇಲ್ಲ........."

ಅನುಭವಿ ಸೂಕ್ಷ್ಮಮತಿಗೆ ಅವಳು ಗಂಡನಿಂದ ಸರಿದು ಬಂದಿದ್ದಾಳೆಂಬುದು ಅರ್ಥವಾಗಿತ್ತು.

"ನೀನಾಗಲಿ, ನಿನ್ನ ಗಂಡನಾಗಲಿ ನನ್ನ ಮಗನನ್ನ ಭೇಟಿಯಾಗುವಂಥ ಅಗತ್ಯವಿಲ್ಲ."

ಮೇಜು ಒರಗಿ ನಿಂತಿದ್ದ. ತನ್ನ ಅತ್ತೆ ಆಗಬೇಕಿದ್ದವಳ ಕಡೆಗೆ ಬಟ್ಟಲು ಗಣ್ಣಿ ತಿರುಗಿಸಿದಳು ಶರ್ಮಿಳಾ.

"ಇಷ್ಟು ಕಟುವಾಗಿ ನೀವು ಯಾವತ್ತೂ ಮಾತಾಡಿರಲಿಲ್ಲ, ದಿಕ್ಕೆಟ್ಟ ನನ್ನ ಮೇಲೆ ನಿರ್ದಯರಾಗ್ತೀರಾ?"

ಧ್ವನಿ ಇಳಿಸಿದಳು ಸ್ವರ್ಣಮ್ಮ.

"ನೀನು ದಿಕ್ಕೆಡೋದಿಕ್ಕೆ ನಾನು ಕಾರಣ ಅಲ್ಲ."

ಕರವಸ್ತ್ರ ಮತ್ತೆ ಹಣೆ ಒತ್ತಿತ್ತು.

"ಕಾರ್ತೀಕ ಹೇಗಿದಾರೆ? ನನ್ನಿಂದ ನಿರಾಶೆ ಆಯ್ತು ಅವರಿಗೆ."

ಸ್ವರ್ಣಮ್ಮ ಒಣ ನಗೆ ಬೀರಿ ಅವಳ ಎದುರಿನ ಕುರ್ಚಿಯಲ್ಲಿ ಕುಳಿತಳು.

"ಎರಡು ದಿನ ಬೇಸರವಾಗಿತ್ತು. ಆಮೇಲೆ ಸರಿಹೋಯ್ತು. ನಿನ್ನ ಮದುವೆ ಆಗಿ ಬದುಕು ಹಾಳುಮಾಡಿಕೊಳ್ಳೋದಿಕ್ಕೆ ಮೊದಲೇ ಆ ಮದುವೆ ತಪ್ಪಿದ್ದು ಅವನ ಅದೃಷ್ಟ.... ಶರ್ಮಿಳಾ, ಈ ನೀನು ಇಲ್ಲಿಗೆ ಬಂದಿದ್ದೇ ಉದ್ಧಟತನ!"

"ದೊಡ್ಡ ಮನಸ್ಸು ಮಾಡಿ ಆಗಿದ್ದು ಮರೆತು ಬಿಡಿ."

"ಅದು ಮರೆಯೋದಲ್ಲ. ನೀನು ಒಬ್ಬನ್ನ ಮನಸಾರೆ ಮೆಚ್ಚಿ ಮದುವೆ ಆಗಿದೀಯ. ಅವನ್ನ ಮರೆಯೋದು ಹೇಗೆ?"

ಸ್ವರ್ಣಮ್ಮನ ಮನಸ್ಸು ಮುರಿದಿದೆ ಎಂಬುದು ಖಚಿತವಾಗಿತ್ತು. ಧ್ವನಿ ಮತ್ತಷ್ಟು ಇಳಿಸಿದಳು.

"ಕಾರ್ತೀಕನಿಗೆ ಕಾಗದ ಬರೆದಿದ್ದೆ. ತಪ್ಪು ಒಪ್ಪಿಕೊಂಡು ಕ್ಷಮೆ ಕೇಳಿದ್ದೆ. ಉತ್ತರ ಬರಲಿಲ್ಲ."

"ಉತ್ತರ ಬರೆಯೋಷ್ಟು ವಿರಾಮ ಇಲ್ಲ ಅವನಿಗೆ. ಬರೆಯೋದು ತಾನೆ ಏನಿದೆ? ಅವನ ಪಾಲಿಗೆ ನಿನ್ನ ಕಥೆ ಮುಗಿದಿದೆ."

"ಹೃದಯ ಇಷ್ಟು ಕಠಿಣ ಮಾಡ್ಕೊಬೇಡಿ" ಬೇಡಿದಳು.

ತನ್ನ ಬಗ್ಗೆ ಮನೆ ಈಗ ನಿಷ್ಠುರವಾಗಿದೆ ಎನಿಸಿತು ಅವಳಿಗೆ. ಸುತ್ತಲೂ ಕಣ್ಣು ಹೊರಳಿಸಿದಳು. ಹಿಂದೆ ಅದೇ ಹಜಾರದಲ್ಲಿ ಅವಳು ಕಾರ್ತೀಕನೊಂದಿಗೆ ಕುಳಿತಾಗ ಸ್ವರ್ಣಮ್ಮನಿಗೆ ಎಂತಹ ಸುಂದರ ಕಲ್ಪನೆ! ತಾನು ಕಾರ್ತೀಕನ ಹೆಂಡತಿಯಾದರೆ ಸಾಕು ಎಂಬ ಹಾರ್ದಿಕ ಬಯಕೆ! ಆ ಕಲ್ಪನೆ, ಬಯಕೆಗಳನ್ನು ಮೂಡಿಸಿದವಳು ತಾನು. ಅವನ್ನು ಚೂರಾಗಿಸಿದವಳೂ ತಾನು!

ಸ್ವರ್ಣಮ್ಮನಿಗೂ ತಲೆಯಲ್ಲಿ ಸುರುಳಿ ಎದ್ದಿತ್ತು. ಎದುರು ಕುಳಿತವಳು ರೂಪ ಸರ್ಪಿಣಿ! ಮಗನ ವೈವಾಹಿಕ ಬದುಕಿಗೆ ಕೊಡಲಿ ಹಾಕಿದ ಧೂರ್ತೆ! ಅವಳಿಂದಲೇ ಹತಾಶನಾದ ಮಗನಿಗೆ ಅಸಮಂಜಸ ಬಾಲೆಯೊಬ್ಬಳು ಮಡದಿಯಾದುದು.

ಶರ್ಮಿಳಾ ನೆಲ ನೋಡುತ್ತಾ ಯಾಚಿಸಿದಳು.

"ಅವಕಾಶ ಕೊಟ್ಟರೆ ಕಾರ್ತೀಕನಿಗೆ ವಿವರವಾಗಿ ಹೇಳ್ತೀನಿ."

ಸಿಡಿದಳು ಸ್ವರ್ಣಮ್ಮ.

"ವಿವರವಾಗಿ ಏನು ಹೇಳ್ತೀಯ? ಮದುವೆ ಅಂದ್ರೆ ವ್ಯಾಪಾರದ ಹಾಗೆ ನಿನಗೆ. ಹೆಚ್ಚಿನ ಲಾಭಕ್ಕೆ ಆಸೆ ಪಟ್ಟು ನನ್ನ ಮಗನ್ನ ಸರಿಸಿ ಯಾವನ ಜೊತೆಯಲ್ಲೊ ಓಡಿ ಹೋದೆ. ಅವನು ಸರಿ ಇಲ್ಲಾಂತ ಹಿಂದಕ್ಕೆ ಬಂದಿದೀಯ. ಇದು ನಿಜ ತಾನೆ?....."

ಮುಂದಿನ ಮಾತು ತಡೆದಳು. ಕುತ್ತಿಗೆಯಲ್ಲಿ ಉರಿ ಕಂಡಿತು.

ಶರ್ಮಿಳಾ ಎದ್ದು ನಿಂತಳು.

"ನನ್ನ ಕ್ಷಮಿಸ್ತೀರಿ ಅಂತ ಬಂದೆ. ನನ್ನ ಗಂಡನಿಂದ ವಿಚ್ಛೇದನಪಡೀತೀನಿ. ನನ್ನಿಂದ ಕಾರ್ತೀಕನಿಗೆ ಸಂತೋಷ ಆಗೋದಾದ್ರೆ....."

"ಅವನಿಗೆ ಸಂತೋಷವಾಗಬೇಕಾದ್ರೆ ನೀನು ಅವನಿಂದ ದೂರ ಇದ್ದು ಬಿಡು, ಅದೇ ನಿನ್ನಿಂದ ಆಗಬಹುದಾದ ಮಹದುಪಕಾರ...ಶರ್ಮಿಳಾ ಮತ್ತೆ ಹೀಗೆ ಬಂದು ಕಾರ್ತೀಕನ ಮನಸ್ಸು ಕೆಡಿಸೊ ಪ್ರಯತ್ನ ಮಾಡ್ಬೇಡ."

"ಬರ್ತೀನಿ, ನಮಸ್ಕಾರ."

ಕೈ ಜೋಡಿಸಿದಳು. ಸ್ವರ್ಣಮ್ಮ ಎದ್ದು ಪ್ರತಿ ವಂದಿಸಿದಳು. ಹೆಜ್ಜೆ ಸರಿಸಿದ ಶರ್ಮಿಳಾ ಮತ್ತೆ ನಿಂತಳು.

"ಹಾಡು ಹೇಳ್ತಾ ಇದ್ದ ಆ ಹುಡುಗಿ ಯಾರು?"

ಚಂಚಲೆಯ ಪ್ರಶ್ನೆಯಿಂದ ಸ್ವರ್ಣಮ್ಮನ ಮೈ ಬಿಸಿಯಾಯಿತು. ಬಾಳುಗೆಟ್ಟ ಶರ್ಮಿಳಾಗೆ ಸಂಶಯ ದೃಷ್ಟಿ!

"ಸ್ನೇಹಿತರ ಮಗಳು" ನಿರಾತಂಕವಾಗಿ ಹೇಳಿದಳು.

ಟ್ಯಾಕ್ಸಿ ಹೊರಡುತ್ತಲೇ ಸ್ವರ್ಣಮ್ಮ ಗೊಣಗಿದಳು.

"ಅಪ್ಪನ ಕುರಿಗಳ ಸಂಪತ್ತಿಗೇ ಹೀಗೆ ಇರೋಳು, ಆನೆ ಸಾಕಿದವನ ಮಗಳಾಗಿದ್ರೆ ಗತಿ!"

* * *

ಕಾರ್ತೀಕ ನಾಲ್ಕು ದಿನಗಳ ಬಿಡುವಿನ ಮೇಲೆ ಮದ್ರಾಸಿನಿಂದ ಹಿಂತಿರುಗಿದ್ದ. ಸಂಜೆ ಆದರೂ ಸೆಕೆ ಉಳಿದಿತ್ತು. ತೆರೆದ ಕಿಟಕಿಯ ಮುಂದೆ ನಿಂತು ಎರಡು ತೋಳು ಚಾಚಿದ. ಕೆಳಗಡೆ ನಸುಗತ್ತಲೆ ಹರಡಿದ ರಸ್ತೆ. ಆಟದ ವಸ್ತುಗಳಂತೆ ಸರಿದಾಡಿದ ವಾಹನಗಳು.

"ಎಲ್ಲಿಗೆ ಹೋಗೋಣ?" ಹಿಂದಕ್ಕೆ ತಿರುಗಿ ಕೇಳಿದ.

ಮೌನವಾಗಿ ನಿಂತಿದ್ದ ಸೌಭಾಗ್ಯಳಿಗೆ ಮೈದಡವಿಕೊಳ್ಳುವಷ್ಟು ವಿಸ್ಮಯ ಕಾರ್ತೀಕನಿಂದ ಅಂತ ಪ್ರಶ್ನೆ ಪ್ರಪ್ರಥಮ.

"ಕ್ಲಬ್ ಡ್ಯಾನ್ಸ್ ನೋಡೋಣ ಬಾ ಅಂತ ನನ್ನ ಸ್ನೇಹಿತೆ ಕರೆದಿದ್ಲು" ಹಿಂಜರಿಯುತ್ತಾ ಹೇಳಿದಳು.

"ಯಾರು ನಿನ್ನ ಸ್ನೇಹಿತೆ?" ಆಸಕ್ತಿಯಿಂದ ಕೇಳಿದ.

"ಮೀನಾಕ್ಷಿ ಅಂತ. ನಮ್ಮ ಸ್ಕೂಲ್‌ನಲ್ಲಿ ಪಾಪ್ ಸಂಗೀತ ಕಲೀತಾ ಇದಾಳೆ. ಅವಳಿಗೆ ಕ್ಲಬ್‌ಗೆ ಬಂದುಬಿಡು ಅಂತ ಪೋನ್ ಮಾಡಿ ಬರ್ತೀನಿ."

ಕಾರ್ತೀಕ ನಡುವಿಗೆ ಕೈಯಿಟ್ಟು ಕಣ್ಣೇರಿಸಿದ.

"ನಿನಗೆ ಫೋನ್ ಮಾಡೋದೂ ಗೊತ್ತಾಗಿದೆ."

"ಅದು ಮೀನಾಕ್ಷಿಯಿಂದ ಕಲಿತೆ" ಮುಖ ಕೆಂಪೇರಿತು.

ಸೌಭಾಗ್ಯ ಎದುರು ಮನೆಯಿಂದ ಫೋನ್ ಮಾಡಿ ಬಂದು ಸಿದ್ಧಳಾಗುವ ಹೊತ್ತಿಗೆ ಆಟೋರಿಕ್ಷಾ ಬಂದಿತ್ತು. ಕಾರ್ತೀಕನಿಗೆ ಅವಳೊಂದಿಗೆ ಹೊರ ಹೊರಡುವ ಹೊಸ ಅನುಭವ.

"ನಿನಗೆ ಕ್ಲಬ್ ನೃತ್ಯ ಹಿಡಿಸುತ್ತಾ. ಸೌಭಾಗ್ಯ?"

ಶಿಶು ದೃಷ್ಟಿಗೆ ತನ್ನ ನೋಟ ಕೂಡಿಸಿ ಕೇಳಿದ.

"ನಿಮ್ಮ ಜೊತೇಲಿದ್ರೆ ಎಲ್ಲಾ ಚೆಂದವೆ."

ಸೌಭಾಗ್ಯ ಉಸಿರು ಬಿಗಿ ಹಿಡಿದಳು. ಅಂತಹ ನೃತ್ಯಕ್ಕೆ ಅವಳು ಎರಡು ಸಾರಿ ಭೇಟಿ ನೀಡಿರುವೆಂದು ಅವನಿಗೆ ಹೇಳುವಂತಿಲ್ಲ.

ಆಟೋದಲ್ಲಿ ಸರಿದಾಗ ಎತ್ತರದ ಕಟ್ಟಡಗಳು, ವಾಹನಗಳ ಎಡಬಲ ಚಲನೆ. ದೊಡ್ಡ ರಸ್ತೆಗಳು ಎಲ್ಲದರ ಮೇಲೆ ಗಾಢ ಆಸಕ್ತ ದೃಷ್ಟಿ. ದಿನವೂ ಕಾಣುತ್ತಿದ್ದ ಹಳೆಯ ದೃಶ್ಯಗಳಿಗೆ ಹಿಗ್ಗು ಹೃದಯ ವಿನೂತನ ರಂಗು ಸವರಿತ್ತು. ತಾನು ಕಾರ್ತೀಕನ ಪಕ್ಕದಲ್ಲಿ ಕುಳಿತಿರುವೆ!

ಬಣ್ಣದ ದೀಪಗಳಿಂದ ಕಂಗೊಳಿಸುತ್ತಿದ್ದ ವರ್ತುಳಾಕಾರದ ಭವನ ಸೇರಿದರು. ಮುಂಭಾಗದಲ್ಲಿ ಮಾರಾಟದ ಅಂಗಡಿಗಳು, ಪ್ರವೇಶದ ಎರಡು ಪಕ್ಕಗಳಲ್ಲಿ ಕೃತಕ ಗಿಡಗಳ ದೊಡ್ಡ ಕುಂಡಗಳು.

ಮೀನಾಕ್ಷಿಯನ್ನು ಹುಡುಕುವುದರಲ್ಲಿ ಸಂಗೀತ ವಾದ್ಯಗಳು ಪ್ರಾರಂಭವಾದವು. ವಿನೋದದ ಕೇಕೆ ಕೇಳಿಸಿತು. ಹೊಸ ಭಂಗಿಯ ಸಾಮೂಹಿಕ ನೃತ್ಯ ಗರಿಗಳ ಕಿರೀಟದ ರಾಜ ಠೀವಿಯಿಂದ ನಡೆದು ಬಂದ. ಅವನ ಹಿಂದೆ ರಾಣಿ ನಾನಾ ವೇಷಗಳ ಪರಿವಾರ. ಅರ್ಥವಾಗದ ಕುಣಿತ, ಪ್ರೇಕ್ಷಕರ ಗಟ್ಟಿ ಕರತಾಡನ.

ಸೌಭಾಗ್ಯ ಪತಿಯ ಕಡೆ ನೋಡಿದಳು. ಅವನೂ ಪ್ರದರ್ಶನದತ್ತ ಗಮನಿಸದೆ ಅವಳ ಮುಖ ನೋಡುತ್ತಿದ್ದ. ಪ್ರೀತಿ ಚಿಮ್ಮುವ ನೋಟ! ಅವಳಿಗೆ ಕಸಿವಿಸಿ,

ರೋಮಾಂಚನ. ಮತ್ತೆ ಉಮ್ಮಳಿಸುವ ಸಂತೋಷ.

ಕಾರ್ಯಕ್ರಮ ಬದಲಿಸಿತು. ಜನಗುಂಪು ಜೋಡಿ ನೃತ್ಯಕ್ಕಾಗಿ ಹಜಾರಕ್ಕೆ ಸರಿಯುತ್ತಿತ್ತು.

"ನಾವೂ ಡ್ಯಾನ್ಸ್ ಕಲಿತಿದ್ರೆ ಚೆನ್ನಾಗಿತ್ತು, ಸೌಭಾಗ್ಯ."

ನನಗೆ ಮುಖದಲ್ಲಿ ಅವಳ ತೋಳು ಹಿಡಿದು ಮುಂದಕ್ಕೆ ನಡೆದಾಗ ಅವಳಿಗೆ ನಡುಕ ಬಂತು.

ಡ್ಯಾನ್ಸ್ ಅಂದ್ರೆ ನಿಮ್ಮ ತಾಯಿಗೆ ಕೋಪ."

ಮಾತು ಅವರಿಗೆ ಸರಿ ಎನ್ನಿಸಿತು. ಅವನಿಗೂ ಸಾಮೂಹಿಕ ಜೋಡಿ ನೃತ್ಯ ಹಿಡಿಸದು. ಸೌಭಾಗ್ಯಳತ್ತ ಕೆಲವು ಕುತೂಹಲ ಕಣ್ಣುಗಳು ತಿರುಗಿವೆ ಎಂಬುದು ಅವನ ಗಮನಕ್ಕೆ ಬಂತು.

ಹಾಂ, ತಾವಿಬ್ಬರು ಗಂಡ ಹೆಂಡತಿಯಂತೆ ಕಾಣುತ್ತಿಲ್ಲ! ಹಜಾರದ ಅಂಚಿನಲ್ಲಿ ನಿಂತ ತಾನು, ಸೌಭಾಗ್ಯ ಇಚ್ಚೋಡು.

ಕಾರ್ತೀಕ ಕಂಬದ ಮರೆಗೆ ಅವಳೊಂದಿಗೆ ನಿಂತ. ಅವಳ ಸೌಮ್ಯ ಮುಖ, ತಿಳಿ  ಹಳದಿ ಸೀರೆ ನೋಡುತ್ತಾ ಕಿವಿಯಲ್ಲಿ ಮೆಲ್ಲನೆ ಹೇಳಿದ.

"ಸೌಭಾಗ್ಯ, ನೀನು ಎಷ್ಟು ಚೆನ್ನಾಗಿದೀಯ! ಇದೇ ಮೊದಲನೆ ಸಾರಿ ನೋಡಿದವಳ ಹಾಗೆ ಕಾಣ್ತೀಯ...."

ಅವಳಿಗೆ ಮೈದಡವಿಕೊಳ್ಳುವಷ್ಟು ಅಚ್ಚರಿ. ಅದರೊಂದಿಗೆ ಬೆರೆತ ಶಂಕೆ. ಇದು ಲೇಖಕನ ಸಮಯಸ್ಫೂರ್ತಿಯ ಪ್ರಶಂಸೆ?

"ಮಿಸ್ ಬರ್ನಾರ್ಡ್...."

ಕರೆಯಿಂದ ಇಬ್ಬರೂ ಬೆಚ್ಚಿ ನೋಡಿದರು. ಗುಂಪಿನಿಂದ ಹೊರಬಂದಿದ್ದಳು ಮೀನಾಕ್ಷಿ. ಹತ್ತಿರಕ್ಕೆ ಬಂದು ಸೌಭಾಗ್ಯಳ ಕಡೆ ಸಂಶಯದಿಂದ ನೋಡಿದ ಕಾರ್ತೀಕನಿಗೆ ಕೈ ಚಾಚಿದಳು.

"ಮಿಸ್ಟರ್ ಕಾರ್ತೀಕ ಅಲ್ಲವೆ?"

ಅವಳಿಗೆ ಹಸ್ತಗೂಡಿಸಿದ ಕಾರ್ತೀಕ "ಹೌದು" ಎಂದ.

"ದೊಡ್ಡ ಲೇಖಕರ ಹೆಸರು ಕೇಳಿದ್ದೆ. ಭೇಟಿ ಮಾಡಿ ಸಂತೋಷ ಆಯ್ತು."

"ನನ್ನ ಸ್ನೇಹಿತ ಅಂದೆನಲ್ಲಾ.... ಇವರೇ ಮೀನಾಕ್ಷಿ" ಸೌಭಾಗ್ಯ ಪರಿಚಯ ಮಾಡಿಕೊಟ್ಟಳು.

"ಸಂತೋಷ.... ನಿಮ್ಮ ಹೆಸರು ಹೇಳಿದ್ಲು ಸೌಭಾಗ್ಯ."

ಮೀನಾಕ್ಷಿ ತನ್ನ ವಿವರಗಳನ್ನು ನಾಲ್ಕು ಪಂಕ್ತಿಗಳಲ್ಲಿ ಸಂಕ್ಷಿಪ್ತವಾಗಿ ನೀಡಿ

ಸೌಭಾಗ್ಯಗಳನ್ನು ಪಕ್ಕಕ್ಕೆ ಕರೆದೊಯ್ದು ಮೆಲ್ಲನೆ ಹೇಳಿದಳು.

"ನಿಮ್ಮ ಪೋಷಕನ ವಿಷಯದಲ್ಲಿ ಒಂದು ಸ್ವಾರಸ್ಯವಾದ ಸುದ್ದಿ ಹೇಳೋದಿದೆ."

"ಅದೇನು ಹೇಳಿ"

ಕೃತಕ ನಗೆ ತೋರಿದಳು. ಭೀತಿ ಮೈ ಅಲುಗಿಸಿತು. ತಾನು ಕಾರ್ತೀಕನ ಹೆಂಡತಿ ಎಂಬುದು ತಿಳಿದು ಹೋಯಿತೆ?

"ಬೇಗ ಹೇಳಿ, ಮೀನಾಕ್ಷಿ" ಮೃದುವಾಗಿ ಒತ್ತಾಯ ಹಾಕಿದಳು.

ಮೀನಾಕ್ಷಿಯನ್ನು ಯಾರೊ ಕರೆದರು.

ಕಾರ್ತೀಕ ಹಜಾರದ ಗುಮ್ಮಟಾಕಾರದ ಚಾವಣಿಯಿಂದ ಕಣ್ಣಿಳಿಸಿದ. ಸಂಗೀತ ಸ್ವರ, ಬಣ್ಣದ ಉಡುಪುಗಳ ತಂಡ, ಹಜಾರಕ್ಕೆ ಸಿಂಪರಿಸಿದ ಸುಗಂಧ ಅವನನ್ನು ಜಗ್ಗುತ್ತಿದ್ದವು. ವೈವಾಹಿಕ ಬದುಕಿನ ಸಂತೋಷವನ್ನು ಮರೆತವನಿಗೆ, ಹೊಸದಾಗಿ ಮಡದಿಯೊಂದಿಗೆ ಪ್ರಣಯ ಪ್ರಾರಂಭಿಸುವಂತೆ ಪ್ರಚೋದಿಸಿವು.

ಟ್ಯಾಕ್ಸಿ ಮನೆ ಸೇರಿದಾಗ ಹನ್ನೊಂದು ಗಂಟೆ ಆಗಿತ್ತು. ಸೌಭಾಗ್ಯಳಿಗೆ ಅರ್ಥವಾಗದ ಪರಿಸ್ಥಿತಿ. ಕಾರ್ತೀಕ ಇಂದು ತನ್ನನ್ನು ಏಕಾಏಕಿ ನೃತ್ಯಕ್ಕೆ ಒಯ್ದು, ತನ್ನ ಚೆಂದದ ಬಗೆಗೆ ಹಾಗೆ ಹೇಳಿದುದು ಅದೃಷ್ಟದ ಘಳಿಗೆ. ಅದರ ಹಿನ್ನೆಲೆ ಏನಿದೆ?

ಸ್ವರ್ಣಮ್ಮನಿಗೆ ನಿದ್ರೆ ಚೆನ್ನಾಗಿ ಹತ್ತಿತ್ತು. ಇಬ್ಬರೂ ಮಹಡಿ ಏರಿದರು.

"ಈಗಲೂ ಎಷ್ಟೊಂದು ಸೆಕೆ!"

ಹಣೆಯ ಮೇಲೆ ಸರಿದು ಬಂದಿದ್ದ ಕೂದಲುಗುಚ್ಛವನ್ನು ಹಿಂದಕ್ಕೆ ಸರಿಸಿದಳು ಸೌಭಾಗ್ಯ. ಅವನು ಕೆಳಗಿಳಿದು ಐದು ನಿಮಿಷಗಳಲ್ಲಿ ಎರಡು ಹಣ್ಣಿನ ರಸದ ಲೋಟಗಳನ್ನು ಹಿಡಿದು ಬಂದ.

ಮೇಲಿನ ವರಾಂಡದ ಕತ್ತಲಿನಲ್ಲಿ ನಿಂತು ಹೊರಗಿನ ಕತ್ತಲೆಗೆ ಕಣ್ಣೋಡಿಸಿದರು. ಯಾವುದೊ ಮನೆಯಿಂದ ರೇಡಿಯೋ ಸಂಗೀತ ಕೇಳಿ ಬರುತ್ತಿತ್ತು. ದೂರದ ನಾಲ್ಕು ಮನೆಗಳಿಂದ ಕಾಣುತ್ತಿದ್ದ ದೀಪ. ಸರಿದು ಹೋಗುವ ವಾಹನದ ಸದ್ದು.

"ಇವತ್ತು ನನಗೆ ಸಂತೋಷವಾಗಿದೆ. ನಿನಗೂ ಹಾಗೆ ಆಗಿರಬೇಕು." ಮೆಲ್ಲನೆ ಕೇಳಿದ.

"ಹುಂ" ಉಸಿರು ಕರೆದಳು.

"ಸಂತೋಷದಲ್ಲಿ ಹಸಿವೇ ಆಗ್ತಿಲ್ಲ."

"ನನಗೂ ಅಷ್ಟೆ"

ಅವಳನ್ನು ತೋಳಿನಿಂದ ಬಳಸಿ, ಕತ್ತಲಿನಲ್ಲಿ ನಡೆಸಿ ಮೆಟ್ಟಿಲಿನ ಮೇಲೆ ಕುಳಿತ. ಅವನ ಹಿಡಿತ ಬಿಗಿಯಾಯಿತು. ಉದ್ರೇಕದಿಂದ ಅವಳ ತುಟಿ ಚುಂಬಿಸಿದ. ಅವಳು

ನೀಳವಾಗಿ ಉಸಿರ್ಗರೆದಳು.

“ಸೌಭಾಗ್ಯ, ಎಷ್ಟು ದಿನದಿಂದ ಇದಕ್ಕೆ ಕಾದಿದ್ದೆ ಗೊತ್ತೆ?”

“ಬಹಳ ದಿನದಿಂದ ಅಲ್ಲ... ನಮ್ಮ ಮದುವೆ ಆಗಿ ಒಂದೂವರೆ ತಿಂಗಳು ಕಳೆದಿಲ್ಲ.”

ಲಜ್ಜೆಯಿಂದ ಕೂಡಿದ ಧ್ವನಿ ಕಂಪಿಸಿತು.

ಅವಳಿಗೆ ವಯಸ್ಸಿಗೆ ಮೀರಿದ ತಾಳ್ಮೆ. ಬದುಕಿನಲ್ಲಿ ಈಗ ಸಂತೋಷದ ರೆಕ್ಕೆ ಕೆದರುತ್ತಿದೆ. ಪ್ರೇಮದ ಕಡಲಿನಲ್ಲಿ ಮಣ್ಣಿನ ದೋಣಿಯ ಪಯಣ ಕೂಡದು.

“ನನ್ನ ಕ್ಷಮಿಸು, ಸೌಭಾಗ್ಯ. ನಿನಗೆ ಹೀಗೆಲ್ಲ ಏರ್ಪಾಟು ಮಾಡಿ ದೂರ ನಿಲ್ಲಬೇಕೂಂತ ಅಂದುಕೊಂಡಿರಲಿಲ್ಲ.”

ಅವನ ಮನಸ್ಸಿನಲ್ಲಿ ಗೊಂದಲವೆದ್ದಿತ್ತು. ಹೆಂಡತಿಯ ವಿಷಯದಲ್ಲಿ ಇಂದು ಸಡಿಲವಾದೆ ಎನಿಸಿರಬೇಕು. ಅವಳ ಮೇಲೆ ತೋರಿದ ಮರುಕದ ಮುಂದೆ ಪರದೆ ಬಿತ್ತು. ಅವಳನ್ನು ಹೆಂಡತಿಯಾಗಿ ಪಡೆದ ಕಹಿ ಘಟನೆ ಮುಂದೆ ನಿಂತಿತು. ಅಷ್ಟೇ ಅಲ್ಲ, ತಾಯಿ ತಿಳಿಸಿದಂತೆ ಸೌಭಾಗ್ಯಳಿಗೆ ಶಾಲೆಯ ಯುವಕ ಸ್ನೇಹಿತನೊಬ್ಬನಿದ್ದಾನೆ!

ಅವನಿಗೆ ಬಿಗಿಯಾಗಿ ಅಪ್ಪಿ ಕುಳಿತಳು.

“ನೀವು ಈಚೆಗೆ ಸ್ವಲ್ಪ ಒರಟರಾದಹಾಗೆ ಕಾಣ್ತೀರಿ.”

ಅವನ ಎದೆಗೆ ಲಜ್ಜೆಯಲ್ಲಿ ತೊಯ್ದ ಪಿಸುನುಡಿ ತಟ್ಟಿತು.

“ಗಾಬರಿ ಆಯ್ತೇನು? ಹಿಂದೆ ನಿನಗೆ ಚುಂಬಿಸಿರಲಿಲ್ಲವೆ?” ಅವಳ ತಲೆ ತಟ್ಟಿದ.

“ಆದರೆ ಇಷ್ಟೊಂದು ಬಲವಾಗಿ ಅಲ್ಲ.”

ಮೇಲುಸಿರಿನಲ್ಲಿ ನಕ್ಕಳು. ಅವನಿಗೂ ನಗು ಬಂತು.

“ಆ ಚುಂಬನದ ಹಿಂದೆಯೇ ನಿನ್ನ ಪಪ್ಪನ ಯಮದರ್ಶನ ಆಗಿತ್ತು. ಈಗ ಅದರ ನೆನಪು ಬೇಡ.”

ಇಬ್ಬರೂ ಮೌನ ತಳೆದರು. ಅವನೇ ಕೇಳಿದ.

“ನೀನು ನನ್ನ ಹೆಂಡತಿ ಅನ್ನೋದು ಗೊತ್ತೆ?”

ಮಾತು ಅವಳಿಗೆ ನಾಟಕೀಯವಾಗಿತ್ತು.

“ಅದು ನಿಮಗೇ ಗೊತ್ತಿರಲಿಲ್ಲ...ಮರೆತಿದ್ದೀರಿ.”

ಧ್ವನಿ ಅಳುಕಿತು. ಅವಳನ್ನು ಮತ್ತಷ್ಟು ಬಿಗಿಯಾಗಿ ಒತ್ತಿಕೊಂಡ.

“ಹಾಗಾದರೆ ಹೆಂಡತಿ ಅನ್ನೋದನ್ನ ಜ್ಞಾಪಿಸಿಕೊಳ್ಳಲೆ?”

ನಾಟಕೀಯವಾಗಿದ್ದ ಮಾತು ಈಗ ವಿಚಿತ್ರವಾಗಿತ್ತು. ನರಗಳು ಚೇತನಗೊಂಡವು. ಅತೀವ ಸಂತೋಷವಾಗಿತ್ತು. ಸಂತೋಷವನ್ನು ಮತ್ತಷ್ಟು ಕಾಲ ಹಿಡಿದಿಡುವ ಆಸೆ ಅವಳಿಗೆ.

ಮುಖ ಎತ್ತಿದಳು. ತುಟಿಗಳ ಮೇಲೆ ದಾಳಿ ಇಡಲು ಅವನು ಕಾದಿದ್ದ. ಮತ್ತೆ ಅವಳ ತೋಳಬಂದಿಯಾದಳು.

* * *

ಚೇತನದಾಯಕ ಸುಂದರ ಬೆಳಗು. ಸೌಭಾಗ್ಯ ಸ್ನಾನದ ಕೋಣೆಯಲ್ಲಿ ಗುನುಗುನು ಹಾಡಿದಳು. ಜಾಲರಿ ಕಿಟಕಿಯಿಂದ ಎತ್ತರದ ಬಾಳೆಯ ಗಿಡ ಕಾಣುತ್ತಿತ್ತು. ಅದರ ಮೇಲೆ ಬಿಳುಪು ಮೋಡದ ತುಣುಕುಗಳ ಆಕಾಶ. ತನ್ನಷ್ಟು ಸಂತೋಷಗೊಂಡ ಹುಡುಗಿ ಯಾರೂ ಇಲ್ಲ!

ಕನ್ನಡಿಯಲ್ಲಿ ಪ್ರತಿಬಿಂಬದ ಕಡೆ ಕಿರು ನಗೆ ಹಾಕಿದಳು. ಸಂತಸದಲ್ಲಿ ತಾನು ಅಧಿಕ ಚೆಲುವಿನಲ್ಲಿ ಕಾಣುವೆ!

ಹಿಂದಿನ ರಾತ್ರಿ ಕನಸಿನ ವ್ಯಕ್ತಿಯಂತೆ ವರ್ತಿಸಿದ್ದ ಕಾರ್ತೀಕ ಬೆಳಗಾಗುತ್ತಲೇ ಹೊರಕ್ಕೆ ಹೋಗಿದ್ದ. ಕುರ್ಚಿಯ ಮೇಲೆ ಅವನು ಎಸೆದ ಬುಷ್ ಷರ್ಟ್ ಕಾಣಿಸಿತು. ಅದನ್ನು ಮಡಿಸಿ ಕೆನ್ನೆಗೆ ಒತ್ತಿದಳು.

ಗರಿಯೊಡೆದ ಹಕ್ಕಿಯಂತೆ ಸಂಗೀತ ಶಾಲೆಯ ಆವರಣದಲ್ಲಿ ನಡೆದಳು. ಮೀನಾಕ್ಷಿಯೊಂದಿಗೆ ಕೆಫೆಗೆ ಬಂದು ಸ್ಯಾಂಡ್‌ವಿಚ್‌ಗೆ ಆರ್ಡರ್ ಮಾಡಿ ಕಾಲು ಅಲುಗಿಸುತ್ತ ವಿರಾಮವಾಗಿ ಕುಳಿತಳು.

"ಕ್ಲಬ್ ಡ್ಯಾನ್ಸ್ ನಿನ್ನೆ ರಾತ್ರಿ ಅಲ್ಲವೆ ನಡೆದಿದ್ದು?"

ಅಮಲು ಕಣ್ಣುಗಳಲ್ಲಿ ಎದುರು ಗೋಡೆಯ ಮಂಜಿನ ಬೆಟ್ಟದ ಚಿತ್ರ ನೋಡುತ್ತ ಸ್ನೇಹಿತೆಯನ್ನು ಕೇಳಿದಳು. ಮೀನಾಕ್ಷಿ ತುಟಿ ಕಚ್ಚಿದಳು.

"ಕ್ಲಬ್ ಕುಣಿತ ನೋಡಿ ನಿಮ್ಮ ಮಿದುಳಿನ ಪೊರೆ ಕಳಚಿರಬೇಕು."

"ನಿಮ್ಮನ್ನ ಕಂಡು ಎಷ್ಟೋ ವರ್ಷಗಳಿಂದ ಹಾಗೆ....ನೀವು ಹೊಸಬಳ ಹಾಗೆ ಕಾಣೋದು, ಮೀನಾಕ್ಷಿ."

ಮೀನಾಕ್ಷಿ ಬೆರಳು ಕಚ್ಚಿದಳು. ಹುಡುಗಿ ಮುಗ್ಧತೆಯ ಕೋಶದಿಂದ ಹೊರ ಬಂದಿದ್ದಾಳೆ!

"ನೀವು ಇನ್ನು ಬಚ್ಚಿ ಅಲ್ಲ. ಹದಕ್ಕೆ ಬಂದ ಹಾಗಾಯ್ತು. 'ನೀನು' ಅಂತ ಕರೀತೀನಿ. ನನ್ನ 'ನೀವು' ಅಂತಲೇ ಕರೀಬೇಕು ಜೋಕೆ!"

"ಓ.ಕೆ."

"ಇದು ಯೌವನದ ಕಾವಿನಲ್ಲಿ ಹಿಡಿಯೊ ಹುಚ್ಚು. ನಿನಗೆ ಹೊಸತು ನಾನು ಹುಚ್ಚಿನಲ್ಲೇ ಕಾಲ ಕಳೆದು ಮೂವತ್ತೊಂದಕ್ಕೆ ಕಾಲಿಟ್ಟಿದ್ದೀನಿ..... ಸೌಭಾಗ್ಯ, ನಿನ್ನ ಪೋಷಕ ಮಹಾಶಯ ರಾತ್ರಿ ಒಳ್ಳೆ ಉತ್ಸಾಹದಲ್ಲಿದ್ರು."

ಸೌಭಾಗ್ಯ ಅವಳತ್ತ ನೋಡದೆ ಸ್ಯಾಂಡ್‌ವಿಚ್ ಕಚ್ಚಿದಳು.

"ಆಶ್ಚರ್ಯ ಇಲ್ಲ. ಹೊಸ ಚಿತ್ರದ ಸಾಹಿತ್ಯಕ್ಕೆ ಒಪ್ಪಂದ ಆಗಿರಬಹುದು. ಹೊಸ ಕಾದಂಬರಿಗೆ ಸ್ಫೂರ್ತಿ ಬಂದಿರಬೇಕು."

"ಸ್ಫೂರ್ತಿ ಯಾವುದೂ ಇಲ್ಲ. ಅವರಿಗೆ ಸಂತೋಷದ ಸುದ್ದಿ ಬಂದಿದ್ದರಿಂದ ಹಾಗಿದ್ರು."

"ಯಾವುದು ಸಂತೋಷದ ಸುದ್ದಿ?"

ಮುಖ ಮುಂದೆ ತಂದು ಕಣ್ಣು ಮೊನಚು ಮಾಡಿದಳು ಮೀನಾಕ್ಷಿ.

"ನಿನಗೆ ಗೊತ್ತಿಲ್ಲಾಂದ್ರೆ ಏನು ಹೇಳ್ಲಿ. ನಿನ್ನ ಮಮ್ಮಿ ಸ್ವರ್ಣಮ್ಮ ನಿನಗೆ ಏನೂ ತಿಳಿಸಿಲ್ಲ. ಒಂದೂವರೆ ತಿಂಗಳ ಹಿಂದೆ ಸಿಟಿಯಿಂದ ತರಾತುರಿಯಲ್ಲಿ ಓಡಿದ ಹುಡುಗಿ ನನಗೆ ಸಿಕ್ಕಿದ್ಲು, ಎಲ್ಲಾ ತಿಳಿಸಿದ್ಲು. ಶರ್ಮಿಳಾ ಅಂತ ಅವಳ ಹೆಸರು. ಕಾರ್ತೀಕನಿಗೆ ಗೊತ್ತಾಗಿದ್ದೋಳು. ಈಗ ಸಿಟಿಗೆ ಹಿಂತಿರುಗಿದಾಳೆ."

ಕುಣಿಯುತ್ತಿದ್ದ ಕಾಲುಗಳು ಸ್ಥಗಿತಗೊಂಡವು.

"ನೀವು ಹೇಳ್ತಾ ಇರೋದೇನು?" ಗೊರಗು ಪ್ರಶ್ನೆ ಬಂತು.

"ಕಾರ್ತೀಕನ ವಿಷಯದಲ್ಲಿ ನೀನು ಇಷ್ಟು ತಿಳಿದಿಲ್ಲ ಅಂದ್ರೆ ನನಗೆ ಆಶ್ಚರ್ಯವೂ ಇಲ್ಲ. ಎಷ್ಟಾದರೂ ಅವರ ಪೋಷಣೆಯಲ್ಲಿರೊ ಹುಡುಗಿ ನೀನು. ಅವರ ಖಾಸಗಿ ವಿಷಯಕ್ಕೆ ತಲೆ ಹಾಕೊ ಹಾಗಿಲ್ಲ."

"ಅದೇನು ಹೇಳಿ?"

ಮೇಜು ಮೆಲ್ಲನೆ ಗುದ್ದಿದಳು.

"ಶರ್ಮಿಳಾ ಕಾರ್ತೀಕನ್ನ ಮೆಚ್ಚಿ ಮದುವೆಗೆ ಒಪ್ಪಿಕೊಂಡೋಳು. ಮದುವೆಗೆ ನಾಲ್ಕು ದಿನ ಇದೆ ಅನ್ನೋವಾಗ ಕಾರು ರೇಸಿನೋನ ಜೊತೆಗೆ ಓಡಿಹೋದ್ಲು... ಯಾರೋ ಪ್ರದೀಪ ಅಂತ. ಎಷ್ಟು ರಭಸದಿಂದ ಓಡಿ ಹೋದಳೊ ಅಷ್ಟೇ ರಭಸದಿಂದ ವಾಪಸ್ ಬಂದಿದಾಳೆ."

ಸೌಭಾಗ್ಯ ಕಾಫಿ ಲೋಟವನ್ನು ಮೇಜಿನ ಮೇಲೆ ಸುತ್ತಿಸಿದಳು. ಹಿಂದಿನ ರಾತ್ರಿಯಿಂದ ಪಟ್ಟ ಸಂತೋಷ ಒಮ್ಮೆಗೇ ಪೂರ್ಣವಾಗಿ ಸೋರಿ ಕನಸಾಗಿ ನಿಂತಿತು. ಸಣ್ಣ ಕೆಫೆಯ ಕನ್ನಡಿ, ಕೌಂಟರ್, ಕುರ್ಚಿ, ಮೇಜುಗಳು ಅವಳ ಸುತ್ತಲೂ ಈಜಾಡಿದವು.

ಸ್ವರ್ಣಮ್ಮನೊಂದಿಗೆ ಮಾತಾಡಲು ಮನೆಗೆ ಬಂದಿದ್ದ ಆ ಚೆಂದದ ಹೆಣ್ಣು ಶರ್ಮಿಳಾ!

"ಕಾರ್ತೀಕ ಈ ವಿಷಯದಲ್ಲಿ ಒಂದು ಶಬ್ದವೂ ನನಗೆ ತಿಳಿಸಿಲ್ಲ."

ಕಣ್ಣುಗಳ ಮುಂದಿನ ಮಂಜು ಇನ್ನೂ ಕರಗಿರಲಿಲ್ಲ.

"ಅವಶ್ಯಕತೆ ಇರ್ಲಿಲ್ಲ. ನೀನು ಅವನ ಅಧೀನದಲ್ಲಿರೊ ನಿರ್ಗತಿಕ ಹುಡುಗಿ. ಅದೂ ಅಲ್ಲದೆ ಅವನ ಘನತೆಗೆ ಪೆಟ್ಟು ಹಾಕಿದ ಘಟನೆ ಅದು. ಮತ್ತೆ ಸರಿ ಹೋಗಬಹುದು. ಶರ್ಮಿಳಾ ತನ್ನ ರೇಸ್ ಗಂಡನಿಂದ ಡೈವೋರ್ಸ್ ತೊಗೊತಾಳಂತೆ."

"ಡೈವೋರ್ಸ್!...?"

"ಹೋ, ಅದು ನಿನಗೆ ಗೊತ್ತಿಲ್ಲವಲ್ಲ. ಡೈವೋರ್ಸ್ ಅಂದ್ರೆ ವಿಚ್ಛೇದನ.... ಸೋಡ ಚೀಟಿ."

"ಆಗ ಶರ್ಮಿಳಾ ಕಾರ್ತೀಕನ್ನ ಮದುವೆ ಆಗೋಕೆ ಸಾಧ್ಯ ಅಲ್ಲವೇ?" ಒಣ ತುಟಿಗಳನ್ನು ನಾಲಗೆ ಸವರಿತು.

"ಹೌದು, ಅದೇ ಕಾರಣಕ್ಕೆ ಕಾರ್ತೀಕ ನಿನ್ನೆ ರಾತ್ರಿ ಅಷ್ಟೊಂದು ಖುಷಿಯಾಗಿ ಇದ್ದದ್ದು. ಆ ಗಡಿಯಾರ ನೋಡು. ಮುಳ್ಳು ಹಾರ್ತಾ ಇರೊಹಾಗೆ ಕಾಣುತ್ತೆ. ನಡಿ, ಹೋಗೋಣ."

ಇಬ್ಬರೂ ರಸ್ತೆಯ ತುದಿಗೆ ನಡೆದರು. ಸೌಭಾಗ್ಯಗಳಿಗೆ ತಲೆಯಲ್ಲಿ ಇರಿತ ಪ್ರಾರಂಭವಾಗಿತ್ತು. ಮಾತು ಅಡಗಿ ಉಸಿರಾಟವೂ ಕಷ್ಟವಾಗಿತ್ತು. ಬಸ್ ಸ್ಟಾಪಿನ ತಗ್ಗಿಗೆ ಇಳಿಯುತ್ತ ಕೇಳಿದಳು.

"ಇವೆಲ್ಲ ನಡೆದಿದ್ದು ಯಾವಾಗ?"

ಮೀನಾಕ್ಷಿ ನಿಂತು ಅವಳ ತೋಳು ಹಿಡಿದು ತನ್ನ ಕಡೆಗೆ ತಿರುಗಿಸಿದಳು.

"ಬಹುಶಃ ಒಂದೂವರೆ ತಿಂಗಳ ಹಿಂದೆ. ಇದೆಲ್ಲ ನೀನು ತಲೆ ಕೆಡಿಸಿ ಕೊಳ್ಳೊ ಸಂಗತಿ ಅಲ್ಲ. ನಿನ್ನ ಪೋಷಕನ ಸ್ವಂತ ವಿಷಯ. ಸಂಜೆಗೆ ಬರುತ್ತೀಯಲ್ಲ?"

ಓಡು ನಡಿಗೆ ಹಾಕಿದಳು ಮೀನಾಕ್ಷಿ. ಸೌಭಾಗ್ಯ ಮತ್ತೊಂದು ಬಸ್ ಹಿಡಿದು ಶಾಲೆಗೆ ಹಿಂತಿರುಗಿದಳು. ವಾಚನಾಯಲದ ಬೆಂಚಿನ ಮೇಲೆ ಭಾರವಾಗಿ ಕುಳಿತಳು.

ಒಂದೂವರೆ ತಿಂಗಳ ಹಿಂದೆ ಪ್ರಣಯ ದೋಣಿ ಪಲ್ಲಟಗೊಂಡು ಮಣ್ಣಿನ ದೋಣಿ ಆದ ಪ್ರಸಂಗ! ಕಾರ್ತೀಕನಿಗೆ ಆಗ ತೇಜೋಭಂಗವಾಗಿದೆ. ಹೃದಯಕ್ಕೆ ಗಾಯ. ಅವನ ಹೆಮ್ಮೆ, ಅಭಿಮಾನಕ್ಕೆ ಆದ ಗಾಯದ ಚಿಕಿತ್ಸೆಗೆ ಒಂದು ಮದ್ದು ತಕ್ಷಣ ಬೇಕಿತ್ತು. ಪ್ರಪಂಚ ತಿಳಿಯದ ಮುಗ್ಧೆಯೊಬ್ಬಳಿಂದ ಆ ಮದ್ದನ್ನು ನಿರ್ದಾಕ್ಷಿಣ್ಯವಾಗಿ

ಪಡೆದಿದ್ದ. ಅದಕ್ಕೆ ಕನಕಳ ರೋಗದ ಸನ್ನಿವೇಶವೂ ಸಹಕಾರಿಯಾಗಿತ್ತು. ಕಾರ್ತೀಕ ಮದುವೆ ಆದ. ನಂತರ ಅದಕ್ಕಾಗಿ ಪಶ್ಚಾತ್ತಾಪ ಪಟ್ಟ. ಹೆಂಡತಿಗೆ ಗಂಡನಾಗದೆ ಪೋಷಕನಾದ. ಅವನನ್ನು ಪ್ರೀತಿಸಿದ ಶರ್ಮಿಳಾ ಈಘ ಹಿಂತಿರುಗಿದ್ದಾಳೆ. ಅವಳ ನರಗಳು ಕೆರಳಿವೆ. ಅದೇ ಕಾರಣಕ್ಕೆ ನಿನ್ನೆ ರಾತ್ರಿ ಅವನು ಅನಿರೀಕ್ಷಿತವಾಗಿ ಹರ್ಷಿತನಾಗಿದ್ದ. ಹರ್ಷದ ಭರದಲ್ಲಿ ತನ್ನನ್ನು ಚುಂಬಿಸಿದ್ದ. ಅವನದು ಕೇವಲ ಉದ್ರೇಕ, ಕೆರಳಿಕೆ! ಪ್ರೀತಿಯ ಸೊಗಡಿಲ್ಲ!

ಹಿಂದಿನ ರಾತ್ರಿ ಕಾರ್ತೀಕ ಹೇಳಿದುದೇನು?

"ಇವತ್ತು ನನಗೆ ಸಂತೋಷವಾಗಿದೆ. ನಿನಗೂ ಹಾಗೇ ಆಗಿರಬೇಕು. ನಿನಗೆ ಹೀಗೆಲ್ಲ ಏರ್ಪಾಟು ಮಾಡಿ ದೂರ ನಿಲ್ಲಬೇಕೂಂತ ಅಂದುಕೊಂಡಿರಲಿಲ್ಲ. ಹಾಗಾದರೆ ಹೆಂಡತಿ ಅನ್ನೋದನ್ನ ಜ್ಞಾಪಿಸಿಕೊಳ್ಳಲೆ?"

ಪತಿಯನ್ನು ಮತ್ತೆ ಪಡೆದೆನೆಂಬುದು ಮಿಥ್ಯೆ. ಅವನನ್ನು ಅರ್ಥಮಾಡಿ ಕೊಳ್ಳಲಾಗದವಳು ತಾನು. ತನ್ನದೂ ದೋಷವಿದೆ.

ಕಾರ್ತೀಕನಿಂದ ಪಡೆದಿರುವ ಹಣ, ಬಟ್ಟೆ, ಆಹಾರ, ಮರುಕ, ಅನುಕಂಪ ಎಲ್ಲವೂ ಚಂಡಮಾರುತದ ನಂತರ ಉಳಿದ, ದಿಕ್ಕಾಪಾಲಾದ ವಸ್ತುಗಳಂತೆ. ಅವೆಲ್ಲವನ್ನೂ ಆಯ್ದು ಅವನಿಗೆ ಹಿಂತಿರುಗಿಸಲೆ?

ಶಾಲೆಯಿಂದ ಹೊರಬಂದು ನಿಧಾನವಾಗಿ ಹೆಜ್ಜೆ ಹಾಕಿದಳು. ಮಾನಸಿಕ ದಣಿವಿಗೆ ಸಿಕ್ಕಿ ತೊಳಲಿದ ದೇಹಕ್ಕೆ ವಿರಾಮ ಬೇಕಿತ್ತು. ಸಾಲು ಮರದ ಅಡಿಯ ಸಿಮೆಂಟ್ ಆಸನದ ಮೇಲೆ ಕುಳಿತು, ನೋವಿನ ಆಗರವಾಗಿದ್ದ ತಲೆಗೆ ಕೈ ಹಚ್ಚಿದಳು.

ಕಾರ್ತೀಕ ದಯಾರ್ದ್ರ. ಶಿಶುವಿಗೆ ತೋರುವ ದಯೆ ಅದು. ತನಗೆ ಅದು ಬೇಕಿಲ್ಲ. ಶರ್ಮಿಳಾ ಹಿಂತಿರುಗದಿದ್ದಲ್ಲಿ ಕಾರ್ತೀಕ ತನ್ನನ್ನು ಹಿಂದಿನ ರಾತ್ರಿ ಹಾಗೆ ಪ್ರೀತಿಸುತ್ತಿದ್ದನೆ?

ಅವಳಿಗೆ ಕುಸುಕು ಅಳು ಬಂತು. ಆಳವರಿಯದೆ ಇಳಿದ ನದಿ. ನಂತರ ದೋಣಿಯ ಆಸರೆ. ಮಣ್ಣಿನ ದೋಣಿಯ ಪಯಣ!

ಅಳು ತಡೆದು ಮುಖ ಎತ್ತಿದಳು. ಗಂಭೀರ ಹೆಜ್ಜೆಗಳ ಯುವಕ ಅವಳ ಕಡೆಗೆ ನಡದು ಬರುತ್ತಿದ್ದ, ಸುಧಾಕರ!

* * *

ಸುಧಾಕರ ಅವಳ ಮುಂದೆ ನಿಂತು ಸುತ್ತಲೂ ನೋಡಿ ತುಟಿ ಉಬ್ಬಿಸಿ ವಿನೋದದಲ್ಲಿ ಕೇಳಿದ.

"ರಸ್ತೆ ವಾಹನಗಳನ್ನ ಎಣಿಸೊ ಕೆಲಸ ಯಾವತ್ತಿನಿಂದ ವಹಿಸಿಕೊಂಡ್ರಿ?"

ಅಳು ಮಾಯವಾಗಿತ್ತು. ಎದ್ದು ನಿಂತು ಸೆರಗು ಸರಿಪಡಿಸಿಕೊಂಡಳು. ವಾಹನಗಳ ಸರಿದಾಟ ರಸ್ತೆಯಲ್ಲಿ ಸಾಕಷ್ಟು ನಡೆದಿತ್ತು. ವಿಚಾರಗಳ ತಾಕಲಾಟದಲ್ಲಿ ಭಾರವಾದ ತಲೆ ಅವಳನ್ನು ಸಾಲು ಮರದಡಿ ಕೂಡುವಂತೆ ಮಾಡಿದುದನ್ನು ಮರೆತಿದ್ದಳು.

"ತಲೆ ನೋಯ್ತಾ ಇತ್ತು" ತಲೆ ಒತ್ತಿಕೊಂಡಳು.

"ನೀವು ಶಾಲೆಗೆ ಬಂದಿರಲಿಲ್ಲ. ಹಾಗೆ ನೋಡ್ತಾ ಬಂದೆ. ಇಲ್ಲಿ ಕಾಣಿಸಿದ್ರಿ. ನೀವು ಮನಸ್ಸಿಗೆ ಏನೊ ಬಹಳ ಹಚ್ಚಿಕೊಂಡ ಹಾಗೆ ಕಾಣತ್ತೆ. ಮನಸ್ಸು ಸ್ವಚ್ಛ ಕನ್ನಡಿಯ ಹಾಗಿರಬೇಕು. ಅದರ ಮೇಲೆ ಧೂಳು ಸೇರಬಾರದು."

ಅವನ ಮಾತು ಅಮೃತ ಸಿಂಚನವಾಗಿತ್ತು. ಸೌಭಾಗ್ಯ ಅವನಿಗೆ ಮತ್ತಷ್ಟು ಸಮೀಪ ಬಂದಳು.

"ನೀವು ನನಗೋಸ್ಕರ ಶಾಲೆಗೆ ಹೋಗದೆ ಬಂದಿದೀರಿ."

ತುಟಿಯಲ್ಲಿ ನಗೆ ಮಿಂಚಿಸಿದ.

"ನಿಮಗೋಸ್ಕರ ನಾನು ಏನು ಮಾಡಲಿಕ್ಕೂ ಸಿದ್ಧ. ಮೊದಲು ಈ ಸ್ಥಳ ಬಿಡಿ... ಬಯಲೇ ಬೇಕು ಅಂದ್ರೆ ಬನ್ನಿ."

ಕೈ ತಟ್ಟಿ ಆಟೊ ಕರೆದ. ಕಂಟೋನ್ಮೆಂಟ್ ಹೊಕ್ಕು ಫ್ರೇಜರ್ ಟೌನ್ ದಿಕ್ಕಿಗೆ ಸಾಗಿದ ಮೇಲೆ ಇಬ್ಬರೂ ಇಳಿದರು. ಸಿಗರೇಟು ಹಚ್ಚಿ ಪಾರ್ಕಿನ ಬೆಂಚಿನ ಕಡೆಗೆ ಕೈ ತೋರಿದ.

ಪಾರ್ಕಿನಲ್ಲಿ ಕುಳಿತುದು ಬಯಲಿನಲ್ಲಿ ಕುಳಿತಂತಿತ್ತು. ಸೌಭಾಗ್ಯ ಕಣ್ಣು ಸುತ್ತಿಸಿದಳು. ನಾಲ್ಕು ಕಡೆಗಳಲ್ಲೂ ವಾಹನದ ಓಡಾಟದ ರಸ್ತೆಗಳು. ದೂರದೂರಕ್ಕೆ ಹಾಕಿದ್ದ ಸಿಮೆಂಟ್ ಬೆಂಚುಗಳ ಮೇಲೆ ಜನರಿಲ್ಲ.

ಸುಧಾಕರ ತನ್ನ ಎಡ ಪಕ್ಕದಲ್ಲಿ ಬೆಂಚು ತಟ್ಟಿದ. ಅವಳು ಸಮೀಪಕ್ಕೆ ಸರಿದು ಕುಳಿತಳು. ಮನದ ನೆಮ್ಮದಿಗೆ ಅವನ ಮಾತು ಬೇಕಿತ್ತು.

"ಜನಪ್ರಿಯ ಲೇಖಕ ಕಾರ್ತೀಕ ನಿಮ್ಮ ಪೋಷಕ ಅಂತ ಮೊದಲೇ ಗೊತ್ತಾಗಿದ್ರೆ ನಿಮ್ಮ ಪರಿಚಯ ಆಗ್ತಿತ್ತೊ ಇಲ್ಲವೊ. ಮೀನಾಕ್ಷಿ ಹೇಳಿದ್ಲು ನಿಮ್ಮ ಸಂಪೂರ್ಣ ಜವಾಬ್ದಾರಿ ಕಾರ್ತೀಕ ಹೊತ್ತಿದಾರಂತೆ. ಎಷ್ಟು ವಿಚಿತ್ರ! ವಿಚಿತ್ರ ಅಲ್ಲದಿದ್ರೂ ಅಪರೂಪದ ಸಂಗತಿ."

ಮಾತು ಟೀಕೆಯಂತೆ ಕಂಡಿತು.

"ಹೊಣೆಗಾರಿಕೆ ಹೊರಬಾರದೆ?"

"ನೀವು ಅವರ ಬಂಧು ಅಲ್ಲ. ಅವರ ಮನೆಯಲ್ಲಿ ಬಂಧುವಿಗಿಂತಲೂ ಹೆಚ್ಚಾಗಿ ಇದೀರಂತೆ. ಅವರ ಹೊಣೆಗಾರಿಕೆಯಲ್ಲಿ ಸ್ವಾರ್ಥ ಇರಬೋದು. ಇವೆಲ್ಲ ಚಿಂತೆಗೆ

ಕಾರಣವಾದ ವಿಷಯಗಳು. ಚಿಂತೆಯಿಂದ ದೂರವಾಗಬೇಕಾದರೆ ಸ್ವಾವಲಂಬನೆ ಬೇಕು.

ಸಿಗರೇಟು ಬಲವಾಗಿ ಎಳೆದು ದಟ್ಟವಾಗಿ ತೂರಿದ.

"ನನ್ನ ಸಂಗತಿ ವಿಚಿತ್ರ. ನಾನು ಸ್ವಾವಲಂಬಿ ಆಗುವ ಹಾಗಿಲ್ಲ."

ಸುಧಾಕರ ಅಲ್ಲಗಳೆದ.

"ಅಸ್ಸಾಧ್ಯ ಯಾವುದೂ ಇಲ್ಲ. ಸಹಾಯ, ಅವಲಂಬನೆ ಕಾಣದೆ ಬೆಳೆದ ನಾನಂತೂ ನಿಮ್ಮ ಮಾತು ಒಪ್ಪೋದಿಲ್ಲ. ನೀವೂ ನನ್ನ ಹಾಗೆ ಆಗಬೇಕು. ಹಣ ಸಂಪಾದನೆಗೆ ಅವಕಾಶ ಇರೊ ನೀವು ಪರಾವಲಂಬಿ ಆಗಬಾರದು ಅಂದ್ರೆ ಕೋಪ ಬರಬೋದು. ನಿಮ್ಮ ಸ್ವಭಾವಕ್ಕೆ ವಿರುದ್ಧ ನಾನು. ಕಷ್ಟಪಟ್ಟು ಬೆಳೆದ ಶರೀರ ಇದು. ದಿನಪತ್ರಿಕೆ ಹಂಚ್ತಾ ಇದ್ದೆ. ಮೂಟೆಗಳನ್ನ ಹೊತ್ತಿದೀನಿ. ಈಗ ಹೊಟೇಲ್‌ನಲ್ಲಿ ಕೆಲಸ ಮಾಡ್ತೀನಿ. ಸಮಾರಂಭಗಳಲ್ಲಿ ವಾದ್ಯ ಬಾರಿಸ್ತೀನಿ."

ಹೆಮ್ಮೆಯಿಂದ ನುಡಿದು ಅವಳ ಕೈ ಮೃದುವಾಗಿ ನೇವರಿಸಿದ.

"ನಾನು ಪರಾವಲಂಬಿಯಾಗಿಯೇ ಇರಬೇಕೂಂತ ಹಣೆಬರಹ ಇದೆ.'

ವಿವಾಹಿತೆ ಪರಾವಲಂಬಿಯೆಂದು ಹೇಳಲಾಗದು! ಸ್ವಾತಂತ್ರ್ಯ ಯಾವುದು?

ಅವನು ಎದ್ದು ರಸ್ತೆಯ ಕಡೆ ನೋಡಿದ. ಪಾರ್ಕಿನ ಮೂಲೆಗೆ ನಿಂತಿದ್ದ ಆಟೊ ಸರಿದು ಹೋಯಿತು.

"ಯಾರೊ ಆಸಕ್ತರು ಈ ಕಡೆ ನೋಡ್ತಾ ಇದ್ರು."

ಮತ್ತೆ ಕುಳಿತು ಅವಳ ಹಣೆಯ ಮೇಲಿನ ನಕ್ಕಿಯ ಅರ್ಧ ಚಂದ್ರ ನಿಟ್ಟಿಸಿದ. ಅವಳ ತಲೆ ತಗ್ಗಿತು.

"ಹಣ ಸಂಪಾದನೆ ಮಾಡೊ ಅಗತ್ಯ ನನಗೆ ಈವರೆಗೆ ಬಂದಿಲ್ಲ. ಪಪ್ಪ ನೋಡಿಕೊಳ್ತಿದ್ರು. ಮಮ್ಮಿ ಹೋದ ಮೇಲೆ ಕಾರ್ತೀಕ ನನ್ನ ಪೋಷಣೆವಹಿಸಿ ಕೊಂಡ್ರು."

"ಯಾಕೆ?"

ಉತ್ತರಿಸಲಾಗದ ಪ್ರಶ್ನೆ.

"ನನ್ನ ಕಂಠ ಮೆಚ್ಚಿದ್ರು. ಆಸ್ಥೆಯಿಂದ ನೋಡಿಕೊಳ್ತಾ ಇದಾರೆ."

ಆ ಮಾತು ಅವನಿಗೆ ಬಾಲಿಶವಾಗಿ ಕಂಡಿತು.

"ಹಾಗಾದರೆ ನೀವು ಕಾರ್ತೀಕನ ಮನೆಗೆ ಆಸ್ತಿ ಇದ್ದ ಹಾಗೆ."

ನಗೆ ತರಂಗ ಎಬ್ಬಿಸಿ ಕೆಮ್ಮಿದ. ದೃಷ್ಟಿ ಅವಳ ತಲೆಗೂದಲಿನ ಮೇಲೆ

ಕೇಂದ್ರೀಕರಿಸಿತ್ತು, ಅವನ ಮಾತು ಅರ್ಥವಾಗದಿದ್ದರೂ ಅವಳ ಎದೆಯಲ್ಲಿ ಅದು ಕತ್ತಿಯಂತೆ ಇಳಿಯಿತು.

"ದೊಡ್ಡ ಮಾತು ಬಳಸ್ತಿದ್ದೀರಿ ನನಗೆ."

"ಹೌದು, ಆ ಕಲಾವಿದರ ಮನೆಗೆ ನೀವು ಆಸ್ತಿ...ನಾನು ನಮ್ಮ ಹೊಟೇಲಿಗೆ ಬಂಡವಾಳ ಇದ್ದ ಹಾಗೆ."

"ಅದು ನಿಮ್ಮ ಸ್ವಂತ ಹೊಟೇಲೆ?"

ಮಾತಿಗೊಂದು ತಿರುವು ಕೊಟ್ಟಳು.

"ಹೌದು"

"ನೀವು ಬಹಳ ಹಣ ಸಂಪಾದನೆ ಮಾಡ್ತೀರಿ ಅಂತ ಶಾಲೆಯಲ್ಲಿ ಹೇಳ್ತಾರೆ."

"ಹಾಗೆ ಹೇಳೋರ ಮಾತು ನಂಬಬೇಡಿ. ಬೇರೆಯೋರ ಕಷ್ಟ, ಸುಖ ನನ್ನ ಜನ ಯಾವತ್ತೂ ಸರಿಯಾಗಿ ಅಳೆಯೋದಿಲ್ಲ. ಹೊಟೇಲು ಪ್ರಾರಂಭ ಮಾಡೋದಿಕ್ಕೆ ಬ್ಯಾಂಕಿನಿಂದ ಸಾಲ ತೊಗೊಂಡ್ವಿ. ಅದನ್ನ ತೀರಿಸೋದಿಕ್ಕೆ ವರ್ಷಗಳೇ ಬೇಕು. ನನ್ನ ತಾಯಿ ಹೊಟೇಲಿನಲ್ಲಿ ತಿಂಡಿ ಮಾಡ್ತಾಳೆ. ಒಳ್ಳೆ ಅಡಿಗೆಯಾಕೆ ಅವಳು. ನನ್ನ ಅಣ್ಣನಿಗೆ ಕುಂಟು. ಸಾಮಾನು ತರೋದು, ಲೆಕ್ಕ ಬರೆಯೋದು ಅವನ ಕೆಲಸ. ನಾನು ಸಪ್ಲೈ ಮಾಡ್ತೀನಿ. ನಾನು ಪಿಯಾನೊ ವಾದ್ಯಗಾರ ಅನ್ನೋದು ಜನಕ್ಕೆ ಗೊತ್ತಿಲ್ಲ. ಸಮಾರಂಭಗಳಲ್ಲಿ ವಾದ್ಯ ಬಾರಿಸ್ತೀನಿ, ನನಗೆ ಹಣ ಬೇಕು."

ಮಾತಿನ ತೀವ್ರತೆ ಅವಳನ್ನು ಮೌನವಾಗಿರಿಸಿತು. ಅವನು ಮುಂದುವರಿಸಿದ.

"ನೀವು ಪ್ರತಿಯೊಂದಕ್ಕೂ ಕಾರ್ತೀಕನ ಮನೆ ಅವಲಂಬಿಸೋದು ಸರಿಯಲ್ಲ. ಅವರಿಗೆ ನಿಮ್ಮ ಮೇಲೆ ಬೇಸರ ಬಂದರೆ ಆಗ ಗತಿ?"

ಕಟುವಾದರೂ ತನ್ನ ಬಗೆಗೆ ನಿಜವೆನಿಸಿದ ಮಾತು. ಮೊನಚು ನೋಟ ಅವನತ್ತ ಒಗೆದಳು.

"ಅಂತಹ ಯೋಚನೆ ಬಂದಿಲ್ಲ. ಹಾಗೆ ಎಂದಿಗೂ ಆಗೋದಿಲ್ಲ."

ಸಿಗರೇಟು ತುಂಡು ಪಕ್ಕಕ್ಕೆ ತೂರಿ ಭುಜ ಏರಿಸಿ ಇಳಿಸಿದ.

"ನಿಮಗೆ ಪ್ರಪಂಚ ಹೇಗೇಂತ ಗೊತ್ತಿಲ್ಲ. ನಾಳೆ ಅನ್ನೋದು ಎಂತೋರಿಗೂ ಅನಿಶ್ಚಿತ... ನಿಮ್ಮ ಪೋಷಕ ಏಕಾಏಕಿ ಸತ್ತುಹೋದರೆ?"

"ಛೀ!....ಇಲ್ಲ...."

ಗಾಬರಿಯಿಂದ ಕೂಗಿದಳು. ದೂರಕ್ಕೆ ಸರಿದು ಕುಳಿತಳು.

"ಯಾರೂ ಸಾಯದೆ ಉಳಿಯೋದಿಲ್ಲ. ಸಾವಿನ ಮಾತು ಬೇಡ. ಅವರು ಮದುವೆ ಮಾಡಿಕೊಂಡ್ರೆ ನಿಮ್ಮ ಗತಿ?"

ವಾಸ್ತವವಾಗಿ ಮಾತಿನ ಪಟ್ಟು ಬಿಡಲಿಲ್ಲ,

"ಅದೂ ಇಲ್ಲ ಅಂದೆ" ಬಿರುಸಾಗಿ ಹೇಳಿದಳು.

ಅವನು ತಣ್ಣಗಾದ. ತನ್ನ ಪಕ್ಕದಲ್ಲಿ ಬೆಂಚು ತಟ್ಟಿದ.

"ಬೇಸರಪಡಬೇಡಿ. ಹತ್ತಿರ ಬನ್ನಿ. ಒಟ್ನಲ್ಲಿ ಹೇಳೋದಾದ್ರೆ ಪರತಂತ್ರ ಜೀವಿ ಆಗಿರೋದು ಸುರಕ್ಷಿತವಲ್ಲ."

ಅವಳ ವಿಧೇಯತೆ, ಅವಲಂಬನ ಪ್ರವೃತ್ತಿಗೆ ಗಾಯವಾಗಿತ್ತು.

"ಏನು ಮಾಡು ಅಂತೀರಿ?" ಸಮೀಪಕ್ಕೆ ಸರಿದಳು.

"ಹಣ ಸಂಪಾದಿಸೋದು ನನ್ನ ಕೇಳಿ, ಹೇಳಿಕೊಡ್ತೀನಿ. ಮೊದಲು ಒಂದು ಸಾಮಾನ್ಯ ಮದುವೆ ಪಾರ್ಟಿಯಲ್ಲಿ ಹಾಡಿ. ನಿಮ್ಮ ಹೆಸರು ಹಾಗೇ ಅರಳತ್ತೆ. ಅದಕ್ಕೆ ನಾನು ವೇಗ ತೋರಿಸ್ತೀನಿ."

"ಸದ್ಯಕ್ಕೆ ಅದು ಬೇಡ ಅನ್ಸತ್ತೆ."

"ನಿಮ್ಮಿಷ್ಟ. ನಾಳೆ ಪಶ್ಚಾತ್ತಾಪಪಡಬೇಡಿ. ಬದುಕು ಎಂದಿಗೂ ನೇರವಾದ ರಸ್ತೆ ಅಲ್ಲ."

ತನ್ನ ಬದುಕಿನ ಚಿಂತೆ ಪತಿಗೆ. ಈಗ ಅದು ಹೇಳುವ ಅವಕಾಶವಿಲ್ಲ.

ರಂಗು ಸವರಿದ ಅವಳ ಬೆರಳ ಮೇಲೆ ತಟ್ಟಿದ.

"ನೀವು ನಿಶ್ಚಿಂತರು, ಸೌಭಾಗ್ಯ. ನಮ್ಮಿಬ್ಬರ ಮನೋಭಾವನೆಗಳು ಬೇರೆಯಾಗಿದ್ರೂ, ನನ್ನ ಮನಸ್ಸಿನಲ್ಲಿ ಇಳಿದೋರು ನೀವು. ನಿಮ್ಮನ್ನ ಪ್ರೀತಿಸ್ತೀನಿ, ಪ್ರೇಮಿಸ್ತೀನಿ."

ಉತ್ತರಕ್ಕಾಗಿ ಕಾತರಿಸಿದ. ಕತ್ತಲು ಏರುತ್ತಿದ್ದ ಆಗಸದ ಕಡೆ ಅವಳ ನೋಟ. ಅಲ್ಲಿ ಕಾಣುತ್ತಿದ್ದವಳು ಶರ್ಮಿಳಾ!

"ನಿಮ್ಮನ್ನ ಪ್ರೇಮಿಸ್ತೀನಿ ಅಂತ ನಿಮ್ಮ ಪೋಷಕನಿಗೆ ನಾನೇ ಧೈರ್ಯವಾಗಿ ಹೇಳ್ತೀನಿ...." ಉತ್ತೇಜಿಸುವಂತೆ ನುಡಿದ.

ಹಿಮದ ಹನಿಗಳಿಗೆ ಸಿಕ್ಕವಳಂತೆ ಮೈ ಅದುರಿಸಿದಳು.

"ಅದು ಮಾತ್ರ ಮಾಡ್ಬೇಡಿ. ಹಾಗೆ ಮಾಡ್ತೀನಿ ಅಂದ್ರೆ ನಿಮ್ಮ ಜೊತೆಗೆ ಬರೋದಿಲ್ಲ ನಾಳೆಯಿಂದ" ಬಿರುಸಿನಿಂದ ಉಲಿದಳು.

"ಸರಿ, ಹಾಗೆ ಮಾಡೋದಿಲ್ಲ. ನಿಮ್ಮ ಉತ್ತರಕ್ಕೆ ಕಾಯ್ತೀನಿ" ಅವನ ಉತ್ಸಾಹ ಅಡಗಿತ್ತು.

"ಮನೆಗೆ ಹೋಗೋಣ"

ಆಟೋ ಹಿಡಿದು ಅವಳ ಸೂಚನೆಯಂತೆ ಮನೆಗೆ ಅರ್ಧ ಮೈಲಿ ದೂರಕ್ಕೆ ಇಳಿದರು.

ನಸುಗತ್ತಲೆ ರಸ್ತೆಯಲ್ಲಿ ಇಬ್ಬರು ನಿಧಾನವಾಗಿ ನಡೆದರು. ಒಬ್ಬರಿಗೊಬ್ಬರು ಒತ್ತಾಗಿ ಮೆಲು ನಗೆಯ ಸಂಭಾಷಣೆಯಲ್ಲಿ ಹೆಜ್ಜೆ ಬೆಳೆಸಿದರು. ಚೆಂದದ ಮಾತು ಬಂದಾಗ ಅವಳ ಕೈ ಹಿಡಿದು ಜಗ್ಗುತ್ತಿದ್ದ. ಅವಳು ಮೋಹಕವಾಗಿ ನಗುತ್ತಿದ್ದಳು. ಮಧ್ಯೆ ಅವಳು ತೂರಾಡಿದಾಗ ಅವಳನ್ನು ಎದೆಗೆ ಅಪ್ಪಿ ಹಿಡಿದು ಆಪ್ಯಾಯವಾದ ಸೊಂಪು ತಲೆಯನ್ನು ನೇವರಿಸುತ್ತಿದ್ದ.

ಇಬ್ಬರಿಗೂ ತಮ್ಮನ್ನು ವೀಕ್ಷಿಸುತ್ತಿದ್ದ ವ್ಯಕ್ತಿ ಕಾಣಿಸಲಿಲ್ಲ.

ದೀಪದ ಕಂಬದ ಪಕ್ಕದಿಂದ ಅವರಿಬ್ಬರ ನಲಿವು, ನಡಿಗೆಯನ್ನು ಉಸಿರುಕಟ್ಟಿ ದಿಗ್ಭ್ರಮೆಗೊಂಡು ನೋಡುತ್ತಾ ನಿಂತಿದ್ದ ಕಾರ್ತೀಕ !

## ೭

ಕಾರ್ತೀಕ ಸ್ಟುಡಿಯೋಗೆ ಹೋಗಿದ್ದವನು ಅಲ್ಲಿನ ಕೆಲಸ ಎರಡು ದಿನಗಳವರೆಗೆ ರದ್ದಾದುದನ್ನು ಅರಿತು ಮನೆಗೆ ಹಿಂತಿರುಗಿದ್ದ. ಸೌಭಾಗ್ಯ ಸಂಗೀತ ಶಾಲೆಯಿಂದ ಬಂದಿರಲಿಲ್ಲ. ನಿನ್ನೆಯ ರಾತ್ರಿಯಿಂದ ಅವಳು ಹೊಸ ನೋಟದ ಹೆಣ್ಣು! ಶಾಲೆಯ ಬಳಿಯೇ ಅವಳನ್ನು ಕಂಡು ಚಕಿತಗೊಳಿಸಲು ಜೇಬಿನಲ್ಲಿಟ್ಟಿದ್ದ ಕಾಣಿಕೆಯನ್ನು ಮುಟ್ಟಿ ಕಾತರದಿಂದ ತೆರಳಿದ.

ಅಗ್ಗದ ಬೆಲೆಯ ಆಕರ್ಷಕ ಕಾಣಿಕೆ. ತಲೆಗೂದಲನ್ನು ಕತ್ತಿನ ಹಿಂಬದಿಯಲ್ಲಿ ಬಿಗಿಸುವ ಚಿಟ್ಟೆಯಾಕಾರದ ಹರಳಿನ ಕ್ಲಿಪ್. ಅದು ಹಿಡಿಸಿತೆಂದು ಅವಳ ಕಣ್ಣುಗಳಿಂದ ಚಿಮ್ಮುವ ಪ್ರೇಮದ ಕಿರಣಗಳ ಕಲ್ಪನೆ ಮಾಡಿಕೊಳ್ಳುತ್ತ ಬಂದ. ನಾಲ್ಕರ ಇಳಿ ಬಿಸಿಲಿನಲ್ಲಿ ಸಪ್ತವರ್ಣ ಸಂಗೀತ ಶಾಲೆಯ ಫಲಕದ ಕೆಂಪು ಬರಹ ಕಣ್ಣಿರಿಯುತ್ತಿತ್ತು. ಸೌಭಾಗ್ಯ ಶಾಲೆಗೆ ಬಂದಿರಲಿಲ್ಲ.

ಚಿತ್ರ ನಿರ್ದೇಶಕನನ್ನು ನೆನೆಸಿಕೊಂಡು ಫ್ರೇಜರ್ ಟೌನ್ ದಿಕ್ಕಿಗೆ ಹೊರಟಾಗ ಪಾರ್ಕ್ ಬೆಂಚಿನ ಮೇಲೆ ಕನಕಾಂಬರದ ರಂಗಿನ ಸೇರೆಯುಟ್ಟ ಹೆಣ್ಣು ಕಂಡಿತು! ಪಾರ್ಕಿನ ಮೂಲೆಯಲ್ಲಿ ಆಟೊ ನಿಂತಿತು. ಅವಳ ಪಕ್ಕದಲ್ಲಿ ನಿಂತ ನೀಲಿ ಪ್ಯಾಂಟ್, ಕೆಂಪು ಷರಟಿನವ ನೋಟಕ್ಕೆ ಅಡ್ಡ ಬಂದಿದ್ದ. ಸೌಭಾಗ್ಯ ಇಂತಹ ತಾಣಕ್ಕೆ ಏಕೆ ಬಂದಾಳು? ಅತೀವ ವಿಶ್ವಾಸದಲ್ಲಿ ದಾರಿ ಹಿಡಿದ.

ಮನೆ ಸಮೀಪಿಸುವಾಗ ಸಂಜೆ ಕಂಡ ನೋಟವನ್ನು ಕಣ್ಣುಗಳಿಂದ ನಂಬಲಸಾಧ್ಯ. ಹೃದಯ ಸಹಿಸಲಶಕ್ಯ!

ಸುಧಾಕರನೊಂದಿಗೆ ನಲಿಯುತ್ತಾ ನಡೆದ ಸೌಭಾಗ್ಯ!

ಆಘಾತ ತಟ್ಟಿದ ಮರುಕ್ಷಣದಲ್ಲಿ ಸೂಜಿ ಚುಚ್ಚಿದ ತೆಳು ಗೋಲದಂತೆ ನೀಳ

ನಿಟ್ಟುಸಿರುಬಿಟ್ಟ. ಪ್ರಕೃತಿಯ ವಿರುದ್ಧ ದೂಷಣೆ ಏಕೆ?

ಸುಧಾಕರ...ಸೌಭಾಗ್ಯ.

ಇಬ್ಬರದೂ ಒಪ್ಪವಾದ ಯುವ ಜೋಡಿ. ಅವರ ಗುಸು ಮಾತಿನಲ್ಲಿ ಯಾವುದೊ ಹುನ್ನುರು. ದೂರಕ್ಕೆ ಹಾರಿ ಹೋಗಲು ಹವಣಿಸಿದಂತಹ ಚುರುಕು ನಡಿಗೆ. ಪ್ರಣಯದ ತೇವ ಹತ್ತಿದ ಮುಸಿ ನಗೆ. ಕಾರ್ತೀಕ ಎದೆ ಸವರಿಕೊಂಡ. ಅವಳ ಹೆಜ್ಜೆಯೊಂದಿಗೆ ತನ್ನ ಹೆಜ್ಜೆ ಕೂಡಿಸಲಾರ.

ತಾನು ನಲವತ್ತು.... ಅವಳು ಹದಿನಾರು.

ಅದು ಗಂಡು ಹೆಣ್ಣಿನ ನಡುವೆ ಬಲು ದೊಡ್ಡ ಅಂತರ. ಸೇತುವೆ ಹೂಡಲಾಗದ ಕಂದರ.

ಕಾರ್ತೀಕ ಮತ್ಸರದಿಂದ ಅವರನ್ನು ನೋಡಿದ. ಮೈಯಲ್ಲಿ ಕಂಪನದಿಂದ ಮುಳ್ಳುಗಳೆದ್ದವು. ತಾಯಿ ಹೇಳಿದ ಮಾತು ನಿಜ. ಸೌಭಾಗ್ಯಳ ಬದುಕಿನಲ್ಲಿ ತಿರುವು ಕಂಡಿದೆ. ತಿರುವು ತೋರಿದವನು ಪಿಯಾನೊ ವಾದಕ ಸುಧಾಕರ. ಅವರಿಬ್ಬರ ಹಾದಿಯಲ್ಲಿ ಈಗ ಅಡ್ಡಿ ತಾನು!

ಬರಹಗಾರ ಹಣೆಗೆ ಬೆರಳು ತಟ್ಟಿದ. ಸಾಮಾನ್ಯ ಹುಡುಗಿಗೆ ಸೋತು. ಅವಳ ತಾಯಿಗೆ ಕೊಟ್ಟ ಮಾತಿಗೆ ಕಟ್ಟುಬಿದ್ದು, ತಂದೆಯ ಬೆದರಿಕೆಗೆ ಮಣಿದು, ಮದುವೆಯ ಗಾಣಕ್ಕೆ ತಲೆ ಕೊಟ್ಟ ಮೂರ್ಖ. ಸೌಭಾಗ್ಯಳ ಬದುಕಿನಲ್ಲಿ ಆಸಕ್ತಿ ತುಂಬಲು ಅವಳನ್ನು ಸಂಗೀತ ಶಾಲೆಗೆ ಸೇರಿಸಿದ್ದು ತನಗೇ ಕುತ್ತು ಬಂತು.

ಸೌಭಾಗ್ಯಳ ತಪ್ಪಿಲ್ಲ. ಅವಳ ಹೃದಯ, ವಯಸ್ಸು ತರುಣ ಗೆಳೆಯನನ್ನು ಹುಡುಕಿದೆ. ತನಗೆ ಪ್ರಶ್ನಿಸುವ ಹಕ್ಕಿಲ್ಲ. ಪತಿಯೆಂಬ ಧೋರಣೆ ಅಂತಹ ಹಕ್ಕು ಸ್ಥಾಪಿಸಲು ಹೊರಟೀತು. ತಗ್ಗಿಗೆ ಹರಿಯುವ ನೀರಿನ ಪ್ರಕೃತಿಗೆ ಪ್ರಶ್ನೆ ಎಂತು?

ಹಿಂದಿನ ರಾತ್ರಿ ಅವಳ ಯೌವನದ ಮೇಲೆ ತಾನು ನಡೆಸಿದುದು ಕಿರುದಾಳಿ! ಅವಳು ತಳೆದಿರುವ ಕೃತಜ್ಞತೆಯ ಕ್ಷೇತ್ರದಲ್ಲಿ ತನ್ನ ಅತಿಕ್ರಮ ಪ್ರವೇಶ!....

ಕಾರ್ತೀಕ ಜೇಬಿನಿಂದ ಎಳೆದ ಕಾಣಿಕೆಯನ್ನು ದೂರಕ್ಕೆ ತೂರಲು ಕೈ ಎತ್ತಿ ಮತ್ತೆ ಸಹನೆಯಿಂದ ಜೇಬಿಗೆ ಸೇರಿಸಿ ಹೆಜ್ಜೆ ಹಾಕಿ ಮನೆ ಸೇರಿದ. ಸೌಭಾಗ್ಯ ಇನ್ನೂ ಹಿಂತಿರುಗಿರಲಿಲ್ಲ. ಎರಡು ಪತ್ರಗಳು ಮೇಜಿನ ಮೇಲಿದ್ದವು. ಚಿತ್ರ ಕಥೆಯೊಂದಕ್ಕೆ ಸಲಹೆ ನೀಡಲು ಮಂಗಳೂರಿಗೆ ಬರಲು ಆಹ್ವಾನ. ಎರಡನೆಯ ಕಾಗದ ತೆಗೆಯುವುದರಲ್ಲಿ ಸೌಭಾಗ್ಯ ಬಂದಳು.

ಅವಳ ಮುಖ ನಿರುಕಿಸಿ ಕೈಗಡಿಯಾರಕ್ಕೆ ಓರೆ ನೋಟ ಹಾಕಿದ.

“ಮಾತಾಡಬೇಕೂಂತ ಕಾದಿದ್ದೆ. ಹೊತ್ತು ಮಾಡಿಬಿಟ್ಟೆ.

ಹಾಗೆ ಗಡುಸಾಗಿ ಹೇಳುವಾಗ ಅವನ ಒಳ ಕಣ್ಣುಗಳ ಮುಂದೆ ಸುಧಾಕರ ನಿಂತಿದ್ದ. ಕೋಪ, ಮತ್ಸರ ಉಸಿರಾಟದಲ್ಲಿ ಸ್ಪಷ್ಟವಾಗಿತ್ತು. ತನ್ನನ್ನೇ ನೋಡಿಕೊಂಡ. ತಾನು ಸೌಭಾಗ್ಯಳ ಜೈಲರ್! ಹಾಡುವ ಹಕ್ಕಿಯನ್ನು ಪಂಜರದಲ್ಲಿ ಸಾಕಿದ್ದಾಗಿದೆ. ಹಕ್ಕಿ ವಶಕ್ಕೆ ಬಂದಿಲ್ಲ. ವಶಕ್ಕೆ ಬಂದಂತೆ ಕಂಡರೂ ಅದಕ್ಕೆ ಹಾರಿ ಹೋಗುವ ಹಂಬಲ.

ಛೇ, ಕೆಲಸು ಯೋಚನೆ. ವಶದಲ್ಲಿರುವ ಹಕ್ಕಿಯನ್ನು ತಾನೇ ಬದಿಗಿಟ್ಟಿರುವೆ.

ಅವಳ ಮನಃಪಟಲದ ಮೇಲೆ ನಿಂತಿದ್ದವಳು ಶರ್ಮಿಳಾ! ಸ್ವಾಭಾವಿಕ ಈರ್ಷ್ಯೆ ಮೆಲ್ಲನೆ ಹೆಡೆ ಎತ್ತಿತು. ಎರಡು ಹೆಣ್ಣುಗಳ ನಡುವೆ ಆಟ ಹೂಡಿರುವ ಪತಿ!

"ಹೌದು, ಸ್ವಲ್ಪ ಹೊತ್ತಾಗಿಬಿಡ್ತು. ಹೇಳಿ ಅದೇನು ಅಂತ."

ಅಧಿಕಾರಿಯ ಮುಂದೆ ನಿಂತ ಕಾರಕೂನನ ಮಾತಿನಂತಿತ್ತು. ಅದರಿಂದ ಅವನ ಉಸಿರೇರಿತು. ಹೆಂಡತಿಯ ಮೃದುತ್ವ, ವಿಧೇಯತೆ ಕನಸಿನಲ್ಲಿ ಕಂಡಂತಿದೆ. ಅವಳ ಮುಖ ನೋಡದೆ ದೃಢ ಗಂಭೀರತೆಯಲ್ಲಿ ನುಡಿದ.

"ನನ್ನಿಂದ ನ್ಯಾಯ ದೊರೆತಿಲ್ಲ ಅನ್ನಿಸಿರಬೋದು. ನಿನಗೆ ನನ್ನಿಂದ ಬಿಡುಗಡೆ ಬೇಕಾದರೆ, ನಮ್ಮ ಮದುವೆ ರದ್ದಾಗಬೇಕು ಅನ್ನಿಸಿದರೆ ಧೈರ್ಯವಾಗಿ ಹೇಳಬೋದು. ಹೇಳೋದಿಕ್ಕೆ ಹಿಂಜರಿಯಬೇಕಾಗಿಲ್ಲ." ಅವನ ಉಸಿರು ಕಟ್ಟಿತು.

"ಹುಂ" ಸೊರಗಿತ್ತು ಬಾಲೆಯ ಸ್ವರ.

ಅಪ್ರತಿಭನಾದ ಕಾರ್ತೀಕ. ಅವಳಿಂದ ಭೀತಿಯ ಉದ್ಗಾರ, ಕಳಕಳಿಯ ಯಾಚನೆ ನಿರೀಕ್ಷಿಸಿದವನು ಸೋಲಿನ ಕೊನೆ ಮೆಟ್ಟಿಲಿಗೆ ಜಾರಿ ಬಿದ್ದ.

ಉಸಿರು ಹೊರಬಿತ್ತು. ಅವಳ ಮುಖದ ಮುಗ್ಧತೆ ಕ್ಷಣದಲ್ಲಿ ಅವನ ಭಾವನೆ ಕರಗಿಸಿತು. ಪತಿಯನ್ನು ನೋಯಿಸಲು ಇಚ್ಛಿಸದೆ, ಭೀತಿಯಿಂದ ಮೊಟಕಾಗಿ ಪ್ರತಿಕ್ರಿಯೆ ಸೂಚಿಸಿದ ನಿಷ್ಠಾವಂತ ಪತ್ನಿ! ಈವರೆಗೆ ಪಡೆದಿರುವುದನ್ನು ತೀರಿಸಲಾಗದ ಋಣಭಾರದ ಪ್ರದರ್ಶನ. ಸೂರ್ಯ ರಶ್ಮಿ ಗ್ರಹಿಸಿ ಸೌರಭ ನೀಡುವ ಪುಷ್ಪ, ಸೂರ್ಯನವರೆಗೆ ಅದನ್ನು ಮುಟ್ಟಿಸಲಾರದು.

ಅವಳ ಕೈ ಹಿಡಿದ.

"ನೀನು ಕಟ್ಟುಪಾಡಿನಲ್ಲಿದ್ದೀಯ ಅಂತ ತಿಳೀಬೇಡ. ನಿನಗೆ ಯೋಚಿಸೊ ಶಕ್ತಿ ಬಂದಿದೆ. ತೀರ್ಮಾನ ತೆಗೆದುಕೊಳ್ಳೊ ಹಕ್ಕಿದೆ."

ಒಳ ಕಣ್ಣುಗಳ ಮುಂದೆ ನಿಂತ ಸುಧಾಕರ ಸರಿಯಲಿಲ್ಲ. ದ್ವೇಷ ತಿರಸ್ಕಾರಗಳಿಂದ ಬಿಡುಗಡೆ ಹೊಂದಲು ತಾನು ದೇವತಾ ಮನುಷ್ಯನಲ್ಲ. ವ್ಯಕ್ತಿಗಳ ರಾಗ, ದ್ವೇಷ, ವೈಪರೀತ್ಯಗಳನ್ನು ಚಿತ್ರಿಸಬಲ್ಲ ಬರಹಗಾರ. ಅವುಗಳಲ್ಲಿ ಹಲವು ದೋಷಗಳು

ತನಗೂ ಸೊತ್ತುಗಳು.

ನೊಂದ ಮುಖ ಎತ್ತಿದಳು.

"ಅರ್ಥ ಆಯ್ತು...."

ಅವಳಿಗೆ ಅರ್ಥವಾದುದು ಅಷ್ಟೆ. ಕಾರ್ತೀಕನಿಗೆ ತನ್ನಿಂದ ಬಿಡುಗಡೆ ಹೊಂದುವ ಇಚ್ಛೆ. ಶರ್ಮಿಳಾಳನ್ನು ಪಡೆಯುವ ಉತ್ಕಟ ಆಸೆಯಲ್ಲಿ ಹಿಂದಿನ ರಾತ್ರಿ ತನಗೆ ಒಂದು ಅಡ್ಡಾದಿಡ್ಡಿಯ ಕನಸು ತೋರಿದ. ಈಗ ಮೆಲ್ಲನೆ ಮನಸ್ಸು ಬಿಚ್ಚುತ್ತಿದ್ದಾನೆ.

"ನಾಳೆ ಮಂಗಳೂರಿಗೆ ಹೋಗ್ತೀನಿ."

ಮಾತು ಮುಗಿಸುವ ಭಂಗಿಯಲ್ಲಿ ನುಡಿದ.

"ಮೀನಾಕ್ಷಿಯ ಅಣ್ಣ ಶನಿವಾರ ಪಾರ್ಟಿಗೆ ಬರಹೇಳಿದ್ರು. ನಾವಿಬ್ರೂ ಅದಕ್ಕೆ ಹೋಗೋದು ಅಂತ ನೀವೇ ಒಪ್ಪಿದ್ರಿ..."

ಸಣ್ಣ ಯಾಚನೆಯ ಧ್ವನಿಯಲ್ಲಿ ನೆನಪು ಮಾಡಿಕೊಟ್ಟಳು.

"ಅವತ್ತು ಇಲ್ಲಿದ್ರೆ ಹೋಗೋಣ."

ಅವಳನ್ನು ಆಪಾದಮಸ್ತಕ ನೋಡಿದ. ಚಿಂತಿತ ಕಣ್ಣುಗಳು ಅವು. ತಲೆಯಲ್ಲಿ ರಾಗ ಗುಂಗರಿಯಿತು.

'ತಲೆಯಲಿ ಒಯ್ದಳು ಗುಲಾಬಿ ಹೂವ.

ಉಳಿಸಿಹೋದಳು ಮುಳ್ಳು ಕಾಂಡವ'

ಎರಡು ಪಕ್ಷಿಗಳ ಹಾಡಿನಿಂದ ತನ್ನನ್ನು ಸೆರೆ ಹಿಡಿದ ಹಾರಂಗಿ ಮಡಿಲಿನ ಮುಗ್ಧ ಬಾಲೆ. ವಯಸ್ಸಿಗೆ ಒಪ್ಪುವ ಸಂಗಾತಿಯನ್ನು ಪಡೆಯಲು ಹವಣಿಸಿರುವ ಸುಧಾರಿತ ಹೆಣ್ಣು.

ಇವರಿಬ್ಬರಲ್ಲಿ ನಿಜವಾದ ಸೌಭಾಗ್ಯ ಯಾರು?

ನಿಧಾನವಾಗಿ ಮೆಟ್ಟಿಲು ಇಳಿದ. ಅವಳು ಮೇಲಿನ ತುದಿಯಲ್ಲಿ ನಿಂತಳು. ಎದೆ ಬಾರಿಸಿತು. ತಾಯಿಯೊಂದಿಗೆ ಅವನು ಆಡಬಹುದಾದ ಮಾತಿಗೆ ಕಾತರಿಸಿದಳು. ಬುಲ್ ಬುಲ್ ತರಂಗದ ಶಬ್ದಕ್ಕೆ ಕಾದಳು. ನಿಶ್ಶಬ್ದತೆ ಮಿಸುಗಲಿಲ್ಲ. ಅವನು ಕತ್ತಲಿನಲ್ಲಿ ಎಲ್ಲಿಗೊ ಹೊರಟಿದ್ದ.

ಸೌಭಾಗ್ಯ ತಲೆಯ ಹೊರೆ ಬಿಚ್ಚಿ ನಯವಾಗಿ ಅದನ್ನು ಒತ್ತಟ್ಟು ಹಿಡಿದು ಗಂಟು ಹಾಕಿದಳು. ಕಾರ್ತೀಕನ ಕೋಣೆ ದೀಪ ಹಾಕಿದಾಗ ಕಣ್ಣಿಗೆ ಬಿದ್ದುದು ಮೇಜಿನ ಮೇಲಿನ ಖಾಲಿ ಫೋಟೋ ಸ್ಟ್ಯಾಂಡ್, ಬಲಿತ ಮಿದುಳು ತಟ್ಟನೆ ವಿಷಯ ಅರಳಿಸಿತು. ಚೌಕಟ್ಟಿನಲ್ಲಿ ಕಾರ್ತೀಕ ಹಾಗೂ ಶರ್ಮಿಳಾರ ಜೊತೆಯ ಫೋಟೊ ಇದ್ದು, ತನ್ನ ಆಗಮನದ ನಂತರ ಅದು ಮಾಯವಾಗಿದೆ! ಮತ್ತೆ ಅದೇ ಚಿತ್ರ

ಅದನ್ನು ತುಂಬಲಿದೆ. ಶರ್ಮಿಳಾ ಹಿಂತಿರುಗಿದ್ದಾಳೆ!

ಕಾರ್ತೀಕ ತನ್ನ ಮಡಿಲಿಗೆ ಕಟ್ಟಿ ಹೋದ ಬೆಂಕಿಯ ಮಾತು ಅದು.

"ನಿನಗೆ ನನ್ನಿಂದ ಬಿಡುಗಡೆ ಬೇಕಾದರೆ, ನಮ್ಮ ಮದುವೆ ರದ್ದಾಗಬೇಕು ಅನ್ನಿಸಿದರೆ ಧೈರ್ಯವಾಗಿ ಹೇಳಬೋದು...."

ಭರವಸೆ, ಕುಸಿತಗಳ ಅಲೆಗಳಲ್ಲಿ ಮೇಲು ಕೆಳಗು ತುಯ್ದಾಡಿದವಳಿಗೆ ಎರಗಿ ಬಂದಿದ್ದ ಸಿಡಿಲ ಮಾತು!

ಅಳು ಉಕ್ಕಿ ಬಂತು. ಕಾರ್ತೀಕ ಸದ್ಯಕ್ಕೆ ಬರಲಾರ. ಶರ್ಮಿಳಾ ಮಂಗಳೂರಿನಲ್ಲಿ ಅವನ ಜೊತೆಗೂಡಲು ಅಡ್ಡಿ ಇಲ್ಲ.

ಶನಿವಾರ ಮಧ್ಯಾಹ್ನ ಕಾರ್ತೀಕ ಹಿಂತಿರುಗಿದಾಗ ಅವಳಲ್ಲಿ ಅಚ್ಚರಿ, ಸಂತಸಗಳ ಸಮ್ಮಿಳನ. ದಣಿದು ಬಂದವನ ಮುಖದಲ್ಲಿ ಗಂಭೀರ ನಗೆ ತೇಲುತ್ತಿತ್ತು. ನಗೆಯ ತೇವ, ಶುಷ್ಕತೆಗಳನ್ನು ಅವಳು ಅಳೆಯಲಾಗಲಿಲ್ಲ.

ಪಾರ್ಟಿಗೆ ಹೊರಡಲು ಅವನೇ ಉತ್ಸಾಹ ತೋರಿದ. ಸಣ್ಣ ಹಸಿರು ಹೂಗಳ ಬಿಳುಪು ಪ್ಯಾಂಟ್. ಕುಸುರಿ ಕೆಲಸ ಮಾಡಿದ ಕಂದು ರಂಗಿನ ಜುಬ್ಬಾ ಧರಿಸಿ ಅವಳೊಂದಿಗೆ ಹೊರಬೀಳುವ ಮೊದಲು ತಟ್ಟನೆ ನೆನಪಿಗೆ ತಂದುಕೊಂಡ ಚಿಟ್ಟೆಯಾಕಾರದ ಉಂಗುರವನ್ನು ಅವಳ ಕೇಶಗುಚ್ಛಕ್ಕೆ ಸೇರಿಸಿದ. ಅವಳಲ್ಲಿ ಬತ್ತುತ್ತಿದ್ದ ಆಸೆ, ಭರವಸೆಗಳು ಚಿಲುಮೆಯಂತೆ ಚಿಮ್ಮಿದವು.

* * *

ಚಮೇಲಿ ಗಾರ್ಡನ್ಸ್‌ನಲ್ಲಿ ಮೀನಾಕ್ಷಿಯ ಅಣ್ಣ ಕಮಲಹಾಸ ಹಸಿರು ಹುಲ್ಲಿನ ಹಾಸಿನ ಮೇಲೆ ಇನ್ನೂರು ಮಂದಿಗೆ ಮೈತ್ರಿಕೂಟ ಏರ್ಪಡಿಸಿದ್ದ. ತೋಟದ ಮಧ್ಯದ ಬಂಡೆಗಳು. ಬಿದಿರು ಮಳೆ, ಕಾಲುವೆ, ಕೃತಕ ಗುಡ್ಡಗಳನ್ನು ನೋಡಿ ಸೌಭಾಗ್ಯ ಕಣ್ಣು ಹೊಸಕುತ್ತ ನಿಂತಳು. ಆಹ್ವಾನಿತರು ಆಗಮಿಸತೊಡಗಿದ್ದರು.

ಕಾರ್ತೀಕ ಗಡಿಯಾರ ನೋಡಿಕೊಂಡ. ಪಾರ್ಟಿ ಪ್ರಾರಂಭವಾಗಲು ಇನ್ನೂ ಹದಿನೈದು ನಿಮಿಷ ಉಳಿದಿತ್ತು. ಸಿನಿಮಾ ರಂಗದವನೊಬ್ಬ ಕೈ ಆಡಿಸಿದ.

"ಇನ್ನೂ ವೇಳೆ ಇದೆ, ಸೌಭಾಗ್ಯ. ಸ್ವಲ್ಪ ಮಾತಾಡಿ ಬರ್ತೀನಿ. ನಿನ್ನೊಂದಿಗೂ ಮಾತಾಡಬೇಕು. ಆ ಸ್ಥಳ ಚೆನ್ನಾಗಿದೆ."

ಪೊದೆಗಳ ಆಚೆಯ ದೊಡ್ಡ ಬಂಡೆ ತೋರಿದ. ಶಿಶುವಿನಂತೆ ತಲೆ ಅಲುಗಿಸಿದಳು. ಸಂಗೀತ ಶಾಲೆಯ ಗೆಳತಿಯರು, ಅಧ್ಯಾಪಕರು ಸೇರಿದ್ದ ಕಡೆಗೆ ನಡೆದಳು. ಕಣ್ಣುಗಳು ಸುಧಾಕರನನ್ನು ಅರಸಿದವು. ಪಿಯಾನೊ ವಾದಕ ಅಲ್ಲೆಲ್ಲೂ ಕಾಣಿಸಲಿಲ್ಲ.

"ಮಿಸ್ಟರ್ ಕಾರ್ತೀಕ...ದೊಡ್ಡ ಲೇಖಕರನ್ನು ಭೇಟಿ ಮಾಡಲು ಸಂತೋಷ

ವಾಗುತ್ತದೆ. ನಾನು ಕಮಲಹಾಸ...."

ಚಿತ್ರರಂಗದವರ ಮಾತಿನಿಂದ ಹೊರಬಂದ ಕಾರ್ತೀಕ. ಮೀನಾಕ್ಷಿಯ ಅಣ್ಣ ತನ್ನ ಬಲಿಷ್ಠ ಹಸ್ತಚಾಚಿದ.

"ನನಗೂ ಸಂತೋಷವಾಗಿದೆ, ಮಿಸ್ಟರ್ ಕಮಲಹಾಸ"

ತೆಲುಗು ಧಾಟಿಯಲ್ಲಿ ಕನ್ನಡ ಬಳಸಿದ ಆಜಾನುಬಾಹುವನ್ನು ನಗೆಮುಖದಲ್ಲಿ ನೋಡಿದ ಬರಹಗಾರ ತನ್ನ ಹಸ್ತ ಕೂಡಿಸಿದ.

"ನಿಮ್ಮ ಕಾದಂಬರಿಗಳು ಎಷ್ಟು ದೊಡ್ಡದಾಗಿವೆಯೊ. ನಿಮ್ಮ ಹೃದಯವೂ ಅಷ್ಟೇ ದೊಡ್ಡದು. ನಿಮ್ಮ ಹುಡುಗಿ ಕೈಗೆ ನನ್ನ ತಂಗಿ ಆಹ್ವಾನ ಕೊಟ್ಟಿದ್ದು. ಅಸಡ್ಡೆ ಮಾಡದೆ ಬಹಳ ದೂರ ಬಂದಿದೀರಿ. ನಾನು ಅದೃಷ್ಟವಂತ ಅಂದುಕೊಳ್ತೀನಿ."

ಹಾರ್ದಿಕವಾಗಿ ಭುಜ ಹಿಡಿದ.

ಅವನು ಆಡುತ್ತಿದ್ದ ಮಾತಿನಲ್ಲಿನ ಒಂದೇ ಪದ ಕಾರ್ತೀಕನ ತಲೆಗೆ ಬಾಣದಂತೆ ಹೊಕ್ಕಿತು.

ಹುಡುಗಿ! ಅದರ ಅರ್ಥ ಸೌಭಾಗ್ಯ ತನ್ನ ಸಾಕು ಮಗಳು. ಇಲ್ಲವೆ, ತನ್ನ ಪೋಷಣೆಯಲ್ಲಿನ ಮಗಳ ಸಮಾನಳಾದ ಬಾಲೆ...

ಸೌಭಾಗ್ಯ ತೋಟದ ಪೊದೆಗಳ ಮಧ್ಯೆ ಸುತ್ತಾಡಿದಳು. ಬಂಡೆಗೆ ಸಮೀಪವಾಗಿ ಬಂದಾಗ ಐವತ್ತು ಅಡಿಗಳ ಆಚೆಗೆ ಕಾರ್ತೀಕ ಕಾಣಿಸಿದ. ಎತ್ತರದ ಕಲ್ಲಿನ ಮೇಲೆ ಒಂದು ಕಾಲಿಟ್ಟು ಸಿಗರೇಟು ಹಚ್ಚಿ ಏಕಾಕಿ ಎತ್ತಲೊ ನೋಡುತ್ತಿದ್ದ.

ಅವನ ದಿಕ್ಕಿಗೆ ಹೆಜ್ಜೆ ಇಟ್ಟವಳು ನಿಧಾನವಾಗಿ ಹೋಗಲು ನಿಶ್ಚಯಿಸಿದಳು. ಐದು ದಿನಗಳ ಹಿಂದಿನ ಗೊಂದಲ, ಉದ್ರೇಕ ಅವಳಿಂದ ಇನ್ನೂ ಮಾಯವಾಗಿರಲಿಲ್ಲ. ಪೊದೆಯ ಪಕ್ಕದ ಆಸನದಲ್ಲಿ ಅವಚಿ ಕುಳಿತಳು. ಕಾರ್ತೀಕ ಅವಳ ದಿಕ್ಕಿನಲ್ಲೇ ಹಾದು ಬರಬೇಕು.

ಕಾರ್ತೀಕ ಅತ್ತ ಬರಲಿಲ್ಲ. ಆ ತಾಣ ಅವನಿಗೆ ಹೊಸದಲ್ಲ. ಬದುಕಿಗೆ ಡೊಂಕು ತೋರಿದ ಪ್ರಸಂಗಗಳ ಬೆಳವಣಿಗೆ ಚಮೇಲಿ ಗಾರ್ಡನ್ಸ್‌ನಲ್ಲೇ ಸಾಗಿದುದು. ಅಲ್ಲೇ ಶರ್ಮಿಳಾ ಅವನನ್ನು ಬಹುತೇಕ ಕಾಣುತ್ತಿದ್ದುದು.

ಗಾಢ ಯೋಚನೆಯಲ್ಲಿ ಮುಳುಗಿದ್ದ ಲೇಖಕ. ಶರ್ಮಿಳಾ ಪ್ರಕರಣವನ್ನು ಹೆಂಡತಿಗೆ ತಿಳಿಸಲೆ? ಮುಂದಿನ ಜೀವನದ ಭಾಗದಲ್ಲಿ ಯಾವ ಪಾತ್ರವನ್ನೂ ವಹಿಸಿದವಳ ವಿಷಯ ಸೌಭಾಗ್ಯಳಿಗೇಕೆ? ತನ್ನ ಬದುಕಿನ ಕಾದಂಬರಿ ಪೂರೈಸಲು ಅತೀವ ವಿಳಂಬ. 'ಮಣ್ಣಿನ ದೋಣಿ' ಮುಗಿಯುವ ಕಾದಂಬರಿಯಲ್ಲ. ನಡುನೀರಿನಲ್ಲಿ ಕರಗುವ ತನ್ನದೇ ಕಥೆ.

ನೀಳವಾಗಿ ಉಸಿರೆಳೆದುಕೊಂಡ. ಲೇಖನದಲ್ಲಿ ಚಿತ್ತತೆ ಉಳಿಯದಂತೆ ಮಾಡಿದ ಎರಡು ಹೆಣ್ಣುಗಳು...ಶರ್ಮಿಳಾ ವಂಚಕಿ. ಸೌಭಾಗ್ಯ ಗೊಂದಲಕ್ಕಿಳಿಸಿದ ಆಟಿಕೆ. ವಂಚಕಿ ಸರಿದುಹೋದ ಮೇಲೆ ಸೇರಿತು ಆಟಿಕೆ. ಎರಡು ಮುಖಗಳ ಆಟಿಕೆ! ಮನೆಯೊಳಗಿನ ಸೌಭಾಗ್ಯ ಹೆಂಡತಿ ಹೆಸರಿನ ಮುಗ್ಧ. ವಿಧೇಯ ಕಿಶೋರಿ. ಮನೆ ಹೊರಗಿನ ಸೌಭಾಗ್ಯ ಗರಿಗೆದರಿದ ಹಕ್ಕಿ.

ಹೃದಯದ ಬಡಿತ ಏರಿತು ಸೌಭಾಗ್ಯಳಿಗೆ. ವಿವೇಚನಾ ಶಕ್ತಿ ಬೆಳೆಯತ್ತಿದೆ. ಅವಳನ್ನು ರಕ್ಷಿಸಿಕೊಳ್ಳಬೇಕು. ತರುಣ ಸುಧಾಕರ ಅವಳ ಬದುಕಿನಲ್ಲಿ ಏರುಪೇರು ಮಾಡುವಂತಿಲ್ಲ.

ಪೊದೆಯ ಪಕ್ಕದಲ್ಲಿ ಅವಚಿ ಕುಳಿತ ಸೌಭಾಗ್ಯಳಿಗೆ ಬಂಡೆಯ ಆಚೆ ಹೆಜ್ಜೆ ಸಪ್ಪಳ ಕೇಳಿಸಿತು. ಪರಿಚಿತ ನಡಿಗೆ ಸದ್ದು. ಅದರ ಹಿಂದೆ ಯಾವುದೋ ಅಪರಿಚಿತ ನಡಿಗೆ! ಉಸಿರು ತಡೆದಳು.

ಅರೆ ನಿಮಿಷದ ತರುವಾಯ ಸಣ್ಣ ಉದ್ಗಾರ ಕೇಳಿಸಿತು.

"ಶರ್ಮಿಳಾ....!"

ಹೆಣ್ಣು ಬಿಕ್ಕಳಿಸಿ ಅಳುವ ಸದ್ದು.

"ಕಾರ್ತೀಕ!....ನಿಲ್ಲಿ......ನಾನು ತಪ್ಪು ಮಾಡ್ದೆ. ನಿಜ ಅದಕ್ಕೆ ಜೀವನವೆಲ್ಲಾ ಅನುಭವಿಸಬೇಕೆ?"

ಸೌಭಾಗ್ಯ ಉಸಿರು ಸರಸರ ಎಳೆದು ಎದ್ದು ನಿಂತಳು. ಪೊದೆಗಳು ಎತ್ತರದ ಬಂಡೆ ಅವಳಿಂದ ನೋಟವನ್ನು ಮರೆ ಮಾಡಿದ್ದವು. ಎದೆ ಒತ್ತಿ ಕಾದು ನಿಂತಳು.

"ನೀನು ಇಲ್ಲಿಗೆ ಬಂದಿದ್ದು ಸರಿಯಲ್ಲ, ಶರ್ಮಿಳಾ!"

ಅವನ ಒರಟು ಧ್ವನಿಯಲ್ಲಿ ನೋವು ಸೇರಿತ್ತು.

ಸೌಭಾಗ್ಯಳ ಮುಷ್ಟಿ ಬಿಗಿಯಾಯಿತು. ಕಾದು ನೋಡಿದರೆ ತೊಡಕುಗಳು ಸಡಿಲಗೊಳ್ಳುವ ಸಂಭವವಿದೆ. ಕಾಲುಗಳು ಕಂಪಿಸಿದವು.

ಶರ್ಮಿಳಾ ಮನ ನಾಟುವಂತೆ ಹೇಳುತ್ತಿದ್ದಳು.

"ನಿಮ್ಮ ಮನಸ್ಸು ನೊಂದಿದೆ. ದೊಡ್ಡ ಲೇಖಕರ ಹೆಸರಿಗೆ ಮಸಿ ಹಚ್ಚಿದೀನಿ. ನಮ್ಮಿಬ್ಬರ ಮಧ್ಯದ ಸಂಬಂಧ ಸರಿಪಡಿಸಿಕೊಳ್ಳೋಣ ಅಂತ ಬಂದೆ. ನಾನು ನೋವು ಅನುಭವಿಸಿಲ್ಲಾಂತ ತಿಳಿದಿದ್ದೀರಾ?"

"ನೀನು ಮಾಡಿದ ತಪ್ಪಿಗೆ ನೋವು ಅನುಭವಿಸಿ ಬಂದಿದೀಯ. ಆಡಿರೊ ದೊಡ್ಡ ಮಾತಿಗೆ ನಮಸ್ಕಾರ."

"ನಿಲ್ಲಿ, ಹಾಗೆ ಹೇಳಿ ನನ್ನ ಕೊಲ್ಲಬೇಡಿ. ನಾನು ಪ್ರದೀಪನಿಂದ ಡೈವೋರ್ಸ್

ಪಡೀತೀನಿ. ನಾವಿಬ್ರೂ ಇದೇ ತೋಟದಲ್ಲಿ ಸುತ್ತಾಡಿದ್ದು ನೆನಪಿಲ್ಲವೆ? ಇಲ್ಲೇ ನಮ್ಮ ಸಂಬಂಧ ಮತ್ತೆ ಸರಿಹೋಗಲಿ..."

ಸೌಭಾಗ್ಯಳ ಹಿಡಿ ಬಿಗಿಯಾಗುತ್ತಿತ್ತು. ಮತ್ತೆ ಸಡಿಲವಾಗುತ್ತಿತ್ತು. ತನ್ನ ಹಾದಿಗೆ ಅಡ್ಡ ನಿಂತ ಹೆಣ್ಣು ವಿಪರೀತವಾಗಿ ಅಪೇಕ್ಷಿಸುತ್ತಿದೆ. ಬದುಕಿಗಾಗಿ ಹೋರಾಟ ನಡೆಸಿದೆ.

ಹೆಜ್ಜೆ ಹೊರಳಿಸಿದಳು ಬಾಲೆ. ಸನ್ನಿವೇಶ ತಿರಸ್ಕಾರ ಹುಟ್ಟಿಸುವಂತಹದಾದರೂ ಕಾಲು ತೆಗೆಯಲಾಗದ ವಿಚಿತ್ರ ಸೆಳೆತ.

ಕಾರ್ತೀಕನ ಉತ್ತರ ಗಂಭೀರವಾಗಿತ್ತು.

"ಹಳೆಯದರ ನೆನಪು ಬೇಡ. ತನ್ನ ಬದುಕು ಕಲ್ಪಿಸಿಕೊಂಡಿದೀನಿ. ಅಲ್ಲಿಗೆ ಪ್ರವೇಶ ಮಾಡ್ಬೇಡ...."

ಅವಳ ಉತ್ತರ ಕೇಳಿಸಲಿಲ್ಲ. ಕಾರ್ತೀಕ ಮುಂದಕ್ಕೆ ಹೆಜ್ಜೆ ಸರಿಸಿರಬೇಕು.

"ಬೇಡಿಕೊಳ್ತಾ ಇದೀನಿ... ನನ್ನ ಕಡೆ ನೋಡಿ."

ನಮ್ಮಿಬ್ಬರಿಗೂ ಮತ್ತೆ ಹುಚ್ಚು ಹಿಡಿಯೋದು ಬೇಡ. ನಿನ್ನ ಗಂಡನ ಜೊತೆ ಹೊಂದಿಕೊ."

ಸೌಭಾಗ್ಯಳ ಉಸಿರು ಭಾರವಾಗಿ ಹೊರಬಿತ್ತು. ಪತಿಯ ಮೇಲೆ ಉನ್ನತ ಅಭಿಪ್ರಾಯ ಮೂಡುವುದರಲ್ಲಿ ಅತ್ತಲಿಂದ ಹತಾಶ ಹೆಣ್ಣಿನ ವಿಕಟ ನಗೆ ಕೇಳಿಸಿತು. ಏಕಾಏಕಿ ಆ ನಗು ನಿಂತಿತು. ಅರೆ ನಿಮಿಷದಲ್ಲಿ ನೀರವತೆ.

"ನೀವು ಗುಟ್ಟಾಗಿ ಮದುವೆ ಆದ್ರಿ ಅಂತ ಕೇಳ್ದೆ. ಏನು ಕಥೆ ಅದು?"

ಅವಳ ಕೇಳಿಕೆಯಲ್ಲಿ ಅಣುಕು ಸ್ಪಷ್ಟವಾಗಿತ್ತು. ಸೌಭಾಗ್ಯ ಹಿಮಗಟ್ಟಿ ನಿಂತಳು.

"ಯಾರು ಹೇಳಿದ್ದು?" ತೀಕ್ಷ್ಣವಾಗಿ ಕೇಳಿದ.

"ಹಾರಂಗಿಯಿಂದ ಸುದ್ದಿ ಬಂತು. ನಿಮ್ಮ ಸ್ನೇಹಿತ ಮಲ್ಲಿಕಾರ್ಜುನ ಏನೂ ಹೇಳ್ಲಿಲ್ಲ. ಬಹುಶಃ ನಿಮ್ಮ ಸೂಚನೆ ಇರಬೋದು, ನಿಜ ತಾನೆ?"

"ನಿಜ"

ಹಿಮದ ಬೊಂಬೆ ಅದುರಿತು. ಪತಿಯಿಂದ ಸೋಲಿನ ಒಪ್ಪಿಗೆ! ಮಲ್ಲಿಕಾರ್ಜುನ ರಹಸ್ಯ ಹಿಡಿದಿಟ್ಟಿದ್ದಾನೆ. ಚುರುಕು ಕಣ್ಣುಗಳ ವಾಚಾಳಿ! ಕ್ಷಣದಲ್ಲಿ ಚಿತ್ರಗಳು ಹಾದು ಹೋದವು.

ಮಳೆಯಿಂದ ಹದಗೆಟ್ಟ ಕುಶಾಲನಗರದ ಸರ್ಕಸ್... ನೀರು ಹಾರಿಸಿ ಓಡಿದ ಟ್ಯಾಕ್ಸಿ... ಗುಡಿಸಲು ಹೊಟೇಲಿನ ಕಾಫಿ... ನಿಶ್ಚಿಂತೆಯಿಂದ ಆ ರಾತ್ರಿ ತನ್ನ ಪಾಡಿಗೆ ಮನೆಗೆ ಹೊರಟ ಮಲ್ಲಿಕಾರ್ಜುನ...ತನ್ನನ್ನು ಮನೆಗೆ ಬಿಡಲು ಹೊರಟ ಕಾರ್ತೀಕನ

ಮೇಲೆ ಸಂಶಯ!...

ಅವನ ಮೌನದ ಲಾಭ ಪಡೆದು ಉಬ್ಬಿದ ಹೆಣ್ಣು ಗತ್ತಿನಲ್ಲಿ ಹೇಳಿತು.

"ಆ ಕತೆಯ ವಿವರ ತಿಳಿಯಬೇಕಾದದ್ದು ನನ್ನ ಕರ್ತವ್ಯ. ವಿಚಾರಿಸೋದಿಕ್ಕೆ ನನ್ನ ಚಿಕ್ಕಮ್ಮನ ಮಗನಿಗೆ ತಿಳಿಸ್ದೆ. ಅದು ನಿಜಾ ಅಂತ ಗೊತ್ತಾಯ್ತು... ನೀವು ಪ್ರಸಂಗವನ್ನ ರಹಸ್ಯವಾಗಿ ಇಟ್ಟಿದ್ರಲ್ಲಿ ಆಶ್ಚರ್ಯ ಇಲ್ಲ. ಹುಡುಗಿ ವಿಷಯದಲ್ಲಿ ಹೇಳೋದಿಕ್ಕೆ ನಿಮಗೆ ನಾಚಿಕೆ!...."

ಮೌನ ನೆಲೆಸಿತು. ಶರ್ಮಿಳಾ ಮುಂದೆ ತನ್ನ ಬಗ್ಗೆ ತುಚ್ಛ. ತುಂಟ ಮಾತು ಆಡುವುದು ನಿಜ.

ಶರ್ಮಿಳಾ ಗೆಲುವಿನ ನಗೆ ಹಾಕಿದಳು.

"ಕಾರ್ತೀಕ, ಎಂಥಾ ಅದ್ಭುತ ಕಥೆ! ಕಾದಂಬರಿಕಾರನ ಲೇಖನಿ ಅಂಥಾ ಕಥೆ ಬರೆಯಲಾರದು. ನಿಮಗೆ ಆಗ ನನ್ನ ಮೇಲೆ ವಿಪರೀತ ಕೋಪ, ತಿರಸ್ಕಾರ ತುಂಬಿದ್ದ ಕಾಲ. ಹೆಣ್ಣಿನ ಮೋಹ ಮೈಯಲ್ಲಿ ಇಳಿದಿತ್ತು. ಹಾರಂಗಿ ಅಣೆಕಟ್ಟಿನಿಂದ ಒಬ್ಬ ಸಣ್ಣ ಹುಡುಗೀನ ರಾತ್ರಿ ಹೊತ್ನಲ್ಲಿ ಕುಶಾಲ ನಗರಕ್ಕೆ ಕರಕೊಂಡು ಬಂದು ಅವಳನ್ನು ಕೆಡಿಸಿದ್ರಿ! ಅವಳ ತಂದೆ ನಿಮ್ಮನ್ನು ಹಿಡಿದು ಆಯುಧ ತೋರ್ಸಿ, ಮಗಳನ್ನ ಮದುವೆ ಆಗೂಂತ ಬೆದರಿಸ್ದ. ನೀವು ಹೆದರಿ ಸೋಲಲೇಬೇಕಾದ ಪರಿಸ್ಥಿತಿ...."

ಸೌಭಾಗ್ಯಳಿಗೆ ಕಿರಿಚುವಂತಾಯಿತು. ಬಾಯಿಗೆ ಕೈ ಒತ್ತಿ ವಿಕಾರ ಭಾವಗಳನ್ನು ಶಕ್ತಿ ಮೀರಿ ತಡೆದಳು.

ಕಾರ್ತೀಕ ಅತೀವ ನೋವಿನಲ್ಲಿ ಮಾತು ತೆಗೆದ.

"ಹಾಗಲ್ಲ, ಶರ್ಮಿಳಾ. ನೀನು ಕೇಳಿರೋದು ತಪ್ಪು ಸಂಗತಿ..."

"ಸಂಗತಿ ಏನಾದ್ರು ಆಗಿರಲಿ. ಆ ಮನುಷ್ಯ ನಿಮ್ಮನ್ನ ಹೆದರಿಸಿ ಮಗಳ ಮದುವೆ ಮಾಡಿದ್ದು ನಿಜ ತಾನೆ?"

ನಿಶ್ಚಯತೆಯಲ್ಲಿ ಕೇಳಿದಳು.

"ನಿಜ" ಕಾರ್ತೀಕ ರೋಸಿ ಹೇಳಿದ.

ಚರಚರ ಹೆಜ್ಜೆ ಸರಿತ ಕೇಳಿಸಿತು. ಶರ್ಮಿಳಾ ಸೋತವನ ಸಮೀಪಕ್ಕೆ ಬಂದಿರಬೇಕು.

ಸೌಭಾಗ್ಯಳಿಗೆ ಅನಿರೀಕ್ಷಿತವಾಗಿ ಸತ್ಯದ ಅರಿವಾಗಿತ್ತು. ಎರಡು ತಿಂಗಳ ಹಿಂದೆ ಮದುವೆಯ ಹೆಸರಿನಲ್ಲಿ ಜರುಗಿದ ಕರಾಳ ಪ್ರಕರಣದ ಕತ್ತಲಿನ ಮೇಲೆ ಚೆನ್ನಾಗಿ ಬೆಳಕು ಹರಡಿತ್ತು.

ಶರ್ಮಿಳಾಳ ಸ್ವಾರ್ಥದಲ್ಲಿ ಕಾರ್ತೀಕ ನಿಸ್ಸಹಾಯಕತೆಯಲ್ಲಿ ತಪ್ಪೆಣಿಸುವುದೇಕೆ? ವಿವಾಹದ ಹಿನ್ನೆಲೆಯ ಚಿತ್ರ ಇದೀಗ ಕಾಣುತ್ತಿದೆ.

ಸೌಭಾಗ್ಯ ತನಗೇ ಅರಿವಿಲ್ಲದೆ ಹೆಜ್ಜೆ ಹಾಕಿದಳು.

ಶರ್ಮಿಳಾ ಹೊರಗೆಡಹಿದ ಸಂಗತಿ ಪೊಳ್ಳಲ್ಲ. ಪಪ್ಪ ಬರ್ನಾರ್ಡ್ ಧೂರ್ತ. ಅವನ ವರ್ತನೆ ಚೆನ್ನಾಗಿ ಬಲ್ಲೆ. ಆ ರಾತ್ರಿ ಹೂವರ್ಚೆ ಮರದಡಿ ಕಾರ್ತೀಕನೊಂದಿಗೆ ಕುಳಿತ ತನ್ನನ್ನು ಕಂಡು ಟ್ರಕ್‌ನಲ್ಲಿ ತನ್ನನ್ನು ಸಾಗು ಹಾಕಿದ ಮೇಲೆ ಪಪ್ಪ ದುಷ್ಕಾರ್ಯ ಮಾಡಿರಲು ಸಾಧ್ಯ. ಕಾರ್ತೀಕ ಮೃದು ಸ್ವಭಾವದ ವ್ಯಕ್ತಿ. ಅವನ ಬೆದರಿಕೆಗೆ ಮಣಿದು ತನ್ನನ್ನು ಬಲಾತ್ಕಾರದಿಂದ ಕುತ್ತಿಗೆಗೆ ತೂಗಿ ಹಾಕಿಕೊಂಡ. ಮಮ್ಮಿಗೆ ಕೊಟ್ಟ ಮಾತು, ಪಪ್ಪನ ಬೆದರಿಕೆ ಅವನನ್ನು ಅಗಾಧ ಕಂದರಕ್ಕೆ ತಳ್ಳಿದವು!

ಕಾರ್ತೀಕ ತನ್ನ ಕಂಠದಲ್ಲಿ ಆಸಕ್ತನಾಗಿ, ಸೊಂಪು ತಲೆಯ ಸಿರಿಗೆ ಸೋತು ಮದುವೆ ಆದನೆಂಬುದು ತನ್ನ ಈವರೆಗಿನ ಚಪಲದ ಕಲ್ಪನೆ. ಅದರೊಂದಿಗೆ ಚಿಗುರಿದ ಪ್ರೇಮದ ಕನಸು....

ಚಮೇಲಿ ಗಾರ್ಡನ್ಸ್ ಕೂಟದಲ್ಲಿ ನಗೆ ತರಂಗ ಎದ್ದಿತ್ತು. ಕಾರ್ತೀಕ ಹಾಗೂ ತಾನು ಕೂಟದಲ್ಲಿ ಪ್ರಮುಖ ಅತಿಥಿಗಳು! ಪಾರ್ಟಿಗೆ ಬಂದು ಅದರಲ್ಲಿ ಭಾಗವಹಿಸದೆ ಅದೇ ಆವರಣದಲ್ಲಿ ದೂರ ನಿಂತ, ಸೌಜನ್ಯಗೆಟ್ಟ ಜೋಡಿ.

ಪತಿಯೊಂದಿಗೆ ಸುಗಮ ಸಂಜೆ ಕಳೆಯಲು ಬಂದವಳು ತನಗೆಲ್ಲೂ ಸಂತಸ, ಆಸರೆ ಇಲ್ಲವೆಂಬಂತೆ ಓಡು ನಡಿಗೆ ಹಾಕಿದಳು.

* * *

ಕಾರ್ತೀಕ ರಾತ್ರಿ ಮನೆಗೆ ಬಂದಾಗ ಹನ್ನೊಂದು ಗಂಟೆ ದಾಟಿತ್ತು. ಹತ್ತರ ವೇಳೆಗೆ ಮಲಗುತ್ತಿದ್ದ ಸ್ವರ್ಣಮ್ಮ ಅವನು ಕಣ್ಣೀರಿಸುವಂತೆ ಹಜಾರದ ರೇಡಿಯೊಗ್ರಾಂ ಹಾಕುತ್ತಿದ್ದಳು. ಅನುಭವಿ ಹೆಂಗಸು ಗಡಿಯಾರ ನೋಡಿದ ರೀತಿಯಲ್ಲಿ ಮಗ, ಸೊಸೆಯ ನಡುವೆ ವಿರಸ ನಡೆದಿರಬಹುದು ಎಂಬ ಶಂಕೆ ಚೆನ್ನಾಗಿ ತೋರಿದಳು.

"ಒಟ್ಟಾಗಿ ಇಲ್ಲಿಂದ ಹೋದೋರು ಸಂತೆಯಲ್ಲಿ ದಾರಿ ತಪ್ಪಿದೋರ ಹಾಗೆ ಬೇರೆ ಬೇರೆ ಬಂದ್ರಿ. ಅವಳು ಒಂಬತ್ತಕ್ಕೆ ಬಂದು ಊಟ ಮಾಡದೆ ಕೋಣೆ ಸೇರಿಬಿಟ್ಲು. ವಿಚಿತ್ರ ಹುಡುಗೀನ ತಂದ ಹಾಗಾಯ್ತು..."

ತಾಯಿಯ ಅತೃಪ್ತಿ, ನಿರಾಶೆಯನ್ನು ಮರೆಸುವಂತೆ ಮಗ ಮಾತು ತಿರುವಿದ.

"ನನಗೆ ಸ್ಟುಡಿಯೋದಲ್ಲಿ ಊಟ ಆಗಿದೆ. ಆದ್ರೂ ಇಲ್ಲಿನ ಊಟ ಒಲ್ಲೆ ಅನ್ನೋನಲ್ಲ."

ಎಂದು ವಿನೋದದಲ್ಲಿ ಕಿಚನ್ ಸೇರಿದ. ಇಬ್ಬರ ಮಧ್ಯೆ ನಡೆದಿರಬಹುದಾದ ಘರ್ಷಣೆ ತಿಳಿಯಲೆಂದೇ ಬಹುಶಃ ತಾಯಿ ಅಷ್ಟು ಹೊತ್ತಿನವರೆಗೆ ಎದ್ದಿರುವಳೆಂದು ಬಗೆದ. ಮೌನವಾಗಿ ಊಟ ಮುಗಿಸಿ ಕೋಣೆಯ ಹಾಸಿಗೆಯ ಮೇಲೆ ಕುಳಿತು ಎರಡು ವಾರಗಳಿಂದ ಮರೆತಿದ್ದ 'ಚಿಣಿ ಚಿಣಿ' ವಾದ್ಯ ಎರಡು ನಿಮಿಷ ನುಡಿಸಿದ.

ಪಕ್ಕದ ಕೋಣೆಯ ಸದ್ದಿಗಾಗಿ ಕಿವಿ ಕಾತರಿಸಿತು.

ಮಿಸುಕಾಡದ ನಿಶ್ಶಬ್ದತೆ!

ಎಚ್ಚರವಿದ್ದರೂ ಸೌಭಾಗ್ಯ ಕೋಪಗೊಂಡಿರಬೇಕು.

ಮೇಜಿನ ತೆರೆದ ಖಾನೆಯಿಂದ 'ಮಣ್ಣಿನ ದೋಣಿ'ಯ ಪುಟಗಳನ್ನು ತೆಗೆದು ತಿರುವಿದ. ಸಂಜೆಯಲ್ಲಿ ಚಮೇಲಿ ಗಾರ್ಡನ್ಸ್ ಪಾರ್ಟಿಗೆ ಹೋಗುವ ಬದಲು ಬರೆದ ಎರಡು ವಿಚಿತ್ರ ಪುಟಗಳು. ಅದರಂತೆ ತೋಟದಲ್ಲಿ ಮಾತು ಸಾಗಿರಲಿಲ್ಲ. ಇದೇ ಧಾಟಿಯಲ್ಲಿ ಕಥೆ ಸರಿದರೆ ಅದು ನೀರಸ ಕೃತಿಯಾಗುತ್ತದೆಂದು ಬಲ್ಲ. ಅಂತ್ಯ ಅನಿರ್ದಿಷ್ಟ. ಅದು ಮೊದಲೇ ತಿಳಿಯುವಂತಾದರೆ ಬರಹದಲ್ಲಿ ಶೈಲಿ, ಓಟ, ತಿರುವು ಪ್ರಸಂಗಗಳನ್ನು ಕೂಡಿಸಲು ಸಾಧ್ಯ. ತನ್ನದೇ ಆದ ಕಥೆಗೆ ಅಂತ್ಯ ಏನೆಂದು ಊಹಿಸುವುದು?

ಕಣ್ಣುಗಳು ಪುಟಗಳ ಮೇಲೆ ಹರಿದಾಡಿದರೂ ಕಿವಿಗಳು ಪಕ್ಕದ ಕೋಣೆಯ ನೀರವತೆ ಗಮನಿಸಿ ಅವನ ನೆಮ್ಮದಿ ತಪ್ಪಿಸಿದವು.

ಶರ್ಮಿಳಾ ತಲೆ ತುಂಬಿ ನಿಂತಳು. ಅವಳಿಗೆ ತನ್ನನ್ನು ಗೆಲ್ಲುವ ಸತತ ಯತ್ನ. ಮೊಸಳೆ ಕಣ್ಣೀರು ತನ್ನ ನಿರ್ಧಾರ ಕದಲಿಸದು. ಆ ಪ್ರಣಯದ ಕನ್ನಡಿ.

ಅದರ ಹಿಂದೆಯೇ ಸೌಭಾಗ್ಯಳ ನಿಚ್ಚಳ ಚಿತ್ರ. ಬಂಡೆಯ ಪಕ್ಕದಲ್ಲಿ ಅವಳಿಗೆ ಬರಲು ಹೇಳಿ ಪಾರ್ಟಿಯ ತಾಣದಲ್ಲಿ ಒಂದು ಸುತ್ತ ಹಾಕಿ ಬರುವುದರಲ್ಲಿ ಸಿಡಿಲಿನಂತೆ ಎರಗಿ ಬಂದಳು ಶರ್ಮಿಳಾ. ಅವಳಿಂದ ಬಿಡುಗಡೆ ಹೊಂದಿರುವುದರಲ್ಲಿ ಸೌಭಾಗ್ಯ ಇರಲಿಲ್ಲ. ತನ್ನ ದಾರಿ ಕಾದು ಬೇಸತ್ತು ವ್ಯಗ್ರ ಮನಸ್ಸಿನಲ್ಲಿ ಹೊರಟು ಹೋದಳು. ಪಾರ್ಟಿಯ ಗುಂಪಿನಲ್ಲಿ ಅವಳು ಬರಲಿಲ್ಲ. ನಂತರ ಅದು ತನಗೂ ಬೇಡವಾದ ಕೂಟ. ಸ್ಟುಡಿಯೋಗೆ ಹೊರಟಾಯ್ತು. ಸೌಭಾಗ್ಯಳೊಂದಿಗೆ ಮಾತಾಡಬೇಕೆಂದಿದ್ದ ವಿಷಯಗಳು ತನ್ನಲ್ಲೇ ಉಳಿದಿವೆ. ಶರ್ಮಿಳಾ ಕಥೆ ಅವಳಿಗೆ ತಿಳಿಸಿ ಹಿಂದಿನ ಪ್ರಣಯ ದುರಂತದ ನಾಟಕಕ್ಕೆ ಪರೆದು ಎಳೆದು ನಿಶ್ಚಿಂತನಾಗ ಬೇಕಾಗಿತ್ತು. 'ಮಣ್ಣಿನ ದೋಣಿ'ಯ ಮುಂದಿನ ಪರಿಚ್ಛೇದಗಳು ಅದರಿಂದ ಬದಲಾವಣೆ ಪಡೆಯಬೇಕು!....

ಕಾರ್ತೀಕ ಕೋಣೆ ದೀಪ ಆರಿಸಿ ಹೊರಬಂದ. ಕತ್ತಲು ತುಂಬಿದ ವರಾಂಡದಲ್ಲಿ ಐದು ನಿಮಿಷ ನಿಂತ. ಆರು ದಿನಗಳ ಹಿಂದಿನ ರಾತ್ರಿಯಲ್ಲಿ ಅಲ್ಲಿಯೇ ಸೌಭಾಗ್ಯಳೊಂದಿಗೆ ನಿಂತು ಅವಳಲ್ಲಿ ಬದುಕಿನ ಆಸೆ ಚಿಗುರಿಸಿದ್ದ. ತಿಳಿ ಗಾಳಿ ತಟ್ಟಿ ಮಲಗಿಸುವಂತೆ ನವಿರಾಗಿ ಬೀಸಿತು. ಯಾವುದೊ ಹೂವಿನ ಸವಿಕಂಪು ಅದರೊಂದಿಗೆ ನುಸುಳಿ ಬಂತು.

ಸೌಭಾಗ್ಯ ಹಾಗೂ ತನ್ನ ನಡುವಿನ ಕಂದರಕ್ಕೆ ಸೇತುವೆ ಕಟ್ಟಲಾಗದೆಂಬ ಭಾವನೆ

ಹೇಗೆ ಬಂತು? ಕಂದರ ಸೃಷ್ಟಿಯಾದುದು ಹೇಗೆ? ಹೆಂಡತಿಯ ಹೆಸರಿನಲ್ಲಿ ಆಜೀವಪರ್ಯಂತ ಅವಳು ಈ ಮನೆಯಲ್ಲಿ ಗೋಡೆಯಾಚೆ ಉಳಿಯುವುದೆ?

ಯೌವನ ಅರಳುತ್ತಿರುವವಳ ಮೈ ಮನಗಳಲ್ಲಿ ಆಸೆ, ಆಕಾಂಕ್ಷೆಗಳ ಸುಳಿಗಾಳಿ ಎದ್ದಿದೆ. ಅಂತಹದೇ ಸುಳಿ ಇಪ್ಪತ್ತು ವರ್ಷಗಳ ಹಿಂದೆ ತನ್ನಲ್ಲಿ ಉದಯಿಸಿದಾಗ ಅದು ಸಿದ್ಧಾಂತಗಳ ಒತ್ತಡಕ್ಕೆ ಸಿಕ್ಕಿ ಮುದುಡಿ ಮಲಗಿತ್ತು. ಮತ್ತೆ ಹತ್ತೊಂಬತ್ತು ವರ್ಷಗಳ ನಂತರವೇ ಆ ಸುಳಿ ಬಿರುಗಾಳಿಯಾದದ್ದು. ಶರ್ಮಿಳಾ ಬಿರುಗಾಳಿಯಲ್ಲ, ಚಂಡಮಾರುತ!

ಛೇ, ನೆನಪಿನಿಂದ ಸರಿಯದ ಶರ್ಮಿಳಾ! ಕಾರ್ತೀಕ ವಾಸ್ತವ ಲೋಕಕ್ಕೆ ಬಂದ. ಇಬ್ಬರನ್ನು ಬೇರ್ಪಡಿಸಿರುವುದು ಒಂದು ಗೋಡೆ. ಅವಳಿಗೆ ಈ ಗೋಡೆಯಿಂದಾಗಿ ಇಡೀ ಮನೆಯ ಮೇಲೆ ತಿರಸ್ಕಾರ ಹುಟ್ಟಿದೆ. ತಿರಸ್ಕಾರದಿಂದ ಮಿದುಳಿನಲ್ಲಿ ಹೊಸ ಅಲೆಗಳ ಸೃಷ್ಟಿ.

ಹಾರಿಸಿಕೊಂಡು ಹೋಗಲು ಕಾದಿರುವ ತರುಣ ರಣಹದ್ದು... ಸುಧಾಕರ! ಬಾಲೆಗೆ ಸಿದ್ಧಾಂತಗಳು ಅರ್ಥವಾಗುವುದು ಹೇಗೆ? ಅವಳನ್ನು ಕಳೆದುಕೊಳ್ಳುವಂತಿಲ್ಲ. ಅವಳಿಗೆ ವಯಸ್ಸು ಇರಿದು ತಿಳಿಸುತ್ತಿರುವಂತೆ ದೈಹಿಕ ಸಂಬಂಧವೂ ಅಗತ್ಯ. ತನಗೂ ಅವಳೊಂದಿಗೆ ಅದೇ ಸಂಬಂಧ ಪಡೆಯುವ ಅಗತ್ಯ, ಅಧಿಕಾರ, ಧರ್ಮ ಎಲ್ಲವೂ ಇದೆ.

ಸೌಮ್ಯ ಮುಖದ ಸೈತಾನ ಮುಖವಾಡ ತೆಗೆದು ಮೊನಚು ದೃಷ್ಟಿ ಬೀರಿದ. ಕಾಮನೆ ಎಚ್ಚೆತ್ತು ಬಿಸಿ ಉಸಿರ್ಗರೆಯಿತು. ತನ್ನವಳು ಎಂಬ ಹೆಣ್ಣಿನ ಮೇಲೆ ಅಧಿಕಾರ ಹೂಡಲು ಮೈಮನಗಳು ಒಂದಾದವು. ಕೋಣೆಯ ಕಡೆ ಕಣ್ಣು ಹೊರಳಿತು. ಅದೇ ಕತ್ತಲು, ನೀರವತೆ.

ಮೆದು ಹೆಜ್ಜೆಗಳಲ್ಲಿ ಸರಿದು ಬಾಗಿಲು ಬೆರಳಿನಿಂದ ಒತ್ತಿದ. ಒಳಗಿನಿಂದ ಬೋಲ್ಟ್ ಆಗಿತ್ತು. ಅವಳಿಗೆ ಗಾಢ ನಿದ್ರೆ.

"ಸೌಭಾಗ್ಯ...."

ಅವನ ಕರೆ ಅವನಿಗಷ್ಟೇ ಕೇಳಿರಬೇಕು. ತುಸು ಗಟ್ಟಿಯಾದ ಕೂಗು ಅವಳನ್ನು ಎಬ್ಬಿಸುತ್ತದೆ. ಗಂಭೀರ ಪ್ರಕೃತಿಯ ಪತಿಯನ್ನು ಏಕಾಏಕಿ ಅವೇಳೆಯಲ್ಲಿ ಕಂಡು ಚಕಿತಗೊಳ್ಳುತ್ತಾಳೆ. ತಾನು ಅಗ್ಗವಾಗುವಂತಿಲ್ಲ.

ಕಾಮನೆ ತಿವಿಯಿತು...ಹೇಡಿ!

ಬರಹಗಾರ ಹೇಡಿಯಲ್ಲ. ಮಹಡಿಯ ಕೈಪಿಡಿ ಇಳಿದು ಚಜ್ಜದ ಮೇಲೆ ಬಂದ. ಅಲ್ಲಿಂದ ಸೌಭಾಗ್ಯಳ ಕೋಣೆಯ ಕಿಟಕಿ ಚೌಕಟ್ಟಿಗೆ ಮೂರು ಅಡಿಗಳ ಅಂತರ. ಗೋಡೆಗ ಒತ್ತಾಗಿ ಸರಿದು ಚೌಕಟ್ಟಿನ ಚಾಚು ಭಾಗಕ್ಕೆ ಹಾರಿದ. 'ಧಪ್' ಸದ್ದು

ರಾತ್ರಿಯ ನೀರವತೆಯಲ್ಲಿ ಅವನ ಎದೆಗೆ ಘರ್ಷಿಸುವಂತೆ ಕೇಳಿತು.

ಬೆಚ್ಚಿದ ಕಾಮನೆ ತಣ್ಣಗಾಯಿತು. ಕಾರ್ತೀಕ ಈಗ ಮನೆಯ ಮುಂಭಾಗದ ಚಜ್ಜದ ಮೇಲೆ ರಸ್ತೆಗೆ ಇದಿರಾಗಿ ಚೆನ್ನಾಗಿ ಕಾಣುವಂತೆ ನಿಂತಿದ್ದ. ಹೆಚ್ಚು ಹೊತ್ತು ಹಾಗೆ ನಿಲ್ಲುವಂತಿಲ್ಲ.

ಕಿಟಕಿಯ ಚೌಕಟ್ಟು ಹಿಡಿದು ಇಣುಕಿದಾಗ ಸೌಭಾಗ್ಯ ಕಿಟಕಿಗೆ ಸಮೀಪವಾಗಿ ಮಲಗಿರುವುದು ಕಾಣಿಸಿತು. ರಸ್ತೆಯ ಬೆಳಕಿನ ಮಾಸಲು ಖಂಡದಲ್ಲಿ ಬಾಲಿಶ ಮುಖ. ಮುದುರಿದ ದೇಹ ಕೊರೆದಂತೆ ಕಾಣಿಸಿತು. ಅಂದು ಹಾರಂಗಿ ಕಾಲೋನಿ ಮನೆಯಲ್ಲಿ ರೂತಮ್ಮನೊಂದಿಗೆ ತಾನು ಮಾತಾಡುತ್ತಿದ್ದಾಗ ಸೌಭಾಗ್ಯ ಮೂಲೆಗೆ ಸೊರಗಿ ನಿದ್ರಿಸಿದ ಭಂಗಿ ನೆನಪಿಗೆ ಬಂತು.

ರಸ್ತೆಯ ಕಡೆಗೆ ನೋಡಿದ. ದೂರದಲ್ಲಿ ಸರಿದು ಹೋಗುತ್ತಿದ್ದ ಒಂದು ಕಾರು, ನೆರಳಿನಂತೆ ಕಾಣುವ ವ್ಯಕ್ತಿಗಳ ಹೊರತಾಗಿ ಮತ್ತೇನೂ ಇಲ್ಲ. ಕಿಟಕಿಯಲ್ಲಿ ಮತ್ತಷ್ಟು ಬಾಗಿ ನೋಡಿದ. ಮೆಲ್ಲನೆ ಕೆಮ್ಮಿದ.....

ಸೌಭಾಗ್ಯ ಹೊರಳಿದಳು! ತಣ್ಣಗಾಗುತ್ತಿದ್ದ ಕಾಮನೆ ಸತ್ತು ಮೈ ಕಂಪಿಸಿತು. ವಿವೇಚನೆ ತಲೆ ತಿವಿಯಿತು. ತಾನು ಅಲ್ಲಿಗೆ ಬಂದುದರ ಔಚಿತ್ಯ? ಸೌಭಾಗ್ಯ ಪರ ಹೆಣ್ಣಲ್ಲ. ವಿಧಿವತ್ತಾಗಿ ಕೈ ಹಿಡಿದವಳು. ಅವಳ ಕೋಣೆಯ ಬಾಗಿಲು ತಟ್ಟಿದ್ದರೆ ಸಂತಸದಿಂದ ಬರಮಾಡಿಕೊಳ್ಳುತ್ತಿದ್ದಳು. ಕಳ್ಳನ ಸಾಹಸದಲ್ಲಿ ಕಿಟಕಿಗೆ ಸಮೀಪವಾಗಿ ಅವೇಳೆಯಲ್ಲಿ ನಿಂತಿರುವೆ. ತಲೆಯಲ್ಲಿ ಮಂಪರು ಕವಿದಿದೆ.

ಸೌಭಾಗ್ಯಳಿಗೆ ಎಚ್ಚರವಾಗಿತ್ತು. ಕಣ್ಣು ತೆರೆದಾಗ ಅವಳಿಗೆ ನೆರಳಿನಂತಹ ಅಸ್ಪಷ್ಟ ಮುಖ ಕಾಣಿಸಿತು. ಚಿಟ್ಟನೆ ಚೀರಿದಳು! ಕಾರ್ತೀಕ ಸರ್ರನೆ ಮುಖ ಹಿಂದಕ್ಕೆ ತೆಗೆದುಕೊಂಡ. ಗಾಬರಿಯಲ್ಲಿ ಮಹಡಿಯ ಚಜ್ಜದ ಕಡೆಗೆ ಹಾರುವುದು ಮರೆತು ದಿಗ್ಭ್ರಾಂತನಂತೆ ಕೆಳಕ್ಕೆ ಜಿಗಿದ.

* * *

ಸೌಭಾಗ್ಯ ಅವನ ಎಡ ಪಾದದ ಕೀಲಿಗೆ ಕಪ್ಪು ಮುಲಾಮು ನಯವಾಗಿ ಸವರಿದಳು.

"ಡಾಕ್ಟರಿಗೆ ಹೇಳಿ ಕಳಿಸ್ತೀನಿ ಅಂದ್ರೆ ಬೇಡ ಅಂತೀರಿ. ನಿಮಗೆ ಜ್ವರ ಬಂದಿದೆ."

ಅವಳ ಮುಖ ನಿರುಕಿಸಿ ಸುಡುತ್ತಿದ್ದ ಹಣೆ ಮುಟ್ಟಿಕೊಂಡ. ಜ್ವರ ಬಂದಿರುವುದು ನಿಜ. ಆದರೂ ಡಾಕ್ಟರು ಬೇಕಿಲ್ಲ. ತಾಯಿಗೂ ಅದೇ ಮಾತು ತಿಳಿಸಿದ್ದ.

ರಾತ್ರಿಯ ಘಟನೆ ನೆನೆಸಿಕೊಂಡರೆ ಬೇಸರ, ನಾಚಿಕೆ ಒಮ್ಮೆಗೇ ಆಗುತ್ತದೆ. ತನ್ನ ಅದೃಷ್ಟ ಚೆನ್ನಾಗಿತ್ತು. ಕಾಲಿನ ಮೂಳೆ ಮುರಿಯಲಿಲ್ಲ. ಗಾಬರಿಯಲ್ಲಿ ಜಿಗಿದಾಗ ಕೆಳಗಡೆ ವಾರದ ಹಿಂದೆ ಮಳೆಯಿಂದ ತೊಯ್ದು ಮಣ್ಣು ತೀವ್ರ ಅಪಾಯ ತಟ್ಟಿಸಲಿಲ್ಲ.

ಎಡ ಪಾದದ ಕೀಲು ಹೊರಳಿ ನೋವಾಗಿತ್ತು. ಸಾರಕ್ಕಿಯ ಮಾವಿನ ತೋಪಿನಲ್ಲಿ ಹನ್ನೆರಡು ಅಡಿಗಳ ಎತ್ತರದ ರೆಂಬೆಯಿಂದ ಲೀಲಾಜಾಲವಾಗಿ ಜಿಗಿಯುತ್ತಿದ್ದವನು. ಅದು ಆ ಕಾಲದಲ್ಲಿ. ಆಗ ಇಪ್ಪತ್ತರ ಹರೆಯ. ಈಗ ಸವೆಯುತ್ತಿರುವ ದೇಹಕ್ಕೆ ನಲವತ್ತು!

ಚಜ್ಜದಿಂದ ಹಾರಿದ ಪ್ರಸಂಗವನ್ನು ತಾಯಿಗೆ ಎರಡು ಮಾತುಗಳಲ್ಲಿ ಕಥೆಯಾಗಿ ಹೇಳಿದ್ದ. ರಾತ್ರಿ ಯಾರೊ ಚಜ್ಜದ ಮೇಲೆ ಸರಿದಾಡಿದ ಸದ್ದು ಕೇಳಿ ತಾನು ಹೊರ ಬಂದವನಂತೆ. ಅವನನ್ನು ಮೆಲ್ಲನೆ ಅನುಸರಿಸಿ ಬಂದಾಗ ವ್ಯಕ್ತಿ ಕೆಳಕ್ಕೆ ಜಿಗಿದು ಓಡಿದ. ಹಿಂದೆಯೇ ತಾನೂ ಜಿಗಿದನಂತೆ.

"ರಾತ್ರಿ ಹೊತ್ನಲ್ಲಿ ಕಳ್ಳನ್ನ ಅಟ್ಟಿಸಿಕೊಂಡು ಹೋಗೋದು ಅಪಾಯ ಅಲ್ಲವೆ?"

ಸೌಭಾಗ್ಯಳ ಕೇಳಿಕೆಯಲ್ಲಿ ಗಾಬರಿಯೊಂದಿಗೆ ಅವನ ಮೇಲಿನ ಆಸ್ಥೆಯೂ ಸೇರಿತ್ತು.

"ಹುಂ" ಮೊಟಕಾಗಿತ್ತು ಉತ್ತರ.

"ಪಪ್ಪ ಒಂದ್ಸಾರಿ ಹಾಗೆ ಮಾಡಲಿಕ್ಕೆ ಹೋಗಿ ತಲೆಗೆ ಪೆಟ್ಟು ತಿಂದು ಬಂದಿದ್ರು."

ಅವಳತ್ತ ಒಣ ನೋಟ ಹಾಕಿದ. ಧೂರ್ತ ಬರ್ನಾರ್ಡ್ ಕಣ್ಣ ಮುಂದೆ ಕಂಬದಂತೆ ನಿಂತ. ಪೆಟ್ಟು ಬಲವಾಗಿ ತಿಂದು ಅಂದೇ ಅವನು ಸತ್ತಿದ್ದರೆ ಸೌಭಾಗ್ಯ ಈ ಮನೆಗೆ ಬರುತ್ತಿರಲಿಲ್ಲ. ಇಬ್ಬರ ಜೀವಿತದಲ್ಲೂ ಇಂಥಹ ಚರಿತ್ರೆ ಸೃಷ್ಟಿಯಾಗುತ್ತಿರಲಿಲ್ಲ.

ಓದುವ ಇಚ್ಛೆ ಇಲ್ಲವಾಗಿದ್ದರೂ ಚಿತ್ರ ಕಥೆಯ ಫೈಲು ಎತ್ತಿಕೊಂಡ.

"ನೂರೆರಡರ ಜ್ವರದಲ್ಲೂ ಓದಬೇಕೆ? ಸ್ಟುಡಿಯೊದೋರಿಗೆ ಇನ್ನೆರಡು ದಿನ ನೀವು ಹೊರಕ್ಕೆ ಬರೋದಿಲ್ಲಾಂತ ಅತ್ತ ಹೇಳಿಕಳಿಸಿದ್ದಾಯ್ತು."

ದೃಷ್ಟಿ ಬದಲಿಸದೆ ಪುಟ ತಿರುವಿ ನುಡಿದ.

"ಚಮೇಲಿ ಗಾರ್ಡನ್ಸ್ ಬಂಡೆ ಹತ್ರ ನಿನ್ನೆ ದಿನ ನಿನ್ನೊಂದಿಗೆ ಮಾತಾಡ ಬೇಕೂಂತ ಹೇಳಿದ್ದೆ."

ಅವಳ ಕಡೆ ಕಣ್ಣು ತಿರುಗಲಿಲ್ಲ. ಅವಳಿಗೆ ಉಸಿರು ಏರಿ ಬಂತು.

"ಅಲ್ಲೆ ಕಾದಿದ್ದೆ. ನೀವು ಬರ್ಲಿಲ್ಲ. ತಲೆ ನೋಯ್ತಿತ್ತು. ಮನೆಗೆ ಬಂದ್ಬಿಟ್ಟೆ."

ಕಾರ್ತೀಕ ಫೈಲು ರಪ್ಪನೆ ಮುಚ್ಚಿ ಎದ್ದು ಕುಳಿತ. ಶರ್ಮಿಳಾ ವಿಷಯದಲ್ಲಿ ಆಡಲು ಹವಣಿಸಿದ್ದ ಉಬ್ಬು ತಗ್ಗುಗಳ ಮಾತುಗಳು ಅವೇ ತಪ್ಪಿ ಹೋಗಿದ್ದವು. ಶರ್ಮಿಳಾ ಬಹು ದೂರಕ್ಕೆ ಸರಿದು ಹೋದಂತೆ ಆಯಿತು.

ಎರಡು ದಿನಗಳವರೆಗೆ ಕಾಡಿದ ಕೀಲು ನೋವು ತುಸು ಕಡಿಮೆಯಾಗಿತ್ತು.

ಬೆಳಗಿನ ಒಂಬತ್ತು ಗಂಟೆ ದಾಟುತ್ತಲೇ ಕಾರ್ತೀಕ ಸ್ಟುಡಿಯೊ ದಿಕ್ಕಿಗೆ ಕಾರು ಚಲಾಯಿಸಿದ. ಫುಟ್‌ಪಾತ್‌ನಿಂದ ರಸ್ತೆಗೆ ಇಳಿದು ಕೈ ಅಡ್ಡ ತೋರಿದ ವ್ಯಕ್ತಿಯನ್ನು ದೂರದಿಂದ ಕಂಡು ವಾಹನ ರಸ್ತೆಯ ಅಂಚಿಗೆ ನಿಲ್ಲಿಸಿದ.

"ಲಿಫ್ಟ್ ಬೇಕಿತ್ತೆ?" ಗಂಟು ಮುಖದಲ್ಲಿ ಕೇಳಿದ.

ಗಂಟು ಮುಖ ಮತ್ತೆ ಅರಳಿತು. ಬಿಳುಪು ಜುಬ್ಬಾ, ಬಿಳುಪು ಪ್ಯಾಂಟಿನ ಯುವಕ. ಅಂದು ನೀಲಿ ಪ್ಯಾಂಟ್, ಕೆಂಪು ಷರಟು...ಸುಧಾಕರ!

ತರುಣ ನಮ್ರವಾಗಿ ಧ್ವನಿಸಿದ.

"ಲಿಫ್ಟ್ ಬೇಕಿರಲಿಲ್ಲ. ನೀವೇ ಬೇಕಿತ್ತು. ನೀವು ಈ ರಸ್ತೇಲಿ ನಡೆದು ಬರ್ತೀರಿ ಅಂತ ಕಾದಿದ್ದೆ...ಬರಹಗಾರರು ಕಾರಿನ ಒಡೆಯರು ಅಂತ ಸಂತೋಷವಾಯ್ತು."

ಹುಬ್ಬೇರಿತು. ಮತ್ತೆ ಇಳಿಯಿತು. ಕಾರ್ತೀಕ ಒಣನಗೆ ತೋರಿದ.

"ನನ್ನಂಥ ಬರಹಗಾರ ಕಾರಿನ ಮಾಲೀಕ ಆಗೋದು ಕಥೆಯಲ್ಲಿ ಮಾತ್ರ. ಸ್ಟುಡಿಯೋಗೆ ತುರ್ತಾಗಿ ಬರಲಿಕ್ಕೆ ಕಾರು ಕಳಿಸಿದ್ರು. ನಾನು ಹೊತ್ತು ಮಾಡಿದ್ರಿಂದ ಡ್ರೈವರ್ ವಾಹನ ಬಿಟ್ಟು ಅವನ ಕೆಲಸಕ್ಕೆ ಹೋದ. ನನ್ನಿಂದ ಏನಾಗಬೇಕಿತ್ತು?"

"ಹತ್ತು ನಿಮಿಷದ ಮಾತು" ಉಗುಳು ನುಂಗಿದ.

"ಒಳಗೆ ಬನ್ನಿ. ತುರ್ತಾಗಿ ಹೋಗ್ಬೇಕು ನಾನು."

ಸುಧಾಕರ ಕಾರು ಏರಿದ. ವಾಹನ ಚಲಿಸಿತು.

"ನಾನು ಸುಧಾಕರ..."

"ಗೊತ್ತು, ಪಿಯಾನೊವಾದಕ. ವಿಬ್‌ಗ್ಯಾರ್ ಕನ್ಸರ್ವೆಟೋರಿಯಂನಲ್ಲಿ ಕಲೀತಾ ಇದೀರಿ."

ತುಸು ಚಕಿತನಾದ ಯುವಕ ಮಾತಿಗೆ ಪದಗಳನ್ನು ಆಯ್ದ.

"ಚಮೇಲಿ ಗಾರ್ಡನ್ಸ್ ಪಾರ್ಟಿಗೆ ನೀವು ಬರಲಿಲ್ಲ. ಸೌಭಾಗ್ಯ ಕೂಡ ಕಾಣ್ಲಿಲ್ಲ...."

"ವಿಷಯಕ್ಕೆ ಬನ್ನಿ" ಬೇಸರದಲ್ಲಿ ಗೊಣಗಿದ.

ಸುಧಾಕರ ತಲ್ಲಣಗೊಂಡ. ಕಾರ್ತೀಕ ಪಾರ್ಟಿಗೆ ಬರದಿದ್ದುದು ಹೊಸ ಕಾದಂಬರಿ. ಸಿನಿಮಾ ಚಿತ್ರಕಥೆ, 'ಮಣ್ಣಿನ ದೋಣಿ'ಯ ಬೆಳವಣಿಗೆ ಎಲ್ಲದರ ವಿಷಯದಲ್ಲಿ ಮಾತಾಡಲು ಬಂದವನಿಗೆ ಉತ್ಸಾಹ ಅಡಗಿ ಹೋಯಿತು. ಅಡಗಿದ ಸ್ವರದಲ್ಲಿ ನೇರವಾಗಿ ಹೇಳಿದ.

"ಸೌಭಾಗ್ಯ ಹೇಳಿದಾಳೆ. ನೀವು ಅವಳ ಮೇಲೆ ತೋರಿಸಿರೊ ದಯೆ, ಮಾಡಿರೊ ಉಪಕಾರ ತಿಳಿದಿದೀನಿ. ನೀವು ಖರ್ಚು ಮಾಡಿರೊ ಹಣ.. ಸ್ವಲ್ಪ ದಿನ ಆದ ಮೇಲೆ ತೀರಿಸ್ತೀವಿ."

ಕಾರು ಚಕ್ಕನೆ ನಿಂತಿತು. ನೀಲಿ ಕಂಗಳು ಕೆಂಪಾದವು.

"ಏನು ನೀವು ಆಡ್ತಾ ಇರೊ ಹಾಳು ಮಾತು? ಹಣ ಕೊಟ್ಟು ವಾಪಸ್ ಕೊಟ್ಟು ಪಡೆಯೋಕೆ ನಾನು ಮಾರ್ವಾಡಿ ಅಲ್ಲ."

ತುಟಿಗೆ ನಾಲಗೆ ಸವರಿ ಮಾತಿನ ಪಟ್ಟುಬಿಡದೆ ಹೇಳಿದ ಯುವಕ.

"ನಾನು ಸೌಭಾಗ್ಯನ್ನ ಪ್ರೀತಿಸ್ತೀನಿ. ಅವಳೂ ಒಂದು ದಿನ ಹಣ ಸಂಪಾದನೆ ಮಾಡ್ತಾಳೆ. ನಾವಿಬ್ರೂ ನಿಮ್ಮ ಹಣ ತೀರಿಸ್ತೀವಿ."

ಕಾರು ಮೆಲ್ಲಗೆ ಚಲನೆ ಹಿಡಿಯಿತು. ಲೇಖಕನ ಮುಖದಲ್ಲಿ ನೋವು ಕಾಣಿಸಿತು.

"ಸೌಭಾಗ್ಯನ್ನ ಮದುವೆ ಆಗ್ತೀನೀಂತ ಹೇಳ್ತಾ ಇದೀರಾ?"

ಸುಧಾಕರ ಬೆದರಿದಂತೆ ಕಾಣಿಸಿದ. ಮೌನಗೊಂಡವನನ್ನು ನಿಟ್ಟಿಸಿದ ಕಾರ್ತೀಕ.

"ಪ್ರಶ್ನೆಯಿಂದ ಗಾಬರಿ ಆಗ್ಬೇಡಿ. ಈ ವಿಷಯದಲ್ಲಿ ಸೌಭಾಗ್ಯ ಏನು ಹೇಳ್ತಾಳೆ?"

ಅವನಿಗೆ ಧೈರ್ಯ ಏರಿ ಬಂತು.

"ವಿಷಯ ತಿಳಿಸ್ದೆ. ಅವಳು ನೇರವಾದ ಉತ್ತರ ಕೊಡ್ಲಿಲ್ಲ." ಕಟ್ಟಿದ ಉಸಿರು ಹೊರ ಹಾಕಿದ ಕಾರ್ತೀಕ.

"ಅವಳು ಹೇಳಲಿಲ್ಲೇನು ಅವಳಿಗೆ..."

ಸಕಾಲದಲ್ಲಿ ಮಾತು ತಡೆದುಕೊಂಡ. ಸೌಭಾಗ್ಯ ತಾನು ವಿವಾಹಿತಳೆಂಬುದನ್ನು ರಹಸ್ಯವಾಗಿಟ್ಟಿದ್ದಾಳೆ. ಅದು ಸುಧಾಕರನಿಗೆ ತಿಳಿಯುವುದು ಬೇಡ.

ತರುಣ ಮಾತು ಬಿಡಿಸಿದ.

'ಸೌಭಾಗ್ಯ ಹೇಳ್ತಾಳೆ, ಅವಳು ಇನ್ನೂ ಚಿಕ್ಕವಳಂತೆ..."

ಮುಖಕ್ಕೆ ರಾಚಿದಂತಾಯಿತು. ಸುಧಾಕರನ ಜೋಡಿಯಾಗಲು ಅವಳು ಚಿಕ್ಕವಳು ! ತನ್ನ ಜೋಡಿಗೆ?

ಹದಿನಾರು...ನಲವತ್ತು.

ತಲೆಯಲ್ಲಿ ವಿರುದ್ಧ ಚಿತ್ರಗಳ ಘರ್ಷಣೆ. ಹಣೆ ಬರೆಸಿಕೊಂಡ. ಸುಧಾಕರ ಮಾತು ಮುಂದುವರಿಸಿದ್ದ.

"ಅವಳು ಇನ್ನೂ ಕಲಿಯಬೇಕಂತೆ. ಆಮೇಲೆ ಮದುವೆ..." ಸುಧಾಕರನ ಕಣ್ಣುಗಳಲ್ಲಿ ಆಸೆ, ಕನಸು ತೇಲಾಡಿತ್ತು.

"ಹುಂ" ಸೊರಗಿತ್ತು ಧ್ವನಿ.

"ನನ್ನ ತಾಯಿಗೆ ಬಹಳ ಹಿಡಿಸಿದಾಳೆ ಸಾರ್. ನಾನು ಸೌಭಾಗ್ಯಳಿಗೆ ಅನ್ಯಾಯ ಮಾಡೋದಿಲ್ಲ. ಅವಳನ್ನ ಸುಖವಾಗಿಡೋದಿಕ್ಕೆ ಈ ನನ್ನ ಜೀವನ ಮೀಸಲು.

ಅವಳು ಹಾಡ್ತಾಳೆ. ನಾನು ಪಿಯಾನೊ ನುಡಿಸ್ತೀನಿ. ಅವಳು ಹೇಳ್ತಲೇ ಇರ್ತಾಳೆ. ನೀವು ಅವಳಿಗೆ ಮಾಡಿರೊ ಉಪಕಾರದ ಋಣ ತೀರಿಸೋದಿಕ್ಕೆ ಜನ್ಮ ಜನ್ಮಗಳೇ ಬೇಕಂತೆ."

ಪಿಯಾನೊ ನುಡಿಸಿದಂತೆ ಇಂಪಾಗಿ ಹೇಳುತ್ತಿದ್ದ. ಅದರಲ್ಲಿ ಅಪಸ್ವರ ಹಿಡಿಯುತ್ತಿದ್ದ ಲೇಖಕ. ಮೋಡಿ ಹೂಡುವ ಮಾತು!

"ನನ್ನ ವಿಷಯದಲ್ಲಿ ಮತ್ತೇನಾದ್ರು ಹೇಳಿದ್ಲೆ?" ಮೊನಚಾಗಿ ಕೇಳಿದ.

"ಮತ್ತೇನೂ ಇಲ್ಲ. ನಿಮ್ಮ ಬಗ್ಗೆ ವಿಪರೀತ ಭಕ್ತಿ, ಆದರ. ಅವಳಿಗಾಗಿ ತುಂಬಾ ತೊಂದರೆ ತಗೋಂಡಿದೀರಂತೆ. ಅವಳ ಮೇಲೆ ನೀವು ಇಟ್ಟಿರೊ ಆಸ್ಥೆ, ದಯೆ, ಪ್ರೀತಿ ನೋಡಿದ್ರೆ ನನಗೆ ಅನ್ನಿಸುತ್ತೆ... ನಿಮಗೆ ಕೋಪ ಬಂದ್ರೂ ಸರಿ... ನಿಮಗೆ ಅವಳ ಮೇಲೆ ಪ್ರೇಮ ಏಕಾಏಕಿ ಹುಟ್ಟಿ ನೀವು ಸೌಭಾಗ್ಯಳನ್ನ ಮದುವೆ ಆದ್ರೂ ಹೆಚ್ಚಲ್ಲ ಅಂತ..."

ಗಹಗಹ ನಗೆ ಹಾಕಿದ. ವೇಗಕ್ಕೆ ಬಂದಿದ್ದ ವಾಹನ ಕಿರ್ರನೆ ಶಬ್ದ ಮಾಡಿ ನಿಂತಿತು. ನಗೆ ಸ್ಥಗಿತಗೊಂಡಿತು. ಕಾರ್ತೀಕ ಬುಸುಗುಟ್ಟಿ ವೀಲ್ ಬಲವಾಗಿ ಒತ್ತಿದ.

"ಮಿಸ್ಟರ್ ಸುಧಾಕರ, ದಯವಿಟ್ಟು ಇಳಿದುಬಿಡಿ. ನಮ್ಮ ನಮ್ಮ ಮಾತು ಹೀಗೇ ಸಾಗೋದಾದ್ರೆ ನನ್ನ ಕೈಲಿ ಕಾರು ಅಪಘಾತಕ್ಕೆ ಈಡಾಗೋದು ಖಂಡಿತ. ನನ್ನ ಮೂಡ್ ಸರಿಯಾಗಿಲ್ಲ."

ಭಯಭ್ರಾಂತನಾಗಿ ಇಳಿದು ಎರಡು ಕ್ಷಣ ನಿಂತು ಸುಧಾಕರ ವಂದಿಸುವುದನ್ನೂ ಮರೆತು ಫುಟ್‌ಪಾತ್‌ನಲ್ಲಿ ನಡೆದ. ಅವನು ಹಾಕುತ್ತಿದ್ದ ಒಂದೊಂದು ಹೆಜ್ಜೆಯೂ ಬಾಣದಂತೆ ಕಾರ್ತೀಕನ ನೋಟ ಇರಿಯುತ್ತಿತ್ತು.

ಹುಚ್ಚು ಪ್ರಣಯಿ! ಪ್ರೇಮದ ಸೋಗಿನ ಕಾಮಿ! ವಿವಾಹಿತೆಯನ್ನು ಹಾರಿಸುವ ಗಿಡಗ!...'ಮಣ್ಣಿನ ದೋಣಿಯ' ಖಳನಾಯಕ!!

ಕಾರ್ತೀಕ ಸರ್ರನೆ ಕಾರು ಹಿಂದಕ್ಕೆ ತಿರುಗಿಸಿದ.

## ೮

ಗುಲಾಬಿಯಿಂದ ನಂದಿಬಟ್ಟಲು ಪೊದೆಗೆ ತೇಲಿಹೋದ ಕಪ್ಪು, ಬಿಳುಪು ಮಚ್ಚೆಗಳ ಚಿಟ್ಟೆಯನ್ನು ನೋಡುತ್ತ ನಿಂತಳು ಸೌಭಾಗ್ಯ. ದ್ರಾಕ್ಷಿಯ ಗೊಂಚಲಿಗೆ ಬಾಯಿ ಹಾಕಿ ಎಳೆದ ಮೀನಾಕ್ಷಿ ಮತ್ತೊಂದು ಕೈನ ಗೊಂಚಲು ತೋರುತ್ತ ವರಾಂಡದಿಂದ ಕೂಗಿದಳು.

"ಬರ್ನಾರ್ಡ್ ಬಚ್ಚಿ....."

ಮೈ ಕುಲುಕಿದ ಬಾಲೆ ಹಿಂದಕ್ಕೆ ನೋಡಿ ಹಣೆಗೆ ಕೈ ಹಚ್ಚಿದಳು.

"ಹೆದರಿಬಿಟ್ಟೆ."

"ಹೆದರಿದ್ದು ನನಗಲ್ಲ. ನಮ್ಮಣ್ಣನಿಗೆ ಹೆದರಿ ಅಲ್ಲಿ ನಿಂತಿದೀಯ. ಪರವಾಗಿಲ್ಲ, ಬಾ."

ಅವಳ ಕೈ ಹಿಡಿದು ಒಳಕ್ಕೆ ಕರೆದೊಯ್ದಳು. ಅಚ್ಚುಕಟ್ಟಾದ ಕಿಚನ್, ಬಾತ್‌ರೂಂ, ಆಧುನಿಕ ವಸ್ತು, ಪೀಠೋಪಕರಣಗಳಿಂದ ಸಜ್ಜಾಗಿತ್ತು ಸುಂದರವಾದ ಚಿಕ್ಕ ಮನೆ.

ಸೋಫಾದಲ್ಲಿ ಕುಳಿತು ಸೌಭಾಗ್ಯ ಕಣ್ಣು ಹರಿದಾಡಿಸುತ್ತಿದ್ದಂತೆ ಸ್ನಾನ ಮುಗಿಸಿ ತಲೆ ಬಾಚಿಕೊಂಡು ಹಜಾರಕ್ಕೆ ಬಂದ ಕಮಲಹಾಸ.

"ಎಂಥಾ ಕೆಲಸ ಮಾಡಿಬಿಟ್ಟೆ, ಮಿಸ್ ಬರ್ನಾರ್ಡ್. ನನ್ನ ಪಾರ್ಟಿಯ ಸೊಗಸೇ ಹೋಗಿಬಿಡ್ತು. ಮಿಸ್ಟರ್ ಕಾರ್ತೀಕನ್ನ ಮುಖ್ಯ ಅತಿಥಿ ಮಾಡಿ, ಸುಧಾಕರನ್ನ ಪಿಯಾನೊಗೆ ಹಚ್ಚಿ, ನಿನ್ನಿಂದ ಎರಡು ಹಾಡು ಹೇಳಿಸೊ ಪ್ಲಾನ್ ಮಾಡಿದ್ದೆ. ನೀನು, ಕಾರ್ತೀಕ ಇಬ್ಬರೂ ಪಾರ್ಟಿಗೆ ಬಂದು, ನನಗೆ ಕಾಣಿಸಿಕೊಂಡು ಮಾಯವಾಗಿಬಿಟ್ರಿ. ನನ್ನಿಂದ ಏನು ತಪ್ಪಾಯ್ತು ಅಂತ ತಿಳೀದೆ ಎರಡು ದಿನ ತಳಮಳಪಟ್ಟೆ. ಆಲ್‌ರೈಟ್, ಇನ್ನೊಂದು ಸಾರಿ ನಿಮ್ಮ ಜೊತೇಲಿ ಸೇರೊ ಅದೃಷ್ಟ ಇರಲಿ."

ಭುಜ ಏರಿಸಿದ ಅಜಾನುಬಾಹು ನಿಮಿಷವೂ ಸುಮ್ಮನೆ ಕೂಡದೆ ಅತ್ತಿತ್ತ ಹೆಜ್ಜೆ ಆಡಿಸಿದ. ಕಿಟಿಕಿಯ ಕರ್ಟನ್ ಸರಿಪಡಿಸಿದ. ಮೆಲ್ಲನೆ ರೇಡಿಯೊ ಟ್ಯೂನ್ ಮಾಡಿ ಟೀಪಾಯ್‌ಗೆ ಪತ್ರಿಕೆ ಹಾಕಿದ. ಸ್ಟ್ಯಾಂಡ್ ಮೇಲಿದ್ದ ಎರಡು ಫೈಲುಗಳಲ್ಲಿ ಕಣ್ಣಾಡಿಸಿ ಮೇಜಿಗಿಟ್ಟ.

ಸೌಭಾಗ್ಯ ನಿಧಾನವಾಗಿ ನಮ್ರವಾಗಿ ಉತ್ತರಿಸಿದಳು.

"ಕಾರ್ತೀಕ ನಿಮ್ಮ ಕ್ಷಮೆ ಕೇಳು ಅಂದ್ರು. ನಾನೂ ಕ್ಷೇಮಕೇಳ್ತಿದೀನಿ."

ಕ್ಷಮಿಸಿದೆ ಅಂತ ಹೇಳಿ."

ವಿನೋದದ ಶೀವಿಯಲ್ಲಿ ಹೇಳಿ ಗಹಗಹಿಸಿದವನು ಮೇಜಿನ ಡ್ರಾನಿಂದ ಕೆಂಪುರಟ್ಟಿನ ಆಕರ್ಷಕ ಪುಸ್ತಕ ತಂದು ಸೋಫಾದಲ್ಲಿ ಅವಳ ಪಕ್ಕ ಕುಳಿತ. ಸೌಭಾಗ್ಯ ಸರಕ್ಕನೆ ಎದ್ದು ನಿಂತಳು.

"ಪರವಾಗಿಲ್ಲ, ಕೂತ್ಕೊ"

ಅವಳ ಕೈ ಹಿಡಿದು ಪಕ್ಕದಲ್ಲಿ ಕೂಡಿಸಿದ. ದಪ್ಪ ಪುಸ್ತಕದ ಹಾಳೆ ಮಗುಚಿ ಅವಳ ಮುಂದೆ ಹಿಡಿದ.

ಕಬ್ಬಿಣದ ದೆಬ್ಬೆಗಳ ಜಾಲರಿ ವರಾಂಡದ ಚಿಕ್ಕ ಹೆಂಚಿನ ಮನೆ. ತೂಗಾಡಿದ ಹೂ ಬಳ್ಳಿಗಳ ತಳದಲ್ಲಿ ಹೂವಿನ ಕುಂಡಗಳು. ಮನೆಯ ಮೇಲೆ ಮಧ್ಯದಲ್ಲಿ ನೀಲಿ ನಕ್ಷತ್ರ.

ಚಿತ್ರ ಕಣ್ಣು ರಾಚಿತು. ಹಾರಂಗಿಯ ಕಾಲೋನಿ ಮನೆಯಲ್ಲಿದ್ದ ಫೋಟೋ! ಪಪ್ಪ ಹೇಳುತ್ತಿದ್ದಂತೆ ಅದು ತಮ್ಮ ಮನೆ!

"ಇದು ಯಾರ ಮನೆ?"

ತಲೆ ಎತ್ತದೆ ಕಂಪಿತ ಸ್ವರದಲ್ಲಿ ಕೇಳಿದಳು.

"ಅದು ನೀನು ಹೇಳು"

ಸೋಫಾ ಪಕ್ಕದಲ್ಲಿ ನಿಂತ ಮೀನಾಕ್ಷಿ ಅವಳ ಭಾವ ಬದಲಾವಣೆ ಗಮನಿಸಿದಳು.

"ಉಹುಂ" ಬಾಲೆ ಏನೂ ಹೇಳದಾದಳು.

ಹಾಳೆ ಮಗುಚಿ ಮತ್ತೊಂದು ಚಿತ್ರ ತೋರಿದ ಕಮಲಹಾಸ.

"ಇದು?"

ತೀಡಿಟ್ಟ ಚೂಪು ಮೀಸೆ. ಪ್ರಸನ್ನ ಶ್ರೀಮಂತ ಮುಖ. ಮಧ್ಯದ ಬೈತಲೆಯ ಕ್ರಾಪು.

ಪಕ್ಕದಲ್ಲಿ ಕುಳಿತವನ ಮುಖ ನೋಡಿದಳು. ಕಣ್ಣು ಮೀನಾಕ್ಷಿಯ ಕಡೆ ಏರಿತು.

"ಬಹುಶಃ ನಿಮ್ಮ ತಂದೆ ಇರಬೇಕು."

ಉಸಿರ್ಗರೆದ ಮೀನಾಕ್ಷಿ ಸೋಫಾ ಹಿಡಿದು ಮೇಲೆ ಕುಳಿತಳು.

"ತಂದೆ ಅಲ್ಲ. ಮಾಮ ಆಗ್ಬೇಕು. ಇವರ ಹೆಸರು ಚಂದ್ರಬಾಬು. ಬೇಗಂಚೆರ್ಲಾದ ಎಸ್ಟೇಟ್ ಮಾಲೀಕ. ನಾನೂ ಬೇಗಂಚೆರ್ಲಾದೊಳು ಅಂತ ಹೇಳಿದ್ದೆ. ಆ ಮನೆ ಫೋಟೋ ನೋಡಿದೆಯಲ್ಲ. ಅದೂ ಆ ಎಸ್ಟೇಟಿನಲ್ಲೇ ಇರೋದು."

ಸೌಭಾಗ್ಯಳ ತಲೆಯಲ್ಲಿ ಮೊರೆತ ಸಾಗಿತ್ತು. ನಕ್ಷತ್ರ ಗುರುತಿನ ಮನೆ...ಪಪ್ಪ, ಮಮ್ಮಿ, ಬೇಗಂಚೆರ್ಲಾದವರು. ಅದು ಈವರೆಗೆ ತನಗೆ ತಿಳಿಯದ ಸಂಗತಿ.

ಮೂರನೆಯ ಚಿತ್ರದ ಮೇಲೆ ಶೂನ್ಯದೃಷ್ಟಿ ಹರಿದಿತ್ತು. ಅಗಲ ಕುಂಕುಮದ ಸಂಪ್ರದಾಯಸ್ಥ ಹೆಂಗಸು.

ಪುಟ ತಿರುವಿತು. ದಪ್ಪ, ಮೀಸೆ ಹೊತ್ತ ಒರಟು ಮುಖದವನ ಫೋಟೋ. ಅವಳ ಚಿಂತಿತ ಮುಖ ಗಮನಿಸಿ ಕಮಲಹಾಸ ನುಡಿದ.

"ಇವರೂ ಬಹುಶಃ ಗೊತ್ತಿಲ್ಲ ನಿಂಗೆ. ಆ ಹೆಂಗಸು ಚಂದ್ರಬಾಬು ಹೆಂಡತಿ, ಹೆಸರು ದೇವಕಿ. ಮತ್ತೊಬ್ಬ ಶತ್ರುಘ್ನಬಾಬು. ಚಂದ್ರಬಾಬು ತಮ್ಮ. ಈಗ ಮೂವರೂ ಇಲ್ಲ. ಎಲ್ಲಾ ಸತ್ತುಹೋಗಿದ್ದಾರೆ."

ಏನೊಂದೂ ತಿಳಿಯದ ವಿಷಯಗಳು. ಚಿತ್ರಗಳನ್ನು ತನಗೇಕೆ ತೋರುತ್ತಿದ್ದಾರೆ?

ಪುಟಗಳು ತಿರುವಿದವು.

ದೂರದ ಎಸ್ಟೇಟ್ ಮನೆ. ಪ್ರವೇಶದ ಸಣ್ಣ ರಸ್ತೆ, ರಸ್ತೆಯ ಎರಡು ಪಕ್ಕಗಳಿಗೂ ತುಂಬಿದ ನೀರು, ಸೇತುವೆ, ದೊಡ್ಡ ಸಿಮೆಂಟ್ ತೊಟ್ಟಿಗಳು... ಟಪ್ಪನೆ ಆಲ್ಬಮ್ ಮುಚ್ಚಿ ಆರಾಮವಾಗಿ ಹಿಂದಕ್ಕೆ ಒರಗಿದ.

"ಇವೆಲ್ಲ ನಿನಗೆ ಗೊತ್ತಿಲ್ಲವಾದ್ರೆ ಮೀನಾಕ್ಷಿ ತಿಳಿಸ್ತಾಳೆ. ಅದು ಹೋಗ್ಲಿ... ಸಣ್ಣ ಪ್ರಶ್ನೆ. ಕಾರ್ತೀಕನಿಗೆ ಮದುವೆ ಆಗಿದೆಯಂತೆ. ಹೌದಾ?"

ಶರೀರದ ನರಗಳೆಲ್ಲ ಸೆಟೆದವು. ತಲೆ ತಗ್ಗಿತು.

"ಗೊತ್ತಿಲ್ಲ..."

ಆ ಧೈರ್ಯದ ಪದದ ಉಚ್ಚಾರಣೆಗೆ ಶರೀರದ ಬಲವೆಲ್ಲ ಕೂಡಿತ್ತು.

"ನಾನು ಕೇಳಿದ್ದು ಪೂರ ವೈಯಕ್ತಿಕ ವಿಷಯ. ಸುಮ್ಮನೆ ಕೇಳ್ದೆ. ಏನೂ ತಿಳಿಕೊಬೇಡ."

ಅವಳು ಪ್ರತಿಕ್ರಿಯೆ ಪ್ರಕಟಿಸುವ ಮೊದಲೇ ಮೀನಾಕ್ಷಿ ಮಾತು ಸೇರಿಸಿದಳು.

"ನೀನು ಸುಳ್ಳು ಹೇಳ್ದೆ. ಸೌಭಾಗ್ಯ. ನಿನ್ನ ಪಪ್ಪ ಇಂಜಿನಿಯರ್ ಅಂದೆ. ಬರ್ನಾರ್ಡ್ ಟ್ರಕ್ ಡ್ರೈವರ್..."

ಬಾಲೆಗೆ ಉಸಿರು ಸಿಕ್ಕಿಕೊಂಡಿತು.

"ನಾನು ಕೇಳಿದ್ದು ನಿಜ ತಾನೆ?" ತನ್ನ ಹೇಳಿಕೆಗೆ ನಗು ಮುಖದಲ್ಲೇ ಒತ್ತು ಪ್ರಶ್ನೆ ಹಾಕಿದಳು.

"ಹೌದು, ಟ್ರಕ್ ಡ್ರೈವರ್. ಅವತ್ತು ನಿನ್ನ ತಂದೆ ಎಲ್ಲಿದಾರೇಂತ ಕೇಳಿದ್ರಿ. ನಾನು ಹಾರಂಗಿ ಅಣೆಕಟ್ಟು ಅನ್ನೋದ್ರಲ್ಲಿ ನೀವೇ ಇಂಜಿನಿಯರ್ ಅಂತ ಹೇಳಿಕೊಂಡು ಬಿಟ್ರಿ. ನಾನು ಸುಮ್ಮನಾಗಿಬಿಟ್ಟೆ."

"ಯಾಕೆ ಸುಮ್ಮನಾಗಿಬಿಟ್ಟೆ?"

ಕಮಲಹಾಸ ಬೇಸರದಿಂದ ಕೈ ಆಡಿಸಿದ.

"ಮೀನಾಕ್ಷಿ, ಮಾತಿನಲ್ಲಿ ನೀನು ವಕೀಲ ಆಗಿಬಿಡ್ತೀಯ."

ಮೀನಾಕ್ಷಿ ಕುರ್ಚಿಯ ಹಿಡಿದಳು. ಸೌಭಾಗ್ಯ ಏರುಪೇರಿಲ್ಲದೆ ಉತ್ತರಿಸಿದಳು.

"ಪರಿಚಯ ಆದ ಮೊದಲ ದಿನವೇ ಅವೆಲ್ಲ ಯಾಕೆ ಹೇಳೋದೂಂತ ಸುಮ್ಮನಾದೆ. ಮೀನಾಕ್ಷಿ, ಟ್ರಕ್ ಡ್ರೈವರ್ ಮಗಳು ನಾನು. ಹುಟ್ಟಿದ್ದು ಕಡು ಬಡವರ ಮನೆಯಲ್ಲಿ. ಕಾರ್ತೀಕನಂತಹ ದೊಡ್ಡವರ ರಕ್ಷಣೆಗೆ ಬಂದೆ. ಅವರ ವೈಯಕ್ತಿಕ ವಿಷಯ ನನಗೆ ಗೊತ್ತಿಲ್ಲ. ಮತ್ತೆ ನಿಮ್ಮಂತಹ ದೊಡ್ಡೋರ ಸ್ನೇಹ ಸಿಕ್ತು."

ಹಜಾರದಲ್ಲಿ ಶಿಶುಗಣ್ಣು ಸುತ್ತಾಡಿತು. ಎಲ್ಲವೂ ದೃಷ್ಟಿಗೆ ಮಂಜು. ಮಾಸಲು ನೋಟಕ್ಕೆ ಸಿಕ್ಕಿದುದು ಸ್ಟ್ಯಾಂಡ್‌ಗೆ ತೂಗುಹಾಕಿದ ಎರಡು ಬಣ್ಣದ ಛತ್ರಿಗಳು. ತುಟಿಗಳ ಅಂಚಿನಲ್ಲಿ ನಗೆ ಕಿರಣ ಮಿಂಚಿತು.

"ಸೌಭಾಗ್ಯ ಚೆನ್ನಾಗಿ ಮಾತಾಡ್ತಾಳೆ."

ಕಮಲಹಾಸನ ಪ್ರಶಂಸೆ ಬಂತು. ಮೀನಾಕ್ಷಿಯ ಮಾತು ತಟ್ಟನೆ ಹಿಂಬಾಲಿಸಿತು.

"ಕಾರ್ತೀಕನ ಲೈಬ್ರರಿಯಿಂದ ಅವಳು ಈಗಾಗಲೇ ಐವತ್ತು ಪುಸ್ತಕ ಓದಿದ್ದಾಯ್ತು. ಅಂದ್ರೆ ಎಲ್ಲಾ ಕನ್ನಡ! ಸೌಭಾಗ್ಯ, ನನ್ನ ಮಾತಿಗೆ ನೊಂದುಕೊಬೇಡ. ನಿನ್ನ ಸ್ನೇಹ ನನಗೆ ಯಾವತ್ತಿಗೂ ಬೇಕು. ನೀನು ಡ್ರೈವರ್ ಮಗಳಾದ್ರೆ ನಾನು ಮೇಸ್ತ್ರಿ ಮಗಳು."

"ಮೇಸ್ತ್ರಿ?" ಅಚ್ಚರಿಯ ಪ್ರಶ್ನೆಯಲ್ಲಿ ಸಮಾಧಾನ ಹೊರಳಿ ಬಂತು.

"ಹೌದು. ನಮ್ಮಪ್ಪ ಕಟ್ಟಡದ ಮೇಸ್ತ್ರಿ ಆಗಿದ್ರು."

ಕಮಲಹಾಸನ ಕಡೆ ಓರೆಗಣ್ಣು ಬೀರಿದಳು. ಅವನು ಶತಪಥ ಹಾಕುತ್ತಿದ್ದ.

"ಶಾಲೆಗೆ ಹೊತ್ತಾಗತ್ತೆ"

ಮುಂದಿನ ಪ್ರಶ್ನೆ ತಪ್ಪಿಸಲು ಚಡಪಡಿಸಿದಳು ಕಿಶೋರಿ.

"ಅಲ್ಲಿ ಕಲಿಯೋದೇನಿದೆ? ನಿನಗೆ ಹಾಡೋದು ರಕ್ತದಲ್ಲಿ ಬಂದಿದೆ."

ಮೀನಾಕ್ಷಿಯ ಅಷ್ಟು ದೊಡ್ಡ ಹೊಗಳಿಕೆ ಅವಳನ್ನು ಉಬ್ಬಿಸಲಿಲ್ಲ. ಮೈ ಹೊರಳಿಸಿದಳು. ದ್ರಾಕ್ಷಿ, ಬಿಸ್ಕತ್ತು, ಖಾರದ ಗೋಡಂಬಿ ಮೇಜಿಗೆ ಬಂತು.

"ಬೇಗಂಚೆರ್ಲಾದ ದ್ರಾಕ್ಷಿ ಇದು."

ಅವಳಿಗೆ ಸಣ್ಣ ಗೊಂಚಲು ಎತ್ತಿಕೊಟ್ಟು ತೆಲುಗಿನಲ್ಲಿ ಏನೊ ಹೇಳಿ ಕೋಣೆ ಹೊಕ್ಕ ಕಮಲಹಾಸ.

"ಬಂದೆ, ಒಂದು ನಿಮಿಷ"

ಎಂದು ನಗೆ ಚೆಲ್ಲಿದ ಮೀನಾಕ್ಷಿ ಅವನ ಹಿಂದೆ ನಡೆದು ಕೋಣೆಯ ಬಾಗಿಲು ಮುಚ್ಚಿದಳು.

ಸೌಭಾಗ್ಯ ಎದ್ದು ರೇಡಿಯೊ ಮೇಜು ಒರಗಿ ಮೆಲ್ಲಗೆ ಹರಿಯುತ್ತಿದ್ದ ಸಂಗೀತ ಕೇಳುತ್ತ ನಿಂತಳು. ಕೋಣೆಯಲ್ಲಿ ಮಾತು ನಡೆದಿತ್ತು. ಹೆಜ್ಜೆ ಬಾಗಿಲಿನತ್ತ ಸರಿಯಿತು. ತೆಲುಗು ಚೆನ್ನಾಗಿ ಅರ್ಥವಾಗದಿದ್ದರೂ ತನಗೇ ಸಂಬಂಧಿಸಿದ ಮಾತು!

ಕಮಲಹಾಸ ಗೊಣಗುತ್ತಿದ್ದ.

"ಇಷ್ಟು ದಿನ ಅವಳ ಜೊತೆಗಿದ್ರೂ ವಿಷಯ ಹಿಡಿಯೋದಿಕ್ಕೆ ಆಗ್ಲಿಲ್ಲ ನಿನ್ನಿಂದ."

ಉತ್ತರ ಬಿರುಸು ಕಂಠದಲ್ಲಿ ಬಂತು.

"ಅವಳ ತಲೆಗೂದಲು ಹೊರೆ ಕಂಡ ದಿನವೇ ಕೆಲಸ ಶುರು ಮಾಡ್ದೆ. ಮಾತಾಡೋದೇ ಇಲ್ಲ ಅವಳು. ಮದುವೆಗೆ ಆಸೆ ಹತ್ತೊ ಹಾಗೆ ಪ್ರಯತ್ನ ಮಾಡ್ತಲೇ ಇದ್ದೀನಿ. ಬತ್ತಲೆ ಚಿತ್ರಗಳ ಪುಸ್ತಕ ತೋರಿಸ್ದೆ. ಈಗ ಸುಧಾಕರನ ಜೊತೆ ಓಡಾಡೋಷ್ಟು ಧೈರ್ಯ ತಂದುಕೊಂಡಿದಾಳೆ. ಆದ್ರೂ ಎಳೆ ಬುದ್ಧಿ, ಬಚ್ಚಿ!"

ಸೌಭಾಗ್ಯ ಎದೆಗೆ ಕೈ ಹಚ್ಚಿ ಕಿವಿ ಓರೆಗೊಳಿಸಿದಳು. ಅವನು ಚಿಂತಿತ ಧ್ವನಿ ಎತ್ತಿದ.

"ಹಾರಂಗಿಗೆ ಹೋಗಿದ್ದು ಪ್ರಯೋಜನ ಆಗ್ಲಿಲ್ಲ. ಬರ್ನಾರ್ಡ್ ಹೆಸರಿನ ಡ್ರೈವರ್ ಅಲ್ಲಿದ್ದಿದ್ದು ನಿಜ. ಇವಳು ಅವನು ಮಗಳೇ. ಬರ್ನಾರ್ಡ್ ಹಾರಂಗಿ ಬಿಟ್ಟು ಹೊರಟುಹೋಗಿದಾನೆ. ಕಾರ್ತೀಕನಿಗೆ ಮದುವೆ ಆಯ್ತೂಂತ ಶರ್ಮಿಳಾ ಹೇಳಿದ್ಲು ಅಂದೆ. ಅಲ್ಲಿ ಅಂತಾ ಸುದ್ದಿಯೇ ಇಲ್ಲ. ಕುಶಾಲನಗರದ ಚರ್ಚ್, ದೇವಸ್ಥಾನ ಎಲ್ಲೂ ಆ ಮದುವೆ ನಡೆದಿಲ್ಲ. ಕಾರ್ತೀಕ ಮದುವೆಗೆ ಒಪ್ಪೊ ಮನುಷ್ಯ ಅಲ್ಲ. ಅವನಿಗೆ ಖಂಡಿತ ಮದುವೆ ಆಗಿಲ್ಲ...."

ಸೌಭಾಗ್ಯ ಹೆಜ್ಜೆ ಹಿಂತೆಗೆದು ಸೋಫಾದಲ್ಲಿ ಭಾರವಾಗಿ ಕುಳಿತಳು. ಶರೀರ ಥರಗುಟ್ಟುತ್ತಿತ್ತು. ಕಾರ್ತೀಕನಿಗೆ ಮದುವೆ ಆದ ಸಂಗತಿ ಇವರಿಗೆ ತಿಳಿಯದು. ತನ್ನ ಮದುವೆ ರಹಸ್ಯವಾಗಿ ಉಳಿದಿದೆ! ಊರ್ಜಿತವಾಗುವ ಮದುವೆ?

ಮದುವೆಯ ವಿಷಯವನ್ನು ಗೌಣವಾಗಿಸುವಂತೆ ಹೊಸ ಚಿಂತೆ ತಲೆ ಕೊರೆಯಿತು. ಬರ್ನಾರ್ಡ್ ಹಾರಂಗಿಯಿಂದ ಹೊರಟು ಹೋದ! ಮಗಳ ಚಿಂತೆ ಕೊಡವಿದ ತಂದೆ ಎಲ್ಲಿಗೆ ಹೋದ? ತಾನು ಬರೆದ ಎರಡು ಕಾಗದಗಳಿಗೂ ಉತ್ತರವಿಲ್ಲ.

ಮೌನವಾಗಿ ಅತ್ತಳು ಬಾಲೆ. ಕೋಣೆ ಬಾಗಿಲು ತೆರೆಯಿತು.

"ಮಿಸ್ ಬರ್ನಾರ್ಡ್ , ಏನೂ ಮುಟ್ಟದ ಬೊಂಬೆ ಹಾಗೆ ಕುಳಿತೆ. ಕೋಪ ಬಂದಿರಬೇಕು."

ಕಮಲಹಾಸ ಅವಳ ಪಕ್ಕಕ್ಕೆ ಕುಳಿತು ಸೊಂಪಾದ ತಲೆ ಸವರಿದ.

"ಯಾಕೆ ಅಳ್ತಾ ಇದ್ದಿ?"

ಸಂತೈಸುವ ಸ್ವರದಲ್ಲಿ ಕೇಳಿದಳು ಮೀನಾಕ್ಷಿ.

"ಗೊತ್ತಿಲ್ಲ"

ಅಧಿಕ ಪ್ರಶ್ನೆಗಳಿಗೆ ಅವಕಾಶ ಕೊಡದ ಮುಗ್ಧ ಉತ್ತರ.

"ನಿನ್ನ ಬೇಗಂಚೆರ್ಲಾಗೆ ಕರಕೊಂಡು ಹೋಗ್ತೀವಿ. ಎಷ್ಟು ಚೆನ್ನಾಗಿದೆ ಗೊತ್ತೆ ಆ ಜಾಗ?" ಬೆನ್ನು ಸವರಿದ.

"ಹುಂ" ಕಣ್ಣೊತ್ತಿಕೊಂಡಳು.

"ನಿಮ್ಮನ್ನ ಶಾಲೆ ಹತ್ರ ಬಿಡ್ತೀನಿ."

ಮೀನಾಕ್ಷಿಯ ಕಡೆ ನೋಡಿ ಕಮಲಹಾಸ ಕಾರಿನ ಬೀಗದಕ್ಕೈ ಎತ್ತಿಕೊಂಡ.

* * *

ಸಂಗೀತ ಶಾಲೆಯ ಎದುರು ಗೋಡೆಯ ಮೇಲೆ ಕುಳಿತು ತೊಡೆಯ ಮೇಲಿದ್ದ ಹೆಲ್ಮೆಟ್‌ಗೆ ಪಿಯಾನೊ ನುಡಿಸುವಂತೆ ಬೆರಳು ಆಡಿಸುತ್ತಿದ್ದ ಸುಧಾಕರ ತಟಕ್ಕನೆ ಕೆಳಕ್ಕೆ ಹಾರಿ ಸ್ಕೂಟರ್ ಪಕ್ಕಕ್ಕೆ ನಿಂತ. ಅವನ ಸೌಂದರ್ಯದ ಖನಿ ಲಯಬದ್ಧ ಹೆಜ್ಜೆಗಳಲ್ಲಿ ಬರುತ್ತಿತ್ತು.

ಕೆಂಪು ನಕ್ಷತ್ರಗಳ ಬಿಳುಪು ಸೀರೆ. ಹೊಸ ಕೂದಲಿನ ಪಕ್ಕಕ್ಕೆ ಸಣ್ಣ ಕೆಂಪು ಹೂ. ಕೆಂಪು ಮೆತ್ತೆಯ ಪಾದರಕ್ಷೆ. ಉಬ್ಬಿದ ಎದೆಗೆ ಅಡ್ಡಲಾಗಿ ಹಿಡಿದ ಸಂಗೀತದ ನೋಟ್‌ಬುಕ್.

"ಈ ನಿಧಿ ತನ್ನದು?" ಹೃದಯ ಪಿಸುಗು ಪ್ರಶ್ನೆ ಹಾಕಿತು.

ಸಮ್ಮಾನ, ನಿರಾಶೆಗಳ ಜಿಜ್ಞಾಸೆಯಲ್ಲಿ ತುಟಿಗಳ ಮೇಲೆ ನಾಲಗೆ ಆಡಿಸಿ ನಿಟ್ಟುಸಿರು ಹಾಕಿದ. ಸೌಭಾಗ್ಯ ಸೌಂದರ್ಯ ನಿಧಿ!

"ಇವತ್ತು ಕಾಲುಗಂಟೆ ಹೊತಾಗಿ ಬಂದ್ರಿ. ನಿಮ್ಮೊಂದಿಗೆ ಬಹಳ ಮಾತಾಡಬೇಕು."

ಕಪ್ಪು ಕನ್ನಡಕ ತೆಗೆದು ಅಂದವಾದ ಹಲ್ಲು ಸಾಲು ಮಿನುಗಿಸಿದ.

ಕಿಶೋರಿಯ ಎದೆ ಧಕ್ ಎಂದಿತು. ಎಲ್ಲರಿಗೂ ತನ್ನೊಂದಿಗೆ ಮಾತಾಡುವ ಗೀಳು! ಚಮೇಲಿ ಗಾರ್ಡನ್ಸ್‌ನಲ್ಲಿ ಕಾರ್ತೀಕ ಮಾತಾಡುವ ಕಾತರ ತೋರಿದ. ಅದು ಶರ್ಮಿಳಾ ಬಗೆಗೆ. ಕಮಲಹಾಸ, ಮೀನಾಕ್ಷಿಗೆ ತನ್ನ ಮಮ್ಮಿ, ಪಪ್ಪರ ವಿಷಯದಲ್ಲಿ ಮಾತು ತೆಗೆದು ಯಾವುದೊ ಶೋಧನೆ ನಡೆಸುವ ಚಿಂತೆ. ಈಗ ಸುಧಾಕರ ಮಾತಾಡುವುದೇನು?....ಪ್ರಣಯ!

"ಮಾತಾಡಿ" ಗೋಡೆಗೆ ಒರಗಿದಳು.

"ಇಲ್ಲಿ ಹೇಗೆ ಆಡೋದು? ಶಾಂತವಾದ ಜಾಗಕ್ಕೆ ಹೋಗೋಣ. ಪಾರ್ಕುಗಳು ಬೇಡಾಂತ ನೀವೇ ಹೇಳಿದ್ರಿ."

"ಮನೆಗೆ ವಿಷಯ ತಿಳಿದರೆ ನೊಂದುಕೊಳ್ತಾರೆ. ಅದಕ್ಕೆ ಬೇಡ ಅಂದೆ."

"ಸರಿ, ಬನ್ನಿ"

ಸ್ಕೂಟರ್ ಯಂತ್ರ ಶಬ್ದ ಮಾಡಿತು. ಅವನ ಕೈ ತಟ್ಟಿದಳು.

"ಗುಟ್ಟು ಅಂದ್ರೆ ಮೆರವಣಿಗೇನೆ? ನಿಮ್ಮ ಹಿಂತೆ ಕೂತ್ರೆ ಗತಿ!"

"ನಿಮ್ಮ ಮಾತಿಗೆ ವಿರೋಧ ಇಲ್ಲ. ಹತ್ತು ನಿಮಿಷ ನಿಂತಿರಿ."

ಹೆಲ್ಮೆಟ್ ಏರಿಸಿ ಸುಂಯ್ಯನ ಸರಿದು ಹೋದ ಸುಧಾಕರ ಹತ್ತು ನಿಮಿಷದಲ್ಲಿ

ವಾಹನ ಎಲ್ಲಿಯೊ ನಿಲ್ಲಿಸಿ ಬಂದ.

"ಎಲ್ಲಿಗೆ ಹೋಗೋಣ?" ಎಚ್ಚರಿಕೆಯಿಂದ ಕೇಳಿದ. ಅವಳಿಗೆ ಮನಸ್ಸು ಸರಿಯಿಲ್ಲವೆಂದು ಗ್ರಹಿಸಿದ.

"ಎಲ್ಲಿಗಾದ್ರು ಸರಿ"

ಅವನನ್ನು ನಿರಾಶೆಗೊಳಿಸಲು ಇಚ್ಛಿಸಲಿಲ್ಲ. ಇಬ್ಬರೂ ಆಟೊ ಹಿಡಿದು ರೈಲ್ವೆ ನಿಲ್ದಾಣದ ಸಮೀಪದ ಬಸ್‌ಸ್ಟ್ಯಾಂಡ್‌ನಲ್ಲಿ ಇಳಿದರು.

"ಐದಾರು ಮೈಲಿಯಷ್ಟು ಆಚೆ ಹೋದ್ರೆ ಹೇಗೆ? ಅಲ್ಲಿಗೂ ಸಿಟಿ ಮುಗಿದಿರೋದಿಲ್ಲ... ಹೆದರಬೇಡಿ, ಸೌಭಾಗ್ಯ. ನಾವು ಜಂಗಲ್‌ಗೆ ಹೋಗ್ತಾ ಇಲ್ಲ."

ಸಂಕೋಚದಲ್ಲಿ ಸಮ್ಮತಿಸಿದಳು. ಷಟಲ್ ಬಸ್ ಏರಿದರು. ಏಳು ಮೈಲಿ ಸಾಗಿ ವಾಹನ ನಿಂತಾಗ ಅವಳಿಗೆ ಇಳಿಯಲು ಸೂಚಿಸಿದ.

ಸುಂದರ ಹುಲ್ಲು ಹಾಸುಗಳು. ಕಪ್ಪು, ಹಸಿರು ಮರಗಳೊಂದಿಗೆ ತೆಂಗುಗಳ ಸಮೂಹ. ಮಧ್ಯೆ ಇಣುಕುವ ಹೆಂಚು ಚಾವಣಿಗಳು.

ದೃಶ್ಯ ವೀಕ್ಷಣೆಯಲ್ಲಿದ್ದವಳ ಭುಜ ಸ್ಪರ್ಶಿಸಿದ.

"ಇದು ಕೆಂಗೇರಿ. ಬೆಂಗಳೂರು ಉಪನಗರ ಅಂತ ಕೇಳಿರಬೋದು. ಇಲ್ಲೊಬ್ಬ ಬಂಧು ಇದಾರೆ."

ಕಸಿವಿಸಿಗೊಂಡಳು.

"ನಿಮ್ಮ ಬಂಧುಗಳ ಮನೆಗೆ ನನ್ನ ಕರಕೊಂಡು ಹೋಗ್ತೀರಾ?"

"ಛೆ, ಅಲ್ಲಿ ಹೇಗೆ ನಿಮ್ಮೊಂದಿಗೆ ಮಾತಾಡೋದು. ಹೀಗೇ ಹೋಗೋಣ ಬನ್ನಿ."

ಎಡ ಪಕ್ಕದ ನಿರ್ಜನ ಭಾಗಕ್ಕೆ ಕೈ ತೋರಿದಳು.

ಕೆರೆಯ ಅಭಿಮುಖ ದಿಕ್ಕಿನಲ್ಲಿ ಬೇಲಿಗಳ ಮಧ್ಯದ ಮಣ್ಣು ರಸ್ತೆಯಲ್ಲಿ ನಡೆದರು. ಹಸಿರು ಆವರಣ ಅವಳನ್ನು ಆಕರ್ಷಿಸಿತ್ತು. ಅಡ್ಡ ಹರಿದ ಸಣ್ಣ ತೊರೆಯನ್ನು ದಾಟಿ ಮತ್ತಷ್ಟು ನಡೆದು ಹುಲ್ಲು ದಿಬ್ಬದ ಮೇಲೆ ಕುಳಿತರು.

"ಗಂಟೆ ಎಷ್ಟು?" ಅವನ ಕೈ ತಿರುವಿ ನೋಡಿದಳು.

"ಆರೂಕಾಲು"

ಆಕಾಶದ ಕಡೆ ಮುಖ ಎತ್ತಿದಾಗ ಅರ್ಧ ಗಂಟೆಗೆ ಮೊದಲೇ ಕತ್ತಲು ಸುರಿಸುವಂತೆ ಸೂಚನೆ ಕೊಡುತ್ತಿತ್ತು ಮುಗಿಲು.

"ಬೇಗ ಹೋಗ್ಬೇಕೇನು?" ನಯವಾಗಿ ಕೇಳಿದ.

"ಏಳೂವರೆಗೆ ಮುಂಚೆ ಹೋದರೂ ಒಂದು ಕಾರಣ ಬೇಕು."

"ನಿಮ್ಮ ಪೋಷಕ ಬಹಳ ಕಟ್ಟುನಿಟ್ಟೂಂತ ಕಾಣತ್ತೆ. ಜೊತೆಗೆ ವಿಪರೀತ ಗಾಂಭೀರ್ಯ. ಅವತ್ತು ನನ್ನ ಮಾತಿನಲ್ಲಿ ಏನು ಹೆಚ್ಚು, ಕಡಿಮೆ ಆಯ್ತೊ ಕಾಣೆ. ನಿರ್ದಾಕ್ಷಿಣ್ಯವಾಗಿ ಕಾರಿನಿಂದ ಇಳಿಯೋದಿಕ್ಕೆ ಹೇಳಿದ್ರು...."

"ಪೋಷಕನ ತಾಯಿಯ ಹೆದರಿಕೆ ಜಾಸ್ತಿ. ಸ್ವರ್ಣಮ್ಮ ಒಳ್ಳೇರು. ಅವರ ಒಳ್ಳೆತನಕ್ಕೆ ಸರಿಯಾಗಿ ನಡೆಕೊಬೇಕು."

"ಕಾರ್ತೀಕ ನಿಮ್ಮನ್ನ ಪೋಷಿಸುತ್ತಾ ಇರೋದು ಯಾಕೆ?

ನೇರವಾದ ಪ್ರಶ್ನೆಯಿಂದ ಮಾತಿಗೆ ಧುಮುಕಿದ. ಆ ಹಳೆಯ ಪ್ರಶ್ನೆಗೆ ಉತ್ತರಿಸಿ ಸಾಕಾಗಿದ್ದಳು.

"ಹೇಳಿದ್ನಲ್ಲ ನನ್ನ ತಾಯಿಗೆ ಕೊಟ್ಟ ಮಾತು ಅದು."

"ಅದಕ್ಕೆ ನಿಮ್ಮ ತಂದೆ ಒಪ್ಪಿದ್ದು ಹೆಚ್ಚು."

ವಿಷಯ ಹೊರಡಿಸಲು ಹಾಕಿದ ತಿರುವು ಮಾತು ಅದು. ಅವಳ ಮುಖ ಬಿರುಸಾಯಿತು. ನಯವಾಗಿಯೇ ನುಡಿದಳು.

"ನನ್ನ ಡ್ಯಾಡಿ ಶ್ರೀಮಂತರಲ್ಲ. ಟ್ರಕ್ ಡ್ರೈವರ್...."

"ಟ್ರಕ್ ಡ್ರೈವರ್?" ಕೈ ಎತ್ತಿ ಅವಳತ್ತ ತಿರುಗಿದ. ಅವನ ಮುಖ ನಿರುಕಿಸಿ ತಲೆ ತಗ್ಗಿಸಿದಳು.

"ಯಾಕೆ, ಆಶ್ಚರ್ಯಪಟ್ಟ ಹಾಗೆ ನಟಿಸ್ತೀರಿ? ನನ್ನ ಡ್ಯಾಡಿ ಟ್ರಕ್ ಡ್ರೈವರ್ ಅನ್ನೋದು ಗೊತ್ತಾಗಿದೆ ನಿಮಗೆ. ಈ ಪ್ರಶ್ನೆ ಕೇಳ್ತಾ ಇರೋದು ನೀವಲ್ಲ. ನಿಮ್ಮ ಮೂಲಕ ಉತ್ತರಪಡೀತಾ ಇರೋರು ಬೇರೆ."

'ಉಫ್' ಎಂದು ಸೋತು ಕೈಗಳನ್ನು ಹಿಂದಕ್ಕಿಟ್ಟು ದೇಹ ಸರಿಸಿದ ಸುಧಾಕರ.

"ನಿಮ್ಮ ಮಾತಿಗೆ ಇಲ್ಲ ಅನ್ನೋದಿಲ್ಲ, ಸೌಭಾಗ್ಯ. ನೀವು ಮೀನಾಕ್ಷಿಗೆ ವಿಷಯ ತಿಳಿಸೋದಿಲ್ಲಾಂತ ನನ್ನ ಮೂಲಕ ಕೇಳ್ತಾ ಇದಾಳೆ."

"ಗೊತ್ತಿಲ್ಲದ ವಿಷಯ ಹೇಳೋದಿಕ್ಕೂ ಬದ್ಧಳಲ್ಲ."

ಬೆರಗಾದವನು ಚೇತರಿಸಿಕೊಂಡ.

"ನಿಮ್ಮ ಮಾತಿನ ಹರಿತ, ಚಾಕಚಕ್ಯತೆ ದಿನೇ ದಿನೇ ಹೆಚ್ತಾ ಇದೆ."

ಹೊಗಳಿಕೆ ಬೇಕಿರಲಿಲ್ಲ.

"ಅದಕ್ಕೆ ಕಾರಣ ನನ್ನ ಪೋಷಕನ ಲೈಬ್ರರಿ. ಈಗ ನಾನು ಪೂರೈಸಿರೋದು ಐವತ್ತೆರಡನೆ ಪುಸ್ತಕ"

ಅವನು ಮೌನಗೊಂಡ. ಒಣ ನಗೆ ತೋರಿ ಮತ್ತೆ ಕೇಳಿದಳು.

"ಈ ಪ್ರಶ್ನೆಗಳನ್ನ ಹಾಕೋದಿಕ್ಕೆ ಇಷ್ಟು ದೂರ ಕರಕೊಂಡು ಬಂದ್ರಾ?"

ತಬ್ಬಿಬ್ಬಾಗಿ ಸಾವರಿಸಿಕೊಂಡು ಕುಳಿತ ಸುಧಾಕರ.

"ಇಲ್ಲ, ನನ್ನ ಮಾತು ಆಡ್ತೀನಿ. ಕಾರ್ತೀಕ ಇನ್ನೂ ಮದುವೆ ಆಗಿಲ್ಲ ಅನ್ನೋದು ಅದ್ಭುತ ಸಂಗತಿ. ಅವರು ಈ ಮಟ್ಟದ ಸಂಯಮಿ ಅಂತ ತಿಳಿದಿರಲಿಲ್ಲ."

ಸಂಯಮಿ? ಪದದ ಅರ್ಥ ಅವಳಿಗೆ ತಿಳಿಯದು.

"ಇದೂ ನಿಮ್ಮ ಮಾತು ಅಲ್ಲಾಂತ ಬಲ್ಲೆ. ಕಾರ್ತೀಕ ನನ್ನ ಪೋಷಕ, ರಕ್ಷಕ. ನನ್ನ ಪಾಲಿನ ದೇವರು. ಅವರ ಮದುವೆ ವಿಷಯ ನಮಗೆ ಯಾಕೆ?.... ಆ ಮಾತು ಬಿಡಿ."

ಅವನಲ್ಲಿ ಉತ್ಸಾಹ ಕುಗ್ಗಿತು. ಸಮೀಪಕ್ಕೆ ಸರಿದು ಅವಳ ಕೈ ತಟ್ಟಿದ. ಸೌಭಾಗ್ಯ ಮೊನಚು ನೋಟ ಹಾಕಿದಳು.

ಮೀನಾಕ್ಷಿಯ ಅವ್ಯಕ್ತ ಹುನ್ನರಿನ ಸಹಾಯಕ! ತನ್ನಲ್ಲಿ ಮದುವೆಯ ಆಸೆ ಮೂಡಿಸುವ ಸಾಧಕ!

"ನಾನು ನಿಮ್ಮನ್ನ ಪ್ರೀತಿಸ್ತೀನಿ ಅಂದೆ. ನಿಮ್ಮನ್ನ ಮದುವೆ ಆಗೊ ಇಚ್ಛೆ ಕಾರ್ತೀಕನಿಗೆ ತಿಳಿಸ್ದೆ..."

ಅವಳು ಸುತ್ತಲೂ ಹಸಿರುಗಳ ಕುಣಿತ. ಕಪ್ಪು ಆಗಸದ ಏರಿಳಿತ.

"ಏನು ಹೇಳಿದ್ರು?" ಕಂಪಿಸಿತು ಸ್ವರ.

"ಏನೂ ಹೇಳ್ಲಿಲ್ಲ. ಬಹಳ ಗಂಭೀರ ಮನುಷ್ಯ. ನಾನೇ ಬಹುಶಃ ಸರಿಯಾಗಿ ಹೇಳದೆ ಉತ್ತರ ಬರದ ಹಾಗೆ ಮಾಡಿಕೊಂಡೆ. ವಿಶಾಲ ಹೃದಯಿ ಅನ್ನೋದು ಗೊತ್ತಾಯ್ತು. ಅವರು ನಿಮ್ಮ ಪಾಲಿನ ದೇವರು ಅಂದ್ರಿ. ಅವರಿಗೆ ನಿಮ್ಮ ಮೇಲೆ ಪ್ರೀತಿ ಹೆಚ್ಚಾಗಿ ನಿಮ್ಮನ್ನ ಮದುವೆ ಆಗಬೇಕೂಂತ ಬಯಸಿದರೆ?.... ಅವರಿಗೆ ಒಂದು ರೀತಿಯಲ್ಲಿ ಅಧಿಕಾರ ಇದೆ ನೋಡಿ."

ತಲೆ ಎತ್ತಿದಳು. ಸುಧಾಕರನಿಂದ ತನ್ನ ಪರೀಕ್ಷೆ ನಡೆಯುತ್ತಿದೆ! ತಲೆ ಇಳಿಸಿ ಗಂಭೀರವಾಗಿ ಧ್ವನಿಸಿದಳು.

"ಹಾಗೆ ಬಯಸಿದರೆ ತಪ್ಪಿಲ್ಲ. ಅವರಿಗೆ ಅಧಿಕಾರ ಇದೆ. ಗಿಡ ಬೆಳೆಸಿದೋರಿಗೆ ಅದರ ಹಣ್ಣು ತಿನ್ನೋದಿಕ್ಕೆ ಹಕ್ಕಿದೆ."

ಅವನ ಮಿದುಳಿನಲ್ಲಿ ಜೋಡಿ ಸಲಾಕೆ ಹಿಂದು, ಮುಂದು ಸರಿದಾಡಿತು. ಮಾತು ಬತ್ತುವ ಮೊದಲು ನುಡಿ ಬಂತು.

"ಇದೇ ಮಾತು ಅವರಿಗೆ ಹೇಳಿಬಿಟ್ಟೆ."

"ಏನಂದ್ರು" ಅವಳಲ್ಲಿ ಅಚ್ಚರಿ ಉಳಿದಿರಲಿಲ್ಲ.

"ಅವರಿಗೆ ಮೂಡ್ ಇರ್ಲಿಲ್ಲ. ಕಾರಿನಿಂದ ಇಳಿಯೋದಿಕ್ಕೆ ಹೇಳಿದ್ರು. ಆ್ಯಕ್ಸಿಡೆಂಟ್ ಆದೀತು ಅನ್ನೋಷ್ಟು ಭಯ. ನಿಜವಾಗಿ ನನಗೇ ಆಘಾತ ತಟ್ಟಿತ್ತು. ನಾನು ನಿಮ್ಮ ಅಭಿಪ್ರಾಯಕ್ಕೆ ಕಾಯ್ತಾ ಇದೀನಿ, ಸೌಭಾಗ್ಯ."

ಅವಳ ತಲೆಗೂದಲು ಹಿತವಾಗಿ ಅಲುಗಿಸಿದ. ತೋಳಿನಿಂದ ಭುಜ ಬಳಸಿದ. ಅವನ ಕೈ ಸರಿಸಿ ಎದ್ದು ನಿಂತಳು ಸೌಭಾಗ್ಯ. ಅವನೂ ಎದ್ದು ನಿಂತು ಕೈ ಹಿಸುಕಿದ.

"ಕೋಪ ಬಂತೆ?"

ಕ್ಷಮೆ ಯಾಚಿಸುವಂತೆ ನಿಟ್ಟಿಸಿದ. ವಿಕಾರಗೊಳ್ಳದ ಮುಖ.

"ಅವತ್ತೇ ಹೇಳ್ದೆ. ಮತ್ತೆ ಹೇಳ್ತೀನಿ. ನಾನು ಇನ್ನೂ ಚಿಕ್ಕೋಳು" ಹೃದಯ ಹಿಂಡಿದಂತಾಯಿತು. ಚಿಕ್ಕವಳೆಂದು ತಿಳಿದರೂ ವಯಸ್ಸು ಮೀರಿದವನ ಮಡದಿ!

"ನಾನೂ ಚಿಕ್ಕೋನೆ, ಸೌಭಾಗ್ಯ" ಶಿಶುವಿನಂತೆ ಹೇಳಿದ.

"ನಾನು ಇನ್ನೂ ಕಲೀಬೇಕು. ತುಂಬಾ ಪುಸ್ತಕ ಓದಬೇಕು. ಆಮೇಲೆ ಮದುವೆ ಆಸೆ ನನ್ನಲ್ಲಿ ಹುಟ್ಟಬೇಕು."

ಕಡೆಯ ಮಾತು ಅವಳನ್ನು ಜಗ್ಗಿತು. ಅವನು ಉಗುಳು ನುಂಗಿದ.

"ತಕ್ಷಣ ಮದುವೆ ಆಗೀಂತ ಕೇಳ್ತಾ ಇಲ್ಲ. ನಾನೂ ಕಲೀತಾ ಇದೀನಿ. ನಿಮ್ಮ ನಿರ್ಧಾರಕ್ಕೆ ಕಾಯ್ತೀನಿ."

ಕತ್ತಲಿನ ಆವರಣದ ಅರಿವಾಯಿತು.

"ಬನ್ನಿ, ಬಹಳ ಹೊತ್ತಾಗಿದೆ"

ಅವನ ಮುಂದಿನ ಮಾತುಗಳಿಗೆ ತೆರೆಬಿದ್ದಿತ್ತು. ಗಡಿಯಾರ ನೋಡಿದ. ಏಳೂಕಾಲು ಸಮೀಪಿಸಿತ್ತು. ರಸ್ತೆಯಲ್ಲಿ ಸಾಗುವಾಗ ಏಕಾಏಕಿ ಮಾತೆತ್ತಿದಳು.

"ನನಗೆ ಮೀನಾಕ್ಷಿಯ ಮೇಲೆ ಸಂಶಯ ಬಂದಿದೆ. ಅವರು ಪಾಪ್ ಸಂಗೀತ ಕಲಿಯೋದಿಕ್ಕೆ ಕನ್ಸರ್ವೆಟೋರಿಯಂ ಸೇರಿದ್ದು ಅಂದ್ರು. ಅಲ್ಲಿ ತೃಣವೂ ಕಲಿತಿಲ್ಲ. ಪಾಪ್ ಸಂಗೀತ ಕೇಳೋದಿಕ್ಕೂ ಹೋಗಿಲ್ಲ. ಬಹುಶಃ ನನ್ನ ಗಮನಿಸೋದಿಕ್ಕೆ ಶಾಲೆ ಸೇರಿದ ಹಾಗೆ ಕಾಣತ್ತೆ."

"ಆದರೆ ನಾನು ಪಿಯಾನೊ ಕಲೀತಾ ಇರೋದು ನಿಜ" ಗಾಬರಿಯಿಂದ ಪ್ರತಿ ನುಡಿದ.

ಸಿಟಿಗೆ ಹೊರಡಲಿದ್ದ ಬಸ್ ಯಂತ್ರದ ತೊಂದರೆಯಿಂದ ನಿಂತಿತ್ತು. ಇಬ್ಬರೂ ಕಾದು ನಿಂತರು. ಎಂಟು ಗಂಟೆ ಆದಾಗ ನೋವಿನಿಂದ ವಿನಂತಿಸಿದ.

"ಕ್ಷಮಿಸಿ, ನನ್ನಿಂದ ತೊಂದರೆ ಆಯ್ತು. ಹೀಗಾಗತ್ತೆ ಅಂತ ತಿಳಿದಿರಲಿಲ್ಲ."

"ಸ್ವರ್ಣಮ್ಮನಿಗೆ ಈಗಲೇ ನನ್ನ ಮೇಲೆ ಸಂಶಯ ಬಂದಿದೆ. ಹೋದ ಮೇಲೆ ಏನು ಅಂತಾರೊ ಅಂತ ಭಯ."

ಅವನು ನಿರುತ್ತರನಾದ. ಎಂಟೂವರೆಯ ಹೊತ್ತಿಗೆ ಮೈಸೂರು ಕಡೆಯಿಂದ ಷಟಲ್ ಬಸ್ ಕಾಣಿಸಿತು. ತುಂಬಿದ ವಾಹನ ನಿಲ್ಲದೆ ಸರಿದು ಹೋಯಿತು.

ಹಣೆಯ ಬೆವರು ಒರೆಸಿದ. ಅವನ ತಾಕಲಾಟ ಗ್ರಹಿಸಿದವಳು ಏನೂ ಹೇಳದೆ ರಸ್ತೆಯ ಅಂಚಿನ ಕಬ್ಬಿಣದ ಕಟ್ಟೆ ಒರಗಿ ನಿಂತಳು. ಒಂಬತ್ತರ ನಂತರ ಬಸ್ ಸಿಕ್ಕಿತು.

"ಹೊತ್ತು ಮೀರಿಬಿಡ್ತು. ನಿಮ್ಮೊಂದಿಗೆ ಬಂದು ಸ್ವರ್ಣಮ್ಮನಿಗೆ ಸಮಾಧಾನ ಹೇಳ್ತೀನಿ."

ಸಂತೈಸುವಂತೆ ಮೆಲ್ಲನೆ ಸೂಚಿಸಿದ. ಕಿಟಕಿಯಲ್ಲಿ ಕತ್ತಲಿಗೆ ದೃಷ್ಟಿ ಹೂಡಿದವಳು ಸ್ವಲ್ಪವೂ ಕದಲದೆ ನಿಖರವಾಗಿ ಹೇಳಿದಳು.

"ಅವರ ಸಂಶಯ ಮತ್ತಷ್ಟು ಏರತ್ತೆ, ಅದರ ಗೋಜು ನಿಮಗೆ ಬೇಡ. ಕೈ ಮೀರಿದ ವಿಷಯಕ್ಕೆ ತೊಂದರೆ ಯಾಕೆ ತೊಗೊಳ್ತೀರಿ."

ಅವಳ ವ್ಯಂಗ್ಯದ ಕಿರು ನಗೆ ಎದೆ ಇರಿಯಿತು. ಬಿಸಿ ಉಸಿರು ಹಾಕಿ ಕೈ ಕಟ್ಟಿ ಕುಳಿತ.

* * *

ಹಾಲು ಚೆಲ್ಲಿದಂತೆ ಹರಡಿತ್ತು ಬೆಳದಿಂಗಳು. ಮಹಡಿಯ ವರಾಂಡದ ಕೊಳವೆಗಂಬ ಒರಗಿ ಮೋಟು ಗೋಡೆಯ ಮೇಲಿದ್ದ ಬುಲ್ ಬುಲ್ ತರಂಗದ ಮೇಲೆ ಬೆರಳಾಡಿಸಿದ ಕಾರ್ತೀಕ. ಭಾವಗೀತೆಯ ಎರಡು ಪಂಕ್ತಿಗಳು ಹರಿದ ಮೇಲೆ ನೀಳವಾದ ಶೋಕ ಸ್ವರ ಬಂತು. ನಿಮಿಷದ ರಾಗ ದೀರ್ಘವಾಗಿ ಕಂಡಿತು.

ಬೆರಳುಗಳ ಸರಿದಾಟ ನಿಂತಿತು. ಮುಂದಕ್ಕೆ ಬಾಗಿ ನೋಡಿದ. ಗಿಡಗಳ ಮಧ್ಯದ ನೆಲ ಕಾಣಿಸಿತು. ಸೌಭಾಗ್ಯಳ ಕಣ್ಣು ತಪ್ಪಿಸಲು ಕತ್ತಲಿನಲ್ಲಿ ಜಿಗಿದಾಗ ತೀವ್ರತರದ ಅಪಾಯ ತಪ್ಪಿಸಿದ ಹುಡಿ ಮಣ್ಣಿನ ಪಾತಿ, ಮೂಢತನಕ್ಕೆ ತನ್ನಲ್ಲೇ ನಗು ತಂದುಕೊಂಡ.

ನಯವಾದ ಸಪ್ಪಳದಿಂದ ಹಿಂದಕ್ಕೆ ತಿರುಗಿದ. ಸೌಭಾಗ್ಯ ನಿಂತಿದ್ದಳು. ಕೌಮುದಿಯ ಬೆಳಕಿನಲ್ಲಿ ಚೆನ್ನಾಗಿ ಕಾಣುವ ಬಿಳುಪು ಸೀರೆಯ ಚೆಲುವೆ. ಈಗ ಅವಳಲ್ಲಿ ಚೆಲುವು ಏರುತ್ತಿರುವುದು ನಿಜ!

"ನಿನಗೆ ಬಹಳ ಬೇಜಾರಾಗಿರಬೇಕು, ಸೌಭಾಗ್ಯ. ಒಂದು ಸಾರಿ ಹಾರಂಗಿಗೆ ಹೋಗಿ ಬಂದಿದ್ರೆ...ಹಾಂ, ನಾವು ಮತ್ತೆ ಅಲ್ಲಿಗೆ ಕಾಲಿಡಬಾರದೂಂತ ತೀರ್ಮಾನ ಮಾಡಿದ್ದೆವಲ್ಲ. ಅಮ್ಮ ಹೇಳ್ತಿದ್ಲು ನಿನ್ನ ಪಪ್ಪ ಯಾಕೆ ಹೀಗೇಂತ. ಎರಡು ತಿಂಗಳ

ಮೇಲಾದ್ರೂ ಮಗಳನ್ನ ನೋಡೋದಿಕ್ಕೆ ಬರಲಿಲ್ಲ ಅಂತ ಅವಳ ಆಕ್ಷೇಪಣೆ."

ಮಾತನಾಡುವ ಸಲುವಾಗಿಯೇ ಬಂದವಳು ತಂದೆಯ ನೆನಪಿನಿಂದ ಅಲುಗಿ ನಿಂತಳು. ಕೊರಳು ಬಿಗಿ ಬಂತು.

"ಎರಡು ಕಾಗದ ಬರೆದಿದ್ದೆ. ಉತ್ತರ ಇಲ್ಲ. ಪಪ್ಪ ಹಾರಂಗಿಯಿಂದ ಹೊರಟು ಹೋದಾಂತ ತಿಳಿದೆ."

ಅವನಲ್ಲಿ ಏನೊಂದೂ ಬದಲಾವಣೆ ಕಾಣಲಿಲ್ಲ. ಕಟು ಮನುಷ್ಯ! ತುಟಿ ಕಚ್ಚಿದಳು. ತನ್ನಲ್ಲಿ ಆಸ್ಥೆ ಇಲ್ಲದವನಿಗೆ ತನ್ನ ತಂದೆಯ ಸಂಗತಿ ಏಕೆ?

"ನನಗೆ ಬಹಳ ಮಾತಾಡಬೇಕೂಂತ, ಮಾತಾಡೊ ಧೈರ್ಯ ಇಲ್ಲ. ನೀವು ಹೆಚ್ಚಾಗಿ ಮಾತಾಡೋದಿಲ್ಲ."

ರಸ್ತೆಯ ದಿಕ್ಕಿಗೆ ನೋಡಿದಳು. ಅವಳನ್ನು ನಿಲುವು ಪೂರ್ತಿ ನೋಡಿದ.

"ಬಹಳ ಮಾತಾಡೋದ್ರಿಂದ ಪ್ರಯೋಜನ ಇಲ್ಲ, ಸೌಭಾಗ್ಯ ಸುತ್ತಲಿನ ಪ್ರಪಂಚ ವಾರಕ್ಕೆ ಸಾಕಾಗುವುದು ಮಾತುಗಳನ್ನು ಒಂದೇ ದಿನದಲ್ಲಿ ಆಡ್ತಾ ಇರೋವಾಗ ನಾವಿಬ್ರೂ ಮಿತಭಾಷಿಗಳಾದ್ರೆ ನಷ್ಟ ಇಲ್ಲ. ಹಾಗಂತ ನಿಮ್ಮ ಮಾತಿಗೆ ಅಡ್ಡಿ ಇಲ್ಲ. ಧೈರ್ಯವಾಗಿ ಆಡು."

ಅರ್ಥವಾಗದವ! ತಾನೂ ಮಿತಭಾಷಿ ಆಗಲೆಂಬ ಪರೋಕ್ಷ ಸಲಹೆ. ಅವನ ನಗೆ ಮುಖ ಧೈರ್ಯ ಹೆಚ್ಚಿಸಿತು.

"ಸುಧಾಕರನ ವಿಷಯದಲ್ಲಿ ಅತ್ತೆ ಹೇಳಿರಬೇಕು...."

ಉಸಿರು ಕಟ್ಟಿ ಮುಷ್ಟಿ ಬಿಗಿಸಿದಳು. ಕಾರ್ತೀಕ ತಲೆ ಎತ್ತಿದ. ಮುಖದ ನಗೆ ಮಾಯವಾಯಿತು.

ಸುಧಾಕರ? 'ಮಣ್ಣಿನ ದೋಣಿ'ಯ ಖಳನಾಯಕ! ಉತ್ಸಾಹದ ಕಣ್ಣುಗಳ, ಪೊರೆ ಕಳಚಿದ ನಾಗರ!

"ಸಂಗೀತ ಶಾಲೆಯ ಸ್ನೇಹಿತ ಅಲ್ಲವೆ? ಹಾಂ, ಅವನ ಸಂಗಡ ನೀನು ಓಡಾಡೋದು. ಅವನ ಹೋಟೆಲಿಗೆ ಭೇಟಿ ಕೊಡೋದು. ಹೋದ ವಾರ ಅವನೊಂದಿಗೆ ರಾತ್ರಿ ಹತ್ತು ಗಂಟೆಗೆ ಮನೆಗೆ ಹಿಂತಿರುಗಿದ್ದು ಎಲ್ಲಾ ಅಮ್ಮ ಹೇಳಿದ್ಲು. ಅವೆಲ್ಲ ಸಣ್ಣ ವಿಷಯಗಳು. ಅವು ತಪ್ಪು ಅಂತ ನಾನು ತಲೆ ಕೆಡಿಸಿಕೊಳ್ಳೋದಿಲ್ಲ."

ಚಿಮ್ಮಲಿದ್ದ ಜೀವ ಅವಳಲ್ಲೇ ಉಳಿದಂತಾಯಿತು. ಕಾರ್ತೀಕ ಮತ್ತಷ್ಟು ಅರ್ಥವಾಗದೆ ಮಬ್ಬಾಗಿ ಕಾಣಿಸಿತು.

"ಸುಧಾಕರ ನಿಮ್ಮ ಜೊತೇಲಿ ಮಾತಾಡಿದ್ರಂತೆ..."

ಅವನು ತುಸು ಶಾಂತವಾಗಿರುವಾಗಲೇ ಮಾತು ಮುಗಿಸುವ ಆತುರದಲ್ಲಿ ಹೇಳಿದಳು.

"ಎಲ್ಲರಿಗೂ ಆಸೆ ಇರುತ್ತೆ. ಅದು ದೋಷ ಅಲ್ಲ. ಅವನಿಗೂ ಆಸೆ, ಕನಸು. ಆಸೆಗೆ ಆಕಾರವಿಲ್ಲ. ಕನಸಿಗೆ ಅಂತ್ಯವಿಲ್ಲ. ನನ್ನ ಮುಂದೆ ವಿಷಯ ಬಿಚ್ಚಿದ. ನನಗೆ ಉತ್ತರ ಹೊಳೆಯಲಿಲ್ಲ. ಆ ಪರಿಸ್ಥಿತಿ ನಿನಗೇ ಅರ್ಥವಾಗಬೋದು. ಮುಂದಿನ ಮಾತಿಗೆ ಅವಕಾಶವಾಗದ ಹಾಗೆ ಒಂದು ಮುಖವಾಡ ಹಾಕ್ಕೊಂಡೆ. ಸೌಭಾಗ್ಯ ಬರಹಗಾರನ ಹೆಂಡತಿ ಅನ್ನೊ ಮಾತು ಕೇಳಿರಬೋದು. ಹೆಂಡತಿಗೆ ತೃಪ್ತಿ ಇಲ್ಲ. ಗಂಡನಿಗೆ ಶಾಂತಿ ಇಲ್ಲ..."

"ನನಗೆ ತೃಪ್ತಿ ಇದೆ. ನಿಮಗೆ ಶಾಂತಿ ಇಲ್ಲ ಅನ್ನೋದು ನಿಜ."

"ಜೋಡಿ ಬೆಟ್ಟಗಳು. ಮಧ್ಯೆ ಆಳವಾದ ಕಂದರ."

"ಬೆಟ್ಟಗಳನ್ನ ಕೂಡಿಸೊ ಹಾಗೆ ಸೇತುವೆ ಕಟ್ಟಬೋದು."

ಬರಹಗಾರನಿಗೆ ಸಮ ಜೋಡಿಯಲ್ಲಿ ಆಡಿದ ಮಾತು! ಅದು ವ್ಯರ್ಥ ಎನಿಸಿತು. ಏದುಸಿರು ಬಂತು.

ಆಶಾವಾದಿಯ ಕೈ ಎತ್ತಿ ತನ್ನ ಎದೆಗೆ ಮುಟ್ಟಿಸಿದ. ಅವನ ಕಂಪನ ಗ್ರಹಿಸಿದವಳಿಗೆ ಅಳು ಬಂತು.

"ಏನೇನೊ ಹೇಳೋದಿಕ್ಕೆ ಹೊರಟಿದೀರಿ. ನನಗೆ ತಿಳಿಯೋದಿಲ್ಲ. ನೀವು ನನ್ನಲ್ಲಿ ಮುಚ್ಚು ಮರೆ ಮಾಡಿದ್ರಿ."

ಶಕ್ತಿ ಉಡುಗಿ ಭಯ ಆವರಿಸಿತು.

"ಬೇರೆಯೋರ ಒಳ್ಳೇದಕ್ಕೆ ಕೆಲವೊಂದು ಸಾರಿ ಮುಚ್ಚುಮರೆ, ರಹಸ್ಯ ಬೇಕಾಗುತ್ತೆ."

ಕಾದಂಬರಿಗೆ ಮೀಸಲಾದ ಮಾತು. ಬರಹಗಾರನ ಪದಗಳನ್ನೇ ಬಳಸುತ್ತಿದ್ದ.

"ನೀವು... ಶರ್ಮಿಳಾ ವಿಷಯದಲ್ಲಿ ಹೇಳಬೋದಾಗಿತ್ತು..." ಕಣ್ಣೊತ್ತಿಕೊಂಡಳು.

"ನಿನ್ನ ಎಳೆ ಹೃದಯದ ಮೇಲೆ ಅದರ ಪರಿಣಾಮ ಹೇಗೊಂತ ಹಿಂಜರಿದೆ. ಆಮೇಲೆ ಅದನ್ನೇ ಹೇಳಬೇಕೂಂತ ಎರಡು ಸಾರಿ ಪ್ರಯತ್ನಪಟ್ಟೆ. ಯಾವುದೊ ಅಡ್ಡಿ."

ಅವಳು ಏನೂ ಹೇಳದೆ ನಿಂತಳು. ಕಾರ್ತೀಕ ವಾದ್ಯದ ತಂತಿ ಸವರುತ್ತ ಮುಂದುವರಿಸಿದ.

"ಶರ್ಮಿಳಾ ನನ್ನ ಬದುಕಿನಲ್ಲಿ ಬಿರುಗಾಳಿ ಅಂತ ಮೊದಲು ತಿಳಿದಿದ್ದೆ. ಮೂವತ್ತೊಂಬತ್ತು ವರ್ಷಗಳ ಕಾಲ ತಡೆದಿಟ್ಟ ನಿಲುವನ್ನು ಅಲುಗಾಡಿಸಿದ ಚಂಡಮಾರುತ! ನನ್ನ ಪಕ್ಷಿಪ್ರೇಮಕ್ಕೆ, ಬುಲ್ ಬುಲ್ ತರಂಗದ ಮಿಡಿತಕ್ಕೆ ಎರಡು

ದಿನ ಹೆಡೆ ಆಡಿಸಿದ ನಾಗಿಣಿ!.... ನಾನು ಅವಳನ್ನ ಪ್ರೀತಿಸಲಿಲ್ಲ, ನನ್ನಲ್ಲಿ ಮದುವೆಯ ಕಿಚ್ಚು ಹೊತ್ತಿಸಿ ಮಾಯವಾದೋಳು. ಅವಳು ವಂಚಿಸಿ ಹೋದ ಕಾಲದಲ್ಲೆ ನಾನು ಹಾರಂಗಿಗೆ ಬಂದಿದ್ದು. ದೈವ ನನಗೆ ನಿನ್ನ ಕೂಡಿಸ್ತು. ಓಡಿ ಹೋದ ಶರ್ಮಿಳಾ ಗಂಡನಿಂದ ತೃಪ್ತಿ ಪಡೆಯಲಿಕ್ಕೆ ಆಗದೆ ಮತ್ತೆ ನನ್ನ ಪಡೆಯೋದಿಕ್ಕೆ ಬಂದ್ಲು.....;;

ಅವಳ ಮುಖದಲ್ಲಿ ಭಾವ ತರಂಗಗಳನ್ನು ನಿರೀಕ್ಷಿಸಿದ. ಘಟನೆ ಅರಿತ ಹೆಣ್ಣು ಗಂಭೀರವಾಗಿಯೇ ಉಳಿದಿದ್ದಳು. ಅವಳಿಗೆ ವಿಷಯದ ಮುಂದಿನ ಬೆಳವಣಿಗೆ ಬೇಕಿತ್ತು.

"ಅವನ ಪ್ರಯತ್ನ ಸಫಲವಾಯ್ತೆ?"

"ನನ್ನ ಬದುಕಿನಲ್ಲಿ ಅವಳದು ಮುಗಿದ ಕಥೆ ಅಂತ ಹೇಳ್ಬಿಟ್ಟೆ. ಹುಚ್ಚು ಹೆಣ್ಣು! ಅವಳ ಮೇಲೆ ಸೇಡು ತೀರಿಸಿಕೊಳ್ಳೋದಿಕ್ಕೆ ನಾನು ನಿನ್ನ ಮದುವೆ ಆದ್ನಂತೆ. ಆದರೆ ನೀನು ನನ್ನ ಹೆಂಡತಿ ಅನ್ನೋದು ಗೊತ್ತಿಲ್ಲ ಅವಳಿಗೆ."

ನಗೆ ಹಾಕಿದ. ನಿಮಿಷದ ದೀರ್ಘ ಮೌನ ನೆಲೆಸಿತು. ಅವಳ ಹೃದಯ ಪಿಸುಗು ನುಡಿ ಹಾಕುತ್ತಿತ್ತು. ಕಾರ್ತೀಕನ ಮಾತು ನಾಟಕೀಯ! ಅವನು ಶರ್ಮಿಳಾಳಿಂದ ಬಿಡುಗಡೆ ಹೊಂದಿಲ್ಲ. ತನ್ನನ್ನು ಮದುವೆಯಾದುದು ಪಪ್ಪ ಬರ್ನಾರ್ಡ್‌ನ ಬೆದರಿಕೆಯ ಮೇಲೆ, ಆ ಸಂಗತಿ ತನ್ನ ಮುಂದೇಕೆ ಹೇಳಲೊಲ್ಲ? ಇಂತಹ ಕಪ್ಪು ಹಿನ್ನೆಲೆಯ ಮೇಲೆ ನಿಂತ ತನ್ನ ವೈವಾಹಿಕ ಬದುಕು ಮರಳು ಮನೆ!

"ನನಗೆ ಆಗಿರೊ ಅನ್ಯಾಯ ಸರಿಪಡಿಸೋದಿಕ್ಕೆ ಸಿದ್ಧವಾಗಿದೀನಿ ಅಂದಿದ್ರಿ."

ದಿಟ್ಟ ಮಾತಿನಿಂದ ಅವನ ಕಣ್ಣು ಮೊನಚಾಯಿತು. ಸುಧಾಕರನ ಸ್ನೇಹದ ಕಾವು ಹಾಗೆ ಆಡಿಸಿದೆ. ನಿರ್ಧಾರ ಕೈಗೊಳ್ಳಲು ಅಸಮರ್ಥಳಾದ ಕಿಶೋರಿ. ತಾಳ್ಮೆಗೆಡದೆ ಹೇಳಿದ.

"ಆ ಮಾತು ಹೇಳಿದ್ದು ನಿಜ. ಅದಕ್ಕೆ ಪ್ರತಿಕ್ರಿಯೆ ತೋರಿಸೊ ಹೃದಯ, ಶಕ್ತಿ ನಿನಗಿಲ್ಲ. ಶರ್ಮಿಳಾ ಪ್ರಸಂಗ ನಿನ್ನಲ್ಲಿ ಭೂಕಂಪ ನಡೆಸಿದೆ. ನನ್ನ ಮಣ್ಣಿನ ದೋಣಿಗೆ ಇಳಿಸಿಹೋದವಳನ್ನ ನೀನು ತಲೆಯಲ್ಲಿ ತುಂಬಿಕೊಬೇಡ. ಅವಳಿಗೆ ನನ್ನ ಬದುಕಿನ ಮೇಲೆ ಒಂದು ಕುಹಕ ಕಣ್ಣು. ಹಾರಂಗಿಗೆ ತನ್ನ ಸಂಬಂಧಿಯೊಬ್ಬನನ್ನ ಕಳಿಸಿ ನನ್ನ ವಿಷಯದಲ್ಲಿ ಪತ್ತೆ ಕೆಲಸ ನಡೆಸಿದ್ಲು. ವಾಚಾಳಿ ಮಲ್ಲಿಕಾರ್ಜುನ ಬುದ್ಧಿಗೇಡಿ. ನನಗೆ ಒಬ್ಬ ಚಿಕ್ಕ ಹುಡುಗಿ ಜೊತೆ ಮದುವೆ ಆಗಿದ್ದು ಹೇಳಿದ. ಅವಳ ಹೆಸರು, ವಿವರ ಹೇಳದೆ ಇದ್ದದ್ದು ನನ್ನ ಪುಣ್ಯ. ಇಲ್ಲವಾಗಿದ್ರೆ ಶರ್ಮಿಳಾ ದೊಡ್ಡ ಕಥೆ ಸೃಷ್ಟಿ ಮಾಡ್ತಿದ್ಲು...."

ಮಾತಿನ ಗತಿ ಏಕಾಏಕಿ ಬದಲಿಸಿ ಅವಳ ಕಿವಿಯಲ್ಲಿ ಮೆಲ್ಲನೆ ನುಡಿದ.

"ಸೌಭಾಗ್ಯ, ನಮ್ಮ ಮದುವೆ ಆಗಿದ್ದು ಚರ್ಚ್ ಅಂತ ಭಾವಿಸಿದ್ದೆ."

"ಮತ್ತೇನು?" ಬೆಚ್ಚಿ ಕೇಳಿದಳು.

"ಚರ್ಚ್ ದೃಶ್ಯ ಕೊಟ್ಟ ಒಂದು ಹಳೆಯ ಮನೆ. ನಿನ್ನ ಪಪ್ಪನ ಉದ್ದೇಶ ಏನಿತ್ತೊ ತಿಳಿಯದು. ನಮ್ಮ ಮದುವೆಗೆ ದಾಖಲೆ ಇಲ್ಲ."

ಗಂಭೀರ ಸ್ವಭಾವದವನು ಹೊಮ್ಮಿಸಿದ ತಿರಸ್ಕಾರದ ನಗೆಯ ಆಳವನ್ನು ಕ್ಷಣದಲ್ಲಿ ಗ್ರಹಿಸಿದಳು ಬಾಲೆ. ಆ ಮಾತಿನ ಅರ್ಥ? ತಮ್ಮ ಮದುವೆಗೆ ದಾಖಲೆ ಇಲ್ಲ. ಸಾಕ್ಷಿ, ಪುರಾವೆ ಸಾಲದು. ಕಾರ್ತೀಕನಿಗೆ ತನ್ನಿಂದ ಬಿಡುಗಡೆ ಹೊಂದುವ ಇಚ್ಛೆ. ತಾನು ಇನ್ನೆಷ್ಟು ದಿನಗಳವರೆಗೆ ಮುಗ್ಧೆ? ಹೆಂಡತಿ ಎನಿಸಿಕೊಂಡ ಮೇಲೂ ಮರಳು ಮನೆಯ ಆಸರೆ!

ಹೆಣ್ಣಿನ ಪ್ರತಿಷ್ಠೆ ಕೆಣಕಿದಂತಾಗಿತ್ತು.

"ನೀವು ನನ್ನ ವಿಷಯದಲ್ಲಿ ತೊಂದರೆ ತೊಗೊಬೇಡಿ."

ಶರೀರದ ಸತ್ವವೆಲ್ಲ ಬಾಣದ ಮಾತಿನಲ್ಲಿ ತುಂಬಿತ್ತು. ಧೈರ್ಯಸ್ಥಳ ಮಾತಿಗೆ ನಿರ್ವಿಕಾರವಾದ ಪ್ರತಿ ನುಡಿ ಬಂತು.

"ಸರಿ, ತೊಂದರೆ ತೊಗೊಳೋದಿಲ್ಲ. ಮದುವೆಗೆ ದಾಖಲೆ ಇಲ್ಲವಾದರೂ ಕಾನೂನಿನ ಮೊರೆ ಹೋಗೋಣ."

"ಕಾನೂನಿನ ಮೊರೆ!.... ಹಾಗಂದ್ರೆ?"

ಶರೀರ 'ಝುಲ್' ಎಂದಿತು.

"ನಿನಗೆ ಡೈವೋರ್ಸ್ ಅಂದ್ರೆ ಗೊತ್ತಲ್ಲ? ದಾಂಪತ್ಯ ವಿಚ್ಛೇದನ, ಅದಕ್ಕೆ ಕಾನೂನಿನ ಅಗತ್ಯ ಇದೆ."

ನೋಟದ ವಸ್ತುಗಳೆಲ್ಲ ಸಮೀಪಕ್ಕೆ ಧಾವಿಸಿ ಬಂದ ಹಾಗೆ ಕಂಡವು. ನಿಮಿಷ ನಿಶ್ಚೇಷ್ಟಿತಳಾದವಳು ನಿಧಾನವಾಗಿ ಪದ ಬಿಡಿಸಿದಳು.

"ಮೀನಾಕ್ಷಿ ಅದರ ಅರ್ಥ ಹೇಳಿದ್ಲು. ನನಗೆ ಅದರ ಆಳ ಗೊತ್ತಿರಲಿಲ್ಲ.

ಅವಳ ತೋಳು ಒತ್ತಿ ಸಾಂತ್ವನದಲ್ಲಿ ಹೇಳಿದ.

"ನೀನು ನನ್ನ ಹೆಂಡತಿ ಅನ್ನೋದು ನಾಲ್ಕಾರು ಮಂದಿಗಿಂತ ಹೆಚ್ಚಾಗಿ ಗೊತ್ತಿಲ್ಲ. ಅವರೂ ಎಲ್ಲೆಲ್ಲೊ ಚದರಿ ಹೋಗಿದಾರೆ. ನಾನು ವಕೀಲರೊಂದಿಗೆ ಮಾತಾಡ್ತೀನಿ. ನಿನ್ನ ಪಪ್ಪನಿಗೂ ವಿಷಯ ತಿಳಿಸಬೋದು ನೀನು."

"ನಿಮಗೆ ನನ್ನಿಂದ ಬಿಡುಗಡೆ ಬೇಕೆ?"

ಕಳಕಳಿಯಿಂದ ಬಳಸಿದ 'ಬಿಡುಗಡೆ' ಪದ ಅವಳನ್ನು ಹಿಂಡಿತು. ನೆನಪಿನಿಂದಲೂ ದೂರವಾಗದ ಕಾರ್ತೀಕನಿಂದ ಬಿಡುಗಡೆ! ಕಲ್ಪನೆಗೂ ಆತ ಘೋರ.

"ಬಿಡುಗಡೆ ಇಬ್ಬರಿಗೂ ಸಂಬಂಧಿಸಿದ್ದು. ಅದಕ್ಕೆ ಇಬ್ಬರ ಸಮ್ಮತಿಯೂ ಬೇಕು.

ಸೌಭಾಗ್ಯ, ಮದುವೆ ವಿಷಯದಲ್ಲಿ ತಪ್ಪು ಮಾಡಿದೋನು ನಾನು."

ಅವನಿಂದ ಸರಿದು ನಿಂತಳು.

"ಅಲ್ಲ, ಅಲ್ಲ ಮದುವೆ ಕಲ್ಪನೆಯೇ ಇಲ್ಲದ ಕಾಲದಲ್ಲಿ ಮದುವೆ ಆದೋಳು ನಾನು. ಅದು ಬೇಡ ಅನ್ನುವಷ್ಟು ಚೈತನ್ಯವೂ ಇಲ್ಲದ ಸನ್ನಿವೇಶ. ನಿಮಗೆ ಅಂಥ ಮದುವೆ ವಿಷಯ ಕಥೆಗೂ ಹೊಳೆದಿರಲಾರದು. ಪಪ್ಪನ ಧೂರ್ತತನ ಇದಕ್ಕೆ ಕಾರಣ. ಬರ್ನಾರ್ಡ್ ತಪ್ಪಿತಸ್ಥ!"

ಉದ್ವೇಗದಲ್ಲಿ ರಕ್ಷಣೆಯ ಗೋಡೆಗೆ ಕೈ ಅಪ್ಪಳಿಸಿದಳು.

"ಇವೆಲ್ಲ ನಿನಗೆ ನಿಧಾನವಾಗಿ ಅರ್ಥ ಆಗ್ತಿದೆ. ತಪ್ಪು ಯಾರದೇ ಆದ್ರೂ ಇದು ಮುಕ್ತಾಯದ ಘಟ್ಟಕ್ಕೆ ಬಂದ ಹಾಗೆ ಕಾಣುತ್ತೆ. ಸುಧಾಕರನಿಗೆ ನಮ್ಮ ಕಥೆ ಗೊತ್ತಾಗೋದು ಒಳ್ಳೇದು. ಅದನ್ನ ನೀನೇ ಅವನಿಗೆ ಹೇಳ್ಬಿಡು. ಅವನೊಂದಿಗೆ ನೀನು ಏನು ಯೋಚನೆ, ಕಲ್ಪನೆ ಮಾಡಿಕೊಂಡಿದೀಯೊ ಅವಕ್ಕೆಲ್ಲ ನನ್ನ ಸಮ್ಮತಿ, ಸಹಕಾರ ಇದೆ."

ಸತ್ವಹೀನ ನಗೆಮುಖದಲ್ಲಿ ಅವನು ಕಟುವಾಗಿದ್ದ. ಮುಕ್ತಾಯ ಘಟ್ಟಕ್ಕೆ ಬಂದ ಸಂಗತಿ!

ಅವಳ ಮಂಜು ಕಣ್ಣುಗಳ ಮುಂದೆ ಅಗಾಧ ಜಲಪ್ರವಾಹ. ಆನೆ ಗಾತ್ರದ ಅಲೆಗಳ ನಡುವೆ ತೇಲು, ಮುಳುಗಿನಲ್ಲಿ ತಾನು ಏಕಾಂಗಿ. ಕೈ ಸಮೀಪಿಸಿದ ದೋಣಿ. ಮಣ್ಣಿನ ದೋಣಿ!

"ಏನೂ ಗೊತ್ತಾಗ್ತಾ ಇಲ್ಲ. ನನಗೆ ಸಹಿಸೊ ಶಕ್ತಿ ಇಲ್ಲ."

ಕಣ್ಣುಗಳಿಗೆ ಕೈ ಹಚ್ಚಿದ ಸೌಭಾಗ್ಯ ನಿಂತಲ್ಲಿಯೇ ಕುಸಿದಳು.

## ೯

ಮನೆಯ ಮುಂದೆ ಟ್ಯಾಕ್ಸಿ ನಿಂತ ಕೇಳಿ ವರಾಂಡಕ್ಕೆ ಬಂದ ಸ್ವರ್ಣಮ್ಮ ಅರ್ಧ ಬಾಗಿಲು ಸರಿಸಿದಳು. ಹೆಗಲಿಗೆ ಬಣ್ಣದ ಚೀಲ ತೂಗಿಸಿ ಎಡಗೈಲಿ ರಟ್ಟಿನ ಪೆಟ್ಟಿಗೆ. ಬಲಗೈಲಿ ಬುಟ್ಟಿ ಹಿಡಿದು ಒಂದಂತಸ್ತಿನ ಮನೆಯನ್ನು ತುದಿಯವರೆಗೆ ನೋಡುತ್ತಾ ನಿಂತ ಅಜಾನುಬಾಹುವನ್ನು ಕಂಡು ತುಟಿಗೆ ಬೆರಳಿಟ್ಟಳು.

ಅಪರಿಚಿತ ಹೆಜ್ಜೆ ಮುಂದಿಟ್ಟ.

ನೀಲಿ ರಂಗಿನ ಪ್ಯಾಂಟು, ತುಂಡು ತೋಳಿನ ಬಿಳಿಪು ಷರಟು. ಸಾಕಷ್ಟು ಶಬ್ದ ಮೂಡಿಸಿದ ಹಳೆಯ ಕಪ್ಪು ಬೂಟು. ಪೊದೆಹುಬ್ಬುಗಳಲ್ಲಿ ಒಂದನ್ನು ಮರೆಮಾಡುವಂತೆ ಹಣೆಗಿಳಿದ ಜೊಂಪೆಗೂದಲು. ಎಡಗೈಲಿ ವಿಶಾಲ ಗಡಿಯಾರ.

ಬಲಗೈಗೆ ತಾಮ್ರದ ಬಳೆ. ಮುಖವೆಲ್ಲ ಆವರಿಸಿದ ಗಡ್ಡ, ಮೀಸೆ.

ವ್ಯಕ್ತಿ ಕಬ್ಬಿಣದ ಗೇಟು ಸರಿಸಿ ಅದನ್ನು ಮುಚ್ಚದೆ ನಡೆದು ಬಂದಾಗ ಅವಳ ಮುಖ ಸುಕ್ಕುಗಟ್ಟಿತು. ಅಸಭ್ಯ ಮನುಷ್ಯ!

ಅತ್ತೆಯ ಹಿಂದೆಯ ತುದಿಗಾಲಿನಲ್ಲಿ ನಿಂತು ಮುಖ ಎತ್ತಿದ ಸೌಭಾಗ್ಯ ಉತ್ಸಾಹದಿಂದ ಉದ್ಗರಿಸಿದಳು.

"ನನ್ನ ಪಪ್ಪ ಬರ್ನಾರ್ಡ್!"

ಸೊಸೆಯ ಮುಖ ನೋಡಿ ತಲೆ ತೂಗಿ ಏನೂ ಹೇಳದ ಸ್ವರ್ಣಮ್ಮ ಒಳಕ್ಕೆ ಬಂದಳು. ಕಿಶೋರಿಗೆ ತಂದೆಯನ್ನು ಕಂಡ ಹರ್ಷದೊಂದಿಗೆ ದೇಹದಲ್ಲಿ ನಡುಕ ಹುಟ್ಟಿತು.

ಸ್ವಾಗತ ಕಾಣದ ಬರ್ನಾರ್ಡ್ ಪ್ರತಿಕ್ರಿಯೆ ತೋರದೆ ಹೊರೆಯನ್ನು ಹಜಾರದಲ್ಲಿ ಇಟ್ಟು ಕುರ್ಚಿ ಜೊರ್‍ರನೆ ಎಳೆದು ಕುಳಿತು ಸುತ್ತಲೂ ಕಣ್ಣುಹರಿಸಿದ.

"ಯಾವಾಗ ಬಂದೆ, ಪಪ್ಪ?"

ಧ್ವನಿಯಲ್ಲಿ ಮೇಲುಸಿರು ತುಂಬಿ ಕೇಳಿದಳು.

"ಒಂದು ಗಂಟೆ ಆಯ್ತು. ಕಾರವಾರದಲ್ಲಿದ್ದಾಗ ನಿನ್ನ ಕಾಗದ ಯಾರೊ ತಂದುಕೊಟ್ರು."

"ಇವರು ನನ್ನ ಅತ್ತೆ...."

ಕುಗ್ಗದ ಉಸಿರಾಟದಲ್ಲಿ ನಗೆ ಮುಖ ತೋರಿದಳು. ಬರ್ನಾರ್ಡ್ ಕುರ್ಚಿಯಿಂದ ಎದ್ದು ಕೈ ಜೋಡಿಸಿದ. ಪ್ರತಿವಂದಿಸಿದಳು ಸ್ವರ್ಣಮ್ಮ.

"ಎರಡು ತಿಂಗಳಿಂದ ನಿಮ್ಮನ್ನು ಕಾಣದೆ ಒದ್ದಾಡ್ತಾ ಇದ್ಲು ಹುಡುಗಿ."

ಆ ಧಾಟಿಯಲ್ಲಿ ಎರಡು ತಿಂಗಳಿಂದ ಮಗಳನ್ನು ಕಾಣಲು ಬಾರದೆ ಅಸಡ್ಡೆ ತೋರಿದ ತಂದೆ ಎಂಬ ಲಘು ಮೂದಲಿಕೆ ಸ್ಫುಟವಾಗಿತ್ತು. ಬರ್ನಾರ್ಡ್ ತುಟಿ ಬಿಚ್ಚಲಿಲ್ಲ. ಬುಟ್ಟಿಯಿಂದ ಹಸಿರು, ಹಳದಿ ರಂಗಿನ ದಪ್ಪನೆಯ ಮಲಗೋಬ ಮಾವಿನ ಹಣ್ಣುಗಳನ್ನು ಜಮಖಾನೆ ಮೇಲೆ ತೆಗೆದು ಇರಿಸಿ ಸಿಹಿ ತಿಂಡಿಗಳ ರಟ್ಟಿನ ಪೆಟ್ಟಿಗೆ ಬಿಚ್ಚಿದ. ಹೆಗಲಿನ ಚೀಲ 'ಚಣಿಚಣಿ' ಸದ್ದು ಮಾಡಿತು. ಒಂದು ಕಾಲದಲ್ಲಿ ಸಾರಕ್ಕಿಯ ಮಾವಿನ ತೋಪಿನಿಂದ ನೂರಾರು ಬುಟ್ಟಿ ಮಾವಿನ ಹಣ್ಣುಗಳನ್ನು ಮಾರುಕಟ್ಟೆಗೆ ರವಾನೆ ಮಾಡಿದ ಹೆಂಗಸು, ಜಮಖಾನೆ ಮೇಲೆ ಹರಡಿದ ಹನ್ನೆರಡು ಹಣ್ಣುಗಳನ್ನು ತೃಣ ವಸ್ತುವಿನಂತೆ ಓರೆ ದೃಷ್ಟಿಯಿಂದ ನೋಡಿದಳು.

ಬರ್ನಾರ್ಡ್ ಏಕಾಏಕಿ ತಲೆ ಎತ್ತಿದ.

"ಎರಡು ತಿಂಗಳಾದ ಮೇಲೆ ಬಂದೆ ಅಂದ್ರಲ್ಲಾ? ಅದೆಲ್ಲಾ ನನಗೆ ಮಾಮೂಲು.

ಕಸುಬು ಅಂತಾದ್ದು. ಕೈಲಿ ಚಕ್ರ ಹಿಡಿದು ಕೂತ್ರೆ ಮನೆಯ ನೆನಪು ಬರೋದು ಕಷ್ಟ. ಒಂದು ಸಾರಿ ಚಂಡೀಘಡಕ್ಕೆ ಹೋದೋನು ಒಂದೂವರೆ ತಿಂಗಳ ಮೇಲೆ ಬಂದಿದ್ದೆ. ಟ್ರಕ್ ಮಾರ್ಕೊಂಡು ಮಾಯವಾಗ್ಬಿಟ್ಟೇಂತ ಹೆದರಿದ್ದ ನಮ್ಮ ಕಂಟ್ರಾಕ್ಟರ್. ಸೌಭಾಗ್ಯನ್ನ ಮರೆತುಬಿಟ್ಟೆ ಅಂತ ತಿಳಿದ್ರೇನು? ಪುರುಸೊತ್ತು ಸಿಗ್ಲಿಲ್ಲ. ಉತ್ತರ ಕನ್ನಡ ಜಿಲ್ಲೆ ಕಡೆ ಓಡಾಡ್ತಾ ಇದೀನಿ. ಈಗ ನಾನು ಹಾರಂಗಿಯಲ್ಲಿಲ್ಲ...."

ಸ್ವರ್ಣಮ್ಮನ ಗಾಂಭೀರ್ಯ ಹಾಗೇ ಇತ್ತು. ಸೆರಗು ಬೆರಳು ಸುತ್ತಿತು. ಬರ್ನಾರ್ಡ್ ಮಗಳ ಕಡೆ ಅಂತಃಕರಣದ ನೋಟ ಹರಿಸಿ ನಮ್ರವಾಗಿ ಮಾತು ಮುಂದುವರಿಸಿದ.

"ಮಗಳಿಗೆ ಚಿನ್ನದಂತಹ ಗಂಡ ಸಿಕ್ತಾಯ್ತು. ಹೆಂಡತಿಯೂ ತೀರಿದ ಮೇಲೆ ನನಗೆ ಹಾರಂಗಿಯಲ್ಲಿ ಏನು ಉಳಿದಿದೆ? ಒಂಟಿ ಮನುಷ್ಯ. ಆಕಾಶ, ನೆಲ ಯಾವ ಊರಲ್ಲೂ ಸಿಗುತ್ವೆ."

ಮುಖ ಎತ್ತಿದ. ಬಲಾಢ್ಯನ ಕಣ್ಣುಗಳಿಂದ ನೀರು ಇಳಿಯುತ್ತಿತ್ತು. ಸೌಭಾಗ್ಯಳ ಕೊರಳು ತುಂಬಿ ಬಂತು.

"ಕೂತ್ಕೊಳಿ"

ಮೆದುವಾಗಿ ಹೇಳಿದ ಸ್ವರ್ಣಮ್ಮ ಸೊಸೆಯ ಕಡೆ ತಿರುಗಿದಳು.

"ಸೌಭಾಗ್ಯ. ನಿಮ್ಮ ತಂದೇನ ಮೇಲಿನ ಕೋಣೆಗೆ ಕರಕೊಂಡು ಹೋಗು. ಮೊದಲು ಕಾಫಿ ಕೊಡು."

ಸೌಭಾಗ್ಯಳಿಗೆ ಹೋದ ಜೀವ ಬಂದಂತೆ ಆಯಿತು. ಅವಳ ಹಿಂದೆಯೇ ಕಿಚನ್‌ಗೆ ನಡೆದುಬಂದ ಸ್ವರ್ಣಮ್ಮ ಗಂಭೀರವಾಗಿ ನುಡಿದಳು.

"ನಿನ್ನ ತಂದೆ ನೋಡೋದಿಕ್ಕೆ ಒರಟಾಗಿ ಕಂಡ್ರೂ ಹೃದಯ ಮೆದು ಅಂತ ಕಾಣತ್ತೆ. ಹೀಗಂತೀನಿ ಅಂತ ಬೇಜಾರು ಮಾಡ್ಕೊಬೇಡ. ಎಲ್ಲೆಲ್ಲಿ ಕುಡಿದಿರಬೇಕು. ಅನ್ನೋದು ಮನುಷ್ಯ ತಿಳಿದಿದ್ರೆ ಒಳ್ಳೇದು. ಅಷ್ಟು ದೂರಕ್ಕೂ ಮೂಗು ಅಪ್ಪಳಿಸೊ ವಾಸನೆ! ಬರ್ನಾರ್ಡ್ ಯಾವಾಗ್ಲೂ ಹೀಗೇನಾ?"

ನಾಚಿಕೆಯೊಂದಿಗೆ ಶರೀರ ಮೆಲ್ಲನೆ ಕಂಪಿಸಿತು.

"ನನ್ನ ತಮ್ಮ ಜಯಶೀಲ ಹೋದಮೇಲೆ ಕಲಿತದ್ದು. ಕಡಿಮೆ ಆಗಿತ್ತು. ಮಮ್ಮಿಯೂ ಹೋದಮೇಲೆ ಮತ್ತೆ ಜಾಸ್ತಿ ಆಗಿರ್ಬೇಕು. ಅದ್ರೆ ಎಷ್ಟು ಕುಡಿದಿದ್ರೂ ಪಪ್ಪ, ವಿವೇಚನೆ ಕಳಕೊಳ್ಳೋದಿಲ್ಲ."

"ಹುಂ, ಅವರವರ ಸ್ವಂತ ವಿಷಯ. ಕಾರ್ತೀಕ ಬಂದಾಗ ಸ್ವಲ್ಪ ಹುಷಾರಾಗಿರೋದನ್ನ ನೀನು ನೋಡ್ಕೊ."

ಮೃದು ಎಚ್ಚರಿಕೆಯ ಮಾತಿನಿಂದ 'ಹಾಯ್' ಎನಿಸಿತು.

ಕಾಫಿ ಮುಗಿಸಿ ಪೊಟ್ಟಣ. ಚೀಲದೊಂದಿಗೆ ಸೌಭಾಗ್ಯಳ ಹಿಂದೆ ಮೆಟ್ಟಿಲು ಏರುತ್ತಾ ಕೇಳಿದ ಬರ್ನಾರ್ಡ್.

ಇದು ಸ್ವಂತ ಮನೆಯೇನು?"

"ಹೌದು"

"ಚಿಕ್ಕದಾದರೂ ತುಂಬ ಚೆನ್ನಾಗಿದೆ. ಬಣ್ಣ ಹಚ್ಚಿಸ್ಬೇಕು. ಗೇಟು ಸರಿ ಮಾಡಿಸಬೇಕು. ಎಲ್ಲಿ ನಿನ್ನ ಗಂಡ?"

"ತಲಕಾಡಿಗೆ ಹೋಗಿದಾರೆ ಫಿಲ್ಮ್ ಸ್ನೇಹಿತರ ಜೊತೆ. ಸಂಜೆಗೆ ಬರಬೋದು."

"ಹಣ ಚೆನ್ನಾಗಿ ಇಟ್ಟಿರ್ಬೇಕು."

ಅವನ ಮೊನಚು ನೋಟದಲ್ಲಿ ಅದು ಚಪಲದ ಪ್ರಶ್ನೆಯಾದರೂ ಸೌಭಾಗ್ಯಳಿಗೆ ಹಿಡಿಸಲಿಲ್ಲ.

"ನನಗೆ ಸಂಬಂಧವಿಲ್ಲದ ವಿಷಯ. ಈ ಮನೇಲಿ ಯಾರಿಗೂ, ಯಾವುದಕ್ಕೂ ತೊಂದರೆ ಇಲ್ಲ."

ಬರ್ನಾರ್ಡ್ ಕಾರ್ತೀಕನ ಕೋಣೆಯಲ್ಲಿ ನಿಂತ ವಸ್ತುಗಳನ್ನು ಗಹನವಾಗಿ ನೋಡಿದ. ಕಪಾಟಿನಲ್ಲಿ ಜೋಡಿಸಿದ್ದ ಪುಸ್ತಕಗಳ ಸಾಲಿನ ಮೇಲೆ ಕೈ ಆಡಿಸಿ ಮುಖ ಮುದುರಿದ.

"ಕನ್ನಡ"

"ಹೌದು, ಎಲ್ಲಾ ಕನ್ನಡದ ಪುಸ್ತಕಗಳೇ. ಅವರು ಹೆಸರು ಗಳಿಸಿರೋದು. ಕನ್ನಡದ ಲೇಖಕರು ಅಂತ. ಪಪ್ಪ, ನಾನು ಇದರಲ್ಲಿ ಅರವತ್ತು ಪುಸ್ತಕ ಓದಿದೀನಿ."

ಅವಳ ಹೆಮ್ಮೆಯ ಮಾತು ಅವನ ಮೇಲೆ ತೃಣಮಾತ್ರದಷ್ಟೂ ಪರಿಣಾಮ ಬೀರಲಿಲ್ಲ. ಮಗಳ ಸಾಧನೆ ಕ್ಷುಲ್ಲಕ!

ಬಿಡಿ ಪುಟಗಳ ಫೈಲ್ ತೆರೆದಳು.

"ಇದರಲ್ಲಿ ಅವರ ಕಥೇನೇ ಬರೀತಾ ಇದಾರೆ.... 'ಮಣ್ಣಿನ ದೋಣಿ' ಅಂತ. ನಾನು, ನೀನು ಎಲ್ಲಾ ಸೇರಿದೀವಿ. ಪ್ರಾರಂಭವಾಗಿದ್ದು ಮುಗಿಯಲೆ ಇಲ್ಲ. ಮಧ್ಯೆ ಎರಡು ಕಾದಂಬರಿ ಮುಗಿಸಿದಾರೆ."

ಪೂರೈಸಿದ 'ಕಬ್ಬಿಣದ ತೆರೆ' ಹಾಗೂ 'ಮಿಂಚು ಹುಳು' ಕೃತಿಗಳು ಅವನ ದೃಷ್ಟಿಯಲ್ಲಿ ಕೆಲಸಕ್ಕೆ ಬಾರದ ಹಾಳೆಗಳ ರಾಶಿ!

ಸ್ಟೂಲಿನ ಮೇಲಿದ್ದ ಬುಲ್ ಬುಲ್ ತರಂಗದ ಮೇಲೆ ಕಣ್ಣು ಹರಿದಾಗ 'ಹಾಂ!' ಎಂದು ಉದ್ಗರಿಸಿ ಬೆರಳು ಒರಟಾಗಿ ಆಡಿಸಿ 'ಟಿಂಗ್' ಎನಿಸಿದ. ಗಂಟಲು ಕೇಕರಿಸಿ ಎರಡೂ ಕೈ ಒದರಿದ.

"ಕಾರ್ತೀಕ ಹಳೇ ಕಾಲದ ಮನುಷ್ಯ ಅಂತ ತೋರುತ್ತೆ. ನಿನಗೆ ನೆನಪಿದೆಯಾ? ಇದೇ ಸಿಟಿಯಲ್ಲಿ ನಮ್ಮ ಮನೆ ಹತ್ರ ಸೈಕಲ್‌ಷಾಪ್‌ನಲ್ಲಿ ಈ ವಾದ್ಯ ಬಾರಿಸ್ತಿದ್ರು. ಪೋಲಿಗಳ ವಾದ್ಯ! ನನಗೆ ಅರ್ಥ ಆಗ್ಲಿಲ್ಲ ಕಾರ್ತೀಕನ ಈ ಷೋಕಿ."

ಹೆಗಲಿಗೆ ತೂಗಿಸಿದ ಬಣ್ಣದ ಚೀಲದಿಂದ ಮೆಲ್ಲನೆ ಎರಡು ಸುಂದರ ಶೀಷೆಗಳನ್ನು ಎಳೆದು ಹೊರಗಿಟ್ಟ. ವಿದೇಶಿ ಮದ್ಯ!

"ಇದೇನು ತಂದಿದ್ದು ಪಪ್ಪ?.... ಅತ್ತೆಗೆ ನೀವು ಕುಡಿದು ಬಂದಿರೋದು ಆಗಲೇ ಗೊತ್ತಾಗಿದೆ."

ಗಾಬರಿಯಲ್ಲಿ ಗದರಿದಳು. ಕಣ್ಣುಗಳಿಂದ ತಿರಸ್ಕಾರ ಚಿಮ್ಮಿತು.

"ಇದು ನನ್ನ ಬಳಕೆದಲ್ಲ, ಮಗು. ನಾನು ಕುಡಿಯೋದು ಅಗ್ಗದ ಮಾಲು. ನಿನ್ನ ಗಂಡನಿಗೋಸ್ಕರ ಗೋವಾದಿಂದ ತಂದೆ."

"ನಿನಗೆ ಬುದ್ಧಿ ಕೆಟ್ಟಿರ್ಬೇಕು. ಕಾರ್ತೀಕ ಕುಡಿಯೋರಲ್ಲ" ಕಂಠ ಏರಿತ್ತು.

ಅವಳ ಮಾತನ್ನೇ ಹಾರಿಸುವಂತೆ ಅಸಡ್ಡೆಯಿಂದ ಕೈ ಬೀಸಿದ.

"ನಿನ್ನ ಗಂಡ ಹಾಗಂತ ಈ ಮನೇಲಿ ಹೇಳಿಕೊಂಡಿರಬೋದು. ನನಗೆ ಅಷ್ಟೂ ತಿಳಿಯೋದಿಲ್ಲವೆ? ಪುಸ್ತಕ ಬರೆಯೋನಿಗೆ ಬುದ್ಧಿ ನೆಟ್ಟಗೆ ಇರಿಸೋದು ಇದೇ ಶೀಷೆ. ಇದು ಕುಡಿದ್ರೆ, ಚಿಮಣಿ ಹಾಗೂ ಸಿಗರೇಟು ಹೊಗೆ ಹಾಕಿದ್ರೆ, ರಾತ್ರಿಯ ಕ್ಲಬ್‌ನಲ್ಲಿ ಹೆಣ್ಣುಗಳ ಮಧ್ಯೆ ತೂರಾಡಿದ್ರೆ ಕಾಗದದ ಮೇಲೆ ಸರಕು ತುಂಬಿ ಬರೋದು... ತೆಗೆದಿಡು, ಮಗು. ಶೀಷೆ ನಿನ್ನ ಗಂಡನಿಗೆ. ಹೆಣ್ಣು ನಿನ್ನ ಅತ್ತೆಗೆ. ಸಿಹಿ ತಿಂಡಿ ನಿನಗೆ."

ನೀಳವಾಗಿ ಉಸಿರೆಳೆದುಕೊಂಡಳು ಸೌಭಾಗ್ಯ. ಬರ್ನಾರ್ಡ್ ಭುಜ ಕುಣಿಸಿ ಪಕ್ಕದ ಕೋಣೆಗೆ ಬಂದ. ಒಂಟಿ ಹಾಸಿಗೆಯ ಮಂಚ, ಓರಣವಾಗಿಟ್ಟ ಕೇವಲ ಹೆಣ್ಣು ಉಡಿಗೆಗಳ ಮೇಲೆ ಒಮ್ಮೆ ನೋಟ ಹರಿಸಿ ಕಥೆ ಸಂಗ್ರಹಿಸಿದ.

"ಇದು ನಿನ್ನ ಕೋಣೆ. ನಿನ್ನ ಗಂಡ ಪಕ್ಕದ ಕೋಣೆಯಲ್ಲಿ ಮಲಗ್ತಾನೆ. ಮನೆಯಲ್ಲಿ ಹೆಚ್ಚಾಗಿ ಇರೋದಿಲ್ಲ. ಇರೋವಾಗ ಪೋಲಿ ವಾದ್ಯ ಬಾರಿಸ್ತಾ ಕೂಡ್ತಾನೆ. ಅರ್ಥವಾಗದ ದೊಡ್ಡ ಪದಗಳನ್ನು ಬಳಸ್ತಾನೆ. ಅದೂ ಲೆಕ್ಕಾಚಾರದ ಎರಡೇ ಮಾತು. ಒಂದೊಂದು ಸಾರಿ ಮತ್ತು ಬಂದೋನ ಹಾಗೆ ಪ್ರೀತಿಯ ಪದಗಳನ್ನ ಆಡ್ತಾನೆ. ಬರೆಯೊ ಆಸಾಮಿಯ ಹುಚ್ಚು ! ಹೌದು ತಾನೆ?"

ಕಣ್ಣೊರೆಸಿಕೊಂಡಳು ಬಾಲೆ. 'ಹೌದು' ಎಂದು ತಲೆ ಆಡಿಸಿದಳು. ಬರ್ನಾರ್ಡ್ ಕೋಣೆ ಬಾಗಿಲು ಮುಚ್ಚಿ ಮೆಲ್ಲನೆ ಕೇಳಿದ.

"ಅವನು ಬೇರೆ ಹುಡುಗೀನ ಪ್ರೀತಿಸ್ತಾ ಇರ್ಬೇಕು?"

"ಹುಂ"

"ಮದುವೆ ಆದ ಹುಡುಗಿ ಮನೇಲಿ ಮೂಕ ಪ್ರಾಣಿ ಹಾಗೆ ದುಡೀತಾ ಇದೆ" ಮುಖದಲ್ಲಿ ಚಿಂತೆ ತೋರಿದ.

"ಇಲ್ಲ. ಕೆಲಸಕ್ಕೆ ಆಳು ಹುಡುಗ ಇದಾನೆ. ಅತ್ತೆ ಅಡುಗೆ ಕೆಲಸ ಮಾಡ್ತಾರೆ. ನಾನು ಸ್ವಲ್ಪ ಸಹಾಯ ಮಾಡ್ತೀನಿ."

"ಮದುವೆ ಆದ ತಪ್ಪಿಗೆ ಹೆಂಡತಿ ಅಂತ ಬಂದಿಖಾನೆ ಒಳಗೆ ಇಟ್ಟಿದಾನೆ. ಬಿಡುಗಡೆ ಬೇಕೂಂತ ಈಗ ಬೆದರಿಕೆ ಶಬ್ದ ಎತ್ತಿದಾನೆ."

ಮುಷ್ಟಿ ಮೇಜಿಗೆ ಗುದ್ದಿ ಹಲ್ಲು ಮಸೆದ. ಮಗಳು ಥರಗುಟ್ಟಿದಳು.

"ಮತ್ತೆ ಅವರ ಮೇಲೆ ಬಲ ತೋರಿಸಲು ಬಂದೆಯೇನು? ಒಂದು ಸಾರಿ ಬಲ ತೋರ್ಸಿ ನನ್ನ ಅವರಿಗೆ ಗಂಟು ಹಾಕ್ದೆ. ನನಗೆ ವಿಷಯ ನಿಧಾನವಾಗಿ ತಿಳೀತು. ಕಾರ್ತೀಕ ನನ್ನ ಮದುವೆ ಆಗಿದ್ದು ಮಮ್ಮಿಗೆ ಕೊಟ್ಟ ಮಾತಿನ ಮೇಲೆ ಅನ್ನೋದು ನೆಪ. ನೀನು ಅವರನ್ನು ಮದುವೆಗೆ ಬೆದರಿಸಿದ್ದು ಯಾಕೆ ಹೇಳ್ಲಿಲ್ಲ?"

ನಿಟ್ಟುಸಿರು ಹಾಕಿ ಕಿಟಕಿಯ ಸರಳು ಹಿಡಿದ.

"ಹೇಳೊ ಪರಿಸ್ಥಿತಿ ಇನ್ನೂ ಬಂದಿಲ್ಲ. ನಿನಗೊಬ್ಬ ಒಳ್ಳೇ ಗಂಡನ ಹುಡುಕಬೇಕಾಗಿತ್ತು. ಸರಿಯಾದ ವ್ಯಕ್ತಿ ಅನಾಯಾಸವಾಗಿ ಸಿಕ್ದ. ನಿನ್ನ ಸರಿಯಾಗಿ ನೋಡ್ಕೊಳ್ತಾನೆ ಅಂತ ತಿಳಿದಿದ್ದೆ. ಕಾಗದ ನೋಡಿದ ಮೇಲೆ ನಿನ್ನ ಸ್ಥಿತಿ ಅರ್ಥವಾಯ್ತು."

"ಅವರು ಹೇಳ್ತಾರೆ ಅವರ ಮೊದಲ ಹುಡುಗಿ ಶರ್ಮಿಳಾ ಮೇಲೆ ಪ್ರೀತಿ ಇಲ್ಲಾಂತ. ಅದು ಮುಗಿದ ಕಥೆಯಂತೆ. ಅವರ ಮದುವೆ ಬಲಾತ್ಕಾರದ್ದೂಂತ ಅವರಿಗೆ ಕೋಪ...ಕೋಪ ತೋರಿಸೋದಿಲ್ಲ. ನನಗೆ ಅದು ಅರ್ಥವಾಗತ್ತೆ. ತಣ್ಣನೆಯ ಬೆಂಕಿ ಅವರಲ್ಲಿ ಸೇರಿದೆ."

ಮೈ ಕಂಪಿಸಿ ಬುಸುಗುಟ್ಟಿದ.

"ಏನು ಮಾಡ್ಲಿ, ಸೌಭಾಗ್ಯ? ಹಲ್ಲು ಮುರಿದ ಹಾವು ನಾನು. ಅವನು ನಿನ್ನ ಗಂಡ. ಬೇರೆಯೋನು ಆಗಿದ್ರೆ ತುಂಡು ಮಾಡಿಬಿಡ್ತಿದ್ದೆ." ಅವನ ಕೋಪದ ಶಮನಕ್ಕಾಗಿ, ಮಾತಿಗೆ ತಿರುವು ಕೊಟ್ಟಳು.

"ಪಪ್ಪ, ನಮ್ಮ ಮದುವೆ ಚರ್ಚ್‌ನಲ್ಲಿ ನಡೀಲಿಲ್ವೆ?" ಕಿಟಕಿಯ ಸರಳು ಬಿಟ್ಟು ಸೋತವನಂತೆ ಅವಳ ಮುಂದೆ ನಿಂತ.

"ಇಲ್ಲ, ಚರ್ಚ್ ದೃಶ್ಯ ಕೊಟ್ಟ ಮನೆ ಅದು."

"ಅದು ಯಾಕೆ ಬೇಕಿತ್ತು?"

"ಈಗ ಹೇಳೊ ಸ್ಥಿತಿಯಲ್ಲಿಲ್ಲ ಅದು."

"ನಮ್ಮ ಮದುವೆಗೆ ದಾಖಲೆ ಇಲ್ಲವೆ?"

ಅವನ ಮೈ ಉಬ್ಬಿ ಕಣ್ಣುಗಳೂ ಕೆಂಪೇರಿದವು.

"ಹಾಗಂತ ಹೇಳಿದ್ನೆ ನಿನ್ನ ಗಂಡ? ದಾಖಲೆ ಇಲ್ಲವಾದ್ರು ಸಾಕ್ಷಿಗಳು ಇದಾರೆ. ಅವನು ಏನೇ ಹೇಳಿದ್ರೂ ನೀನು ಸೋಲ್ಲೆತ್ತಬೇಡ. ಬಿಡುಗಡೆಗೆ ಒಪ್ಪಿಗೆ ಕೊಡಬೇಡ. ಕನಿಷ್ಠ ಇನ್ನೊಂದು ತಿಂಗಳಾದ್ರೂ ನೀನು ಅವನ ಹೆಂಡತಿ ಆಗಿರ್ಬೇಕು. ಸೌಭಾಗ್ಯ, ನನ್ನ ಕನಸುಗಾರ ಅಂತಿದ್ಲು ಕನಕ. ನನ್ನ ಕನಸು ಈಗ ನಿಜಕ್ಕೆ ಬಂದಿದೆ. ನನಗೆ ಐದು ಲಕ್ಷ ಆಸ್ತಿ ಬಂದಿದೆ!.... ನಿನ್ನ ಗಂಡ ಬಿಡುಗಡೆಯ ಮಾತು ಎತ್ತದ ಹಾಗೆ ಅವನ್ನ ಕೊಂಡುಕೊಳ್ತೀನಿ."

ಅರ್ಥವಾಗದ ಪದಗಳ ಸರಣಿ. ಐದು ಲಕ್ಷ! ಅದರ ಪರಿಣಾಮ, ಚಿತ್ರ ಯಾವುದನ್ನೂ ಕಲ್ಪಿಸಿಕೊಳ್ಳಲಾಗದ ಬಾಲೆ. ಮುಖದಲ್ಲಿ ಶಂಕೆಯ ಗೆರೆಗಳು ಏರಿದವು. ಕಣ್ಣುಗಳಿಂದ ಭೀತಿ ಚಿಮ್ಮಿತು. ಅವಳಲ್ಲಿ ಸಾಗುತ್ತಿದ್ದ ತುಮುಲದ ಅರಿವಾಯಿತು.

"ಗಾಬರಿ ಆಗ್ಬೇಡ. ನನಗೆ ಗೊತ್ತು, ಏಕಾಏಕಿ ದೊಡ್ಡ ಮಾತ್ತದ ಹಣ ಅಂದ್ರೆ ಅದಕ್ಕೆ ಜನ ಕೊಡೊ ಅರ್ಥ ದರೋಡೆ, ಲಾಟರಿ, ಜಾಕ್‌ಪಾಟ್ ಅಂತಾದ್ದು ಯಾವುದೂ ಇಲ್ಲ."

"ಹಾಗಾದ್ರೆ ಎಲ್ಲಿಂದ ಬಂತು ಅಷ್ಟು ಹಣ?"

ಪಿಸುಮಾತಿನಲ್ಲಿ ಕೇಳಿದಳು.

"ಐದು ಲಕ್ಷದ ಸ್ವತ್ತು ನನ್ನ ಮುಂದೆ ಕಾಣ್ತಾ ಇದೆ. ಅದಕ್ಕೆ ಕೈ ಹಾಕೋದಿಕ್ಕೆ ಇನ್ನೂ ಅವಕಾಶವಾಗಿಲ್ಲ."

ಅತೀವ ಚಿಂತೆಯಲ್ಲಿ ತಲೆಗೂದಲು. ಗಡ್ಡ, ಮೀಸೆಯ ಮೇಲೆ ಒರಟಾಗಿ ಕೈ ಆಡಿಸಿ ದೀರ್ಘವಾಗಿ ಉಸಿರ್ಗರೆದ.

"ಅರ್ಥವೇ ಆಗಲ್ಲ. ಸರಿಯಾಗಿ ಹೇಳು, ಪಪ್ಪ"

"ಹೇಳ್ತೀನಿ, ಸ್ವಲ್ಪ ನಿಧಾನವಾಗಿ. ನಿನ್ನ ಗಂಡ ಯಾವಾಗ ಬರ್ತಾರೆ ಅಂದೆ?"

"ಸಂಜೆಗೆ ಬರಬೋದು. ಅವರು ಬಂದಾಗ ಕೋಪ, ಉದ್ರೇಕ ತೋರಿಸ್ಬೇಡ. ಈ ಶೀಷೆಗಳು ಇಲ್ಲಿರಬಾರದು. ನೀನು ಇದೇ ಕೋಣೆಯಲ್ಲಿರಬೋದು....."

"ಸೌಭಾಗ್ಯ...."

ಮೆಟ್ಟಿಲು ಅರ್ಧ ಏರಿ ಬಂದ ಸ್ವರ್ಣಮ್ಮನ ಕರೆ ಕೇಳಿಸಿತು.

"ನಿನ್ನ ಗಂಟಲು ದೊಡ್ಡದು, ಪಪ್ಪ. ಅತ್ತೆಗೆ ನಿನ್ನ ಒರಟು ಮಾತು ಹಿಡಿಸಲ್ಲ..."

ಮತ್ತೊಮ್ಮೆ ಬಂದ ಕೂಗಿನಿಂದ ಮಾತು ನಿಲ್ಲಿಸಿ ಕೆಳಗಿಳಿದಳು. ಬರ್ನಾರ್ಡ್ ಕೋಣೆಯಿಂದ ಹೊರಬಂದು ಮೆಟ್ಟಿಲಿನ ತುದಿಯಲ್ಲಿ ನಿಂತ.

"ನಿನ್ನ ಸ್ನೇಹಿತೆ ಮೀನಾಕ್ಷಿ ಬಂದಿದಾಳೆ ನೋಡು."

ಸ್ವರ್ಣಮ್ಮ ಗಟ್ಟಿಯಾಗಿ ಹೇಳಿದಳು. ಅಷ್ಟು ಮಾತು ಬರ್ನಾರ್ಡ್‌ಗೆ ಚೆನ್ನಾಗಿ ಕೇಳಿಸಿತು. ನಾಲ್ಕು ಮೆಟ್ಟಿಲು ಇಳಿದು ಮರೆಯಲ್ಲಿ ನಿಂತು ಹಜಾರಕ್ಕೆ ಕಣ್ಣು ತೂರಿದ.

ಜರಿ ಅಂಚಿನ ಬಿಳುಪು ರೇಷ್ಮೆ ಸೀರೆ. ಮೇಲಕ್ಕೆ ಗುಂಡಾಗಿ ಸಿಂಬಿಸಿದ ಕೇಶ ಗುಚ್ಛ. ಕೆಂಪು ರಂಗುನ ಲೇಪಿಸಿದ ಬಾದಾಮಿ ಆಕಾರದ ಮುಖ. ಹೊಳಪು ನಾಗರ ಕಣ್ಣುಗಳು!

ಹೆಡೆ ನಿಮಿರಿದ ಹಾವಿನ ದರ್ಶನ ಆಗಿತ್ತು. ಬರ್ನಾರ್ಡ್ ಸರಕ್ಕನೆ ಮುಖ ಹಿಂತೆಗೆದ. ಕಾಲುಗಳು ಮಿಂಚಿನ ವೇಗದಲ್ಲಿ ಏರಿದವು. ಮಹಡಿಯ ರಕ್ಷಣಾ ಗೋಡೆ ಸೇರುವುದರಲ್ಲಿ ಮಗಳ ಮಾತು ಅಡಿಯಿಂದ ಕೇಳಿತು.

"ಪಪ್ಪ, ನನ್ನ ಸ್ನೇಹಿತೆ ಬಂದಿದಾಳೆ. ನಿನ್ನ ನೋಡಬೇಕೂಂತ ಆವೃತ್ತಿನಿಂದ ಕಾಡಿದ್ಲು."

ಚಜ್ಜದ ಮೇಲಿಳಿದ ಬರ್ನಾರ್ಡ್ ಅನಾಯಾಸವಾಗಿ ಕೆಳಕ್ಕೆ ಹಾರಿ, ಹಿಂದಕ್ಕೆ ನೋಡದೆ ಕಾಂಪೌಂಡ್ ಜಿಗಿದು ಮಾಯವಾದ.

* * *

ದೇಹಕ್ಕೆ ಅಂಟಿದಂತೆ ಬಿಗಿಯಾಗಿ ಉಟ್ಟ ನೀಲಿ ರೇಷ್ಮೆ ಸೀರೆ. ಪಕ್ಕಕ್ಕೆ ಜೋಲಿದ ಸಡಿಲ ಕೇಶಗುಚ್ಛ. ಆಧುನಿಕ ಚೆಲ್ಲುವ ಮುಖ ಶೃಂಗಾರ.

ವೀಲ್ ಹಿಡಿದ ಚೆಲುವಿನ ಯುವತಿ ತನ್ನ ಹೆಸರು ಶರ್ಮಿಳಾ ಎಂದು ಮೆಲ್ಲನೆ ತಿಳಿಸಿದಾಗ ಸೌಭಾಗ್ಯ ಅವಳ ಮೇಲೆ ಮೊನಚು ನೋಟ ಮಿಂಚಿಸಿ ಮುಂದಕ್ಕೆ ಸರಿದಳು. ಬಾಗಿಲ ಹಿಡಿಯ ಕಡೆಗೆ ಕೈ ಹರಿಯಿತು.

"ಇಳಿಬೇಡ. ನಾಲ್ಕು ಮಾತು ಆಡಬೇಕು ನಾನು."

ಬೇಡಿಕೆಯ ಮೆರಗು ಹಚ್ಚಿದ ಆಣತಿ ಅದು. ಶರ್ಮಿಳಾ ನಗೆಮುಖ ತಿರುವಿದಳು. ಅಂದು ಕಾರ್ತೀಕನ ಮನೆಗೆ ಹೋದಾಗ ಕಾಣಿಸಿದ ಹುಡುಗಿ! ನಸುಗಪ್ಪು ಮುಖದ ಎಳೆಯ ಯುವತಿ ಅವನ ಹೆಂಡತಿ ಇರಬಹುದೆ? ಉಹುಂ, ತನ್ನ ಚೆಲುವಿನ ಕಡೆಗೇ ತಿರಸ್ಕಾರ ತೋರುವ ಲೇಖಕ ಇಂತಹ ಸಾಧಾರಣ ಬಾಲೆಯನ್ನು ಹೆಂಡತಿಯಾಗಿ ಪಡೆಯುವುದು ಅಸಂಭವ.

ಸೌಭಾಗ್ಯ ತೀವ್ರವಾಗಿ ಉಸಿರಾಡಿದಳು. ಈ ಭೇಟಿ ಅನಿರೀಕ್ಷಿತ. ಸಂಗೀತ ಶಾಲೆಯ ಮುಂದೆ ಕಾರು ನಿಲ್ಲಿಸಿ ತನಗಾಗಿ ಕಾದು ಒಳ ಬರುವಂತೆ ನಯವಾಗಿ ಕೇಳಿದ ಅಪರಿಚಿತೆ. ಚಮೇಲಿ ಗಾರ್ಡನ್ಸ್‌ನ ಬಂಡೆಯ ಮರೆಯಲ್ಲಿ ಕಾರ್ತೀಕನ

ಮುಂದೆ ನಷ್ಟ ತೋಡಿಕೊಳ್ಳುತ್ತಿದ್ದ ಹೆಣ್ಣು. ಕಣ್ಮರೆಯಾಗಿ ನಿಂತಿದ್ದ ಚೆಲುವು ಈಗ ಪಕ್ಕದಲ್ಲಿದೆ. ಇಂತಹ ಆಧುನಿಕ ರೂಪರಾಶಿಗೆ ಕಾರ್ತೀಕ ಸೋತುದರಲ್ಲಿ ಅಚ್ಚರಿಯಿಲ್ಲ. ಬಾಳುಗೆಟ್ಟವಳು ಸುಖ ಅರಸಲು ಹತಾಶಳಾಗಿದ್ದಾಳೆ.

"ನನಗೆ ಗೊತ್ತು ನೀವು ಆಡೋದು ಕಾರ್ತೀಕನ ಸೂಚನೆ ತೋರಿದಳು ಬಾಲೆ.

"ಸಂಬಂಧ ಇಲ್ಲವಾದ್ರೂ ನಿನ್ನೊಂದಿಗೆ ಮಾತಾಡೋದು ಮೇಲು. ಹತ್ತು ಮಾತಿಗೆ ಒಂದು ಉತ್ತರ ಅವನದು. ಸೌಮ್ಯ ಮುಖದ ಹಿಂದೆ ಅದೇನು ರೋಷ!... ಕೃತ್ರಿಮ!"

ಮೈಕಾವು ಮೆಲ್ಲನೆ ಏರಿತು. ಆಸೆ ಫಲಿಸದೆ ರೋಸಿದ ಹೆಣ್ಣು ಹಿಂದಿನ ಪ್ರೇಮಿಯಲ್ಲಿ ದೋಷ ಹುಡುಕುತ್ತಿದೆ.

"ಸೌಭಾಗ್ಯ...ಅದು ತಾನೆ ನಿನ್ನ ಹೆಸರು? ನೀನು ಕಾರ್ತೀಕನಿಗೆ ಏನಾಗಬೇಕು?"

ಹೊಟೇಲ್ ಸುತ್ತಿಸಿ ಜನಸಂದಣಿಯ ಭಾಗ ತಪ್ಪಿಸಿ ಅಡ್ಡರಸ್ತೆಗೆ ಇಳಿದಳು. ಕಿಶೋರಿಗೆ ವೈವಾಹಿಕ ಬದುಕು, ಎರಡು ತಿಂಗಳ ನಗರದ ಸ್ನೇಹಗಳು, ಕಾದಂಬರಿಗಳ ಓದು ನಯವಾದ ಸ್ವಾರ್ಥ ಕಲಿಸಿದ್ದವು. ಮುಂದಿನ ಪ್ರಶ್ನೆಗಳ ಸಾಲು ತಲೆಯಲ್ಲಿ ಹರಿದು ಹೋಯಿತು. ಸತ್ಯದ ತಲೆ ಮೆಟ್ಟುವ ಉತ್ತರಗಳು ಅವಕ್ಕೆ ಮದ್ದು!

"ಕಾರ್ತೀಕನ ಮನೆಯ ಸಾಕು ಹುಡುಗಿ. ಒಂದು ರೀತಿಯಲ್ಲಿ ಮನೆ ಆಳು."

ಅಳುಕಿದ ಎದೆಗೆ ಕೈ ಒತ್ತಿದಳು.

"ಕಾರ್ತೀಕನ ಮದುವೆ ಆಗಿರೋದು ನಿಜವೆ?"

ಅದಕ್ಕೆ ನಕಾರದ ಉತ್ತರ ಕೊಡುವಂತೆ ಇಲ್ಲ. ಆಕಾಶಕ್ಕೆ ನೋಟ ಎತ್ತಿದಳು. ಮಾತಿನ ಸರಣಿ ತಪ್ಪಿಸಿದಳು.

"ಕಾರ್ತೀಕ ತಾಯಿಗೆ ಹೇಳ್ತಿದ್ರು... ನಿಮ್ಮ ಪತಿಗೆ ಹಾಗಾಗಿದ್ದು ನಿಜವೆ?"

ಬೇಸರದ ಮುಖ ಅವಳ ಕಡೆ ತಿರುಗಿತು.

"ನಿಜ. ಪ್ರದೀಪನಿಗೆ ಕಾರು ಅಪಘಾತದಲ್ಲಿ ಗಾಯ ಆಯ್ತು. ಅದಕ್ಕೆ ನಾನು ಕಾರ್ತೀಕನ್ನ ಈಚೆಗೆ ಭೇಟಿ ಮಾಡಲಿಕ್ಕೆ ಆಗ್ಲಿಲ್ಲ. ಎಲ್ಲಾ ಬಿಟ್ಟು ನಾಗಮಂಗಲಕ್ಕೆ ಹೋದೆ. ಅವನಿಗೆ ಕಾಲಿಗೆ ಪೆಟ್ಟಾಗಿದೆ. ಈಗ ಕೋಲು ಹಿಡಿದು ನಡೀತಾನೆ."

ಸೌಭಾಗ್ಯ ನಿರ್ವಿಕಾರವಾಗಿ ಮಾತಿನ ಹಿಂದಿನ ಎಳೆ ಹಿಡಿದಳು.

ಕಾರ್ತೀಕ ಒಬ್ಬ ಚಿಕ್ಕ ಹುಡುಗೀನ ಮದುವೆ ಆದ್ರು. ಅವಳು ಈಗ ಇಲ್ಲಿಲ್ಲ... ತಂದೆ ಮನೆಗೆ ಹೋದ್ಲು."

ಶರ್ಮಿಳಾ ಕಣ್ಣುಗಳು ಅರಳಿ ಆಸೆ ಹೊಮ್ಮಿತು.

"ಯಾಕೆ ಹೋದ್ಲು? ಯಾವುದು ಅವಳ ಊರು?"

ಜೋಡಿ ಪ್ರಶ್ನೆ ದಾಳಿ ಮಾಡಿದವು.

ಗೊತ್ತಿಲ್ಲ. ಕಾರ್ತೀಕ ಅವರ ತಾಯಿಗೂ ಒಂದು ಮಾತು ಹೇಳೋದಿಲ್ಲ. ನೀವು ಹೇಳೊಹಾಗೆ ಹತ್ತು ಮಾತಿಗೆ ಅವರದು ಒಂದು ಉತ್ತರ."

"ಅವನ ಸ್ನೇಹಿತ ಮಲ್ಲಿಕಾರ್ಜುನ ಮದುವೆ ಆಗಿದ್ದು ತಿಳಿಸ್ದ. ಉಳಿದದ್ದು ಗೊತ್ತಿಲ್ಲಾಂದ. ಎಲ್ಲಾ ರಹಸ್ಯ."

"ನಿಮಗೆ ಮೀನಾಕ್ಷಿಯ ಸ್ನೇಹ ಹೆಂಗಾಯ್ತು?"

ತನ್ನ ಪ್ರಶ್ನೆಯ ಸರದಿ ಸಾಧಿಸಿದಳು.

"ಓ, ಅದು ಯಾವ ದೊಡ್ಡ ಸ್ನೇಹ? ಯಾವುದೊ ಪಾರ್ಟಿಯಲ್ಲಿ ಆಯ್ತು. ಹೆಚ್ಚು, ಕಡಿಮೆ ಒಂದೇ ದಿನಕ್ಕೆ ಮುಗಿದ ಪರಿಚಯ ಅದು. ನನ್ನಿಂದ ಕಾರ್ತೀಕನ ವಿಷಯ ಎಳೆಯೊ ಕುಹಕ ಬುದ್ಧಿ ಆಂಧ್ರದ ಹುಡುಗಿಗೆ ಕಾರ್ತೀಕನ ಕನಸು ಹತ್ತಿರಬೇಕು."

'ಕಿಲ ಕಿಲ' ನಗೆ ಹಾಕಿದಳು. ಸೌಭಾಗ್ಯಳಿಗೆ 'ಹಾಯ್' ಎನಿಸಿತು.

"ನಾನು ಕಾರ್ತೀಕನಿಗೆ ಗೊತ್ತಾಗಿದ್ದ ಹುಡುಗಿ...."

ಶರ್ಮಿಳಾ ಪ್ರತಿಕ್ರಿಯೆ ನಿರೀಕ್ಷಿಸುವಂತೆ ಕಾದಳು. ಕೃತಕ ಅಚ್ಚರಿ ತೋರಿದ ಸೌಭಾಗ್ಯ ಸತ್ಯಕ್ಕೆ ತೆರೆ ಎಳೆದು ಅವಳಿಗೆ ನೆಮ್ಮದಿ ನೀಡಿದಳು.

"ಈ ಸಂಗತಿ ಮನೆಯಲ್ಲಿ ಈವರೆಗೆ ಬಂದಿಲ್ಲ."

"ಕಾರ್ತೀಕನ ಮನೆಯಲ್ಲಿ ಇತ್ತೀಚಿನ ಬೆಳವಣಿಗೆ ಏನೂಂತ ಗೊತ್ತಾಗ್ಲಿಲ್ಲ. ಆ ಮನೆಗೆ ಹೋಗೋದಿಕ್ಕೆ ಧೈರ್ಯ ಇಲ್ಲ. ಸ್ವರ್ಣಮ್ಮನಿಗೆ ನನ್ನ ನೆರಳು ಕಂಡ್ರೂ ಆಗಲಾರದು. ಕಾರ್ತೀಕ ನನ್ನ ಹಾಗೆ ಬದುಕು ಹಾಳು ಮಾಡ್ಕೊಂಡ. ಇಪ್ಪತ್ತೈದು ದಾಟಿದ ನನ್ನ ಮದುವೆ ಆಗೋದಿಕ್ಕೆ ಹಿಂದು ಮುಂದು ನೋಡಿದೋನು ಹದಿನಾರರ ಏಳೆ ಹುಡುಗೀನ ನಿರ್ವಾಹವಿಲ್ಲದೆ ಕಟ್ಟಿಕೊಂಡ.. ಎಷ್ಟು ವಿಚಿತ್ರ! ಹೆಸರು ಚೆನ್ನಾಗಿ ಗಳಿಸಿರೊ ಕಾಲದಲ್ಲಿ ತಟ್ಟಿದ ಹುಚ್ಚು! ಸಾಮಾನ್ಯ ದರ್ಜೆ ಹುಡುಗಿಯ ಮೇಲೆ ಅತ್ಯಾಚಾರ! ಆಮೇಲೆ ಗುಟ್ಟಿನಲ್ಲಿ ಮದುವೆ."

ಚೀತ್ಕರಿಸುವಂತಾಯಿತು. ಉದ್ವೇಗ ಒತ್ತಿದಳು.

"ನೀವು ಕೇಳಿರೋದು ತಪ್ಪು. ಅವರಿಗೆ ಹುಚ್ಚು ತಟ್ಟಲಿಲ್ಲ. ಅವರ ಪಾಲಿಗೆ ಬಂದ ಕರ್ತವ್ಯ ಅಂತ ಕೇಳ್ದೆ."

ಕರ್ತವ್ಯದ ಸನ್ನಿವೇಶ, ನಂತರದ ಘಟನೆ ಕ್ಷಣದಲ್ಲಿ ಚಿತ್ರ ಬಿಡಿಸಿತು.

ಕೆಂಪು ಕಣಗಲೆ ಹೂವಿನ ಕಾಲೋನಿ ಮನೆ. ಪ್ರಜ್ಞೆ ತಪ್ಪಿ ಮಲಗಿದ ಕನಕ. ಸೋಮವಾರಪೇಟೆ ದಿಕ್ಕಿನ ರಾತ್ರಿಯ ನಿರ್ಜನ ರಸ್ತೆ. ನಕ್ಷತ್ರ ತುಂಬಿ ಆಕಾಶ. ರಾತ್ರಿ

ಕೀಟಗಳ ಮೊರೆತ. ಹೂವರ್ಚಿ ಮರದಡಿ ತನ್ನ ತೋಳ ಆಸರೆಯಲ್ಲಿ ಕಾರ್ತೀಕ. ರಾತ್ರಿರಾಣಿಯ ಸವಿ ಕೆಂಪು.....ಲಘು ಚುಂಬನ!....

ಕಾರು ಗಕ್ಕನೆ ನಿಂತಿತು.

"ಕಾರ್ತೀಕನಿಗೆ ತನ್ನ ಮೇಲೆ ಸೇಡು ತೀರಿಸಿಕೊಳ್ಳೊ ಆತುರ."

"ಅದೂ ನಿಮ್ಮ ತಪ್ಪು ಕಲ್ಪನೆ."

ನೋವು ಹತ್ತಿದ ನಿಧಾನ ಸ್ವರದಲ್ಲಿ ಹೇಳಿದಳು ಶರ್ಮಿಳಾ.

ಕಾರ್ತೀಕ ಒಂದು ಕಾಲದಲ್ಲಿ ಕನಸಿನ ರಾಜ. ಅವನ ಪಕ್ಷಿ ಪ್ರೇಮ, ಬುಲ್ ಬುಲ್ ತರಂಗದ ರಾಗ, ಆಕಾಶಕ್ಕೆ ಎತ್ತಿ ಹಿಡಿದ ಕಾದಂಬರಿಗಳು ನನ್ನ ಸೆಳೆದು ಹಾಕಿದ್ವು. ಉಕ್ಕಿನ ಮನುಷ್ಯನ್ನ ಕರಿಗಿಸ್ದೆ...ಛೇ, ಸ್ವಲ್ಪ ಆತುರಬಿದ್ದೆ. ಕಾರ್ತೀಕನ್ನ ಕಳಕೊಂಡೆ."

ಸೌಭಾಗ್ಯಳಿಗೆ ಅವಳ ಬಗೆಗೆ ಮರುಕ ಬಂತು. ಕ್ಷಣದ ಕಾಮಕ್ಕೆ ಸೋತು ಪ್ರೇಮದ ಹತ್ಯೆ ನಡೆಸಿದ ಬಡಪಾಯಿ ಹೆಣ್ಣು!

ತುಟಿಗಳು ಬಿಗಿಯಾದವು. ಸ್ವಾರ್ಥ ಹೆಡೆ ಎತ್ತಿ ಪ್ರಶ್ನಿಸಿತು. ಯಾರು ಈ ಶರ್ಮಿಳಾ?

"ಸಂಬಂಧವಿಲ್ಲದೋಳ ಮುಂದೆ ಇವೆಲ್ಲ ಹೇಳಿಕೊಂಡ್ರೆ ಏನು ಪ್ರಯೋಜನ? ನಾನು ಇವೆಲ್ಲ ಅವರಿಗೆ ಒಪ್ಪಿಸೋಳಲ್ಲ.

ಉಸಿರು ತೀವ್ರಗೊಂಡಿತು. ವೀಲ್ ಒತ್ತಿ ಹಿಡಿದಳು.

"ನನ್ನ ಗಂಡನಿಗೆ ವಾಸಿ ಆದಮೇಲೆ ಅವನಿಂದ ಬಿಡುಗಡೆ ಪಡೀತೀನಿ. ಕಾರ್ತೀಕನ್ನ ಪಡಕೊಳ್ತೀನಿ."

ಭುಗಿಲೆದ್ದ ಉರಿ ತಡೆದಳು ಸೌಭಾಗ್ಯ.

"ಒಂದು ಕಾಲದಲ್ಲಿ ನಿಮ್ಮ ಕನಸಿನ ರಾಜ ಆಗಿದ್ದು, ಈಗ ಬೇರೆಯೋಳನ್ನ ಮದುವೆ ಆಗಿರೋರ ಮೇಲೆ ಯಾಕೆ ಇಷ್ಟೊಂದು ರೋಷ? ಅವರಿಂದ ದೂರ ಇದ್ದು ಅವರಿಗೆ ಒಳ್ಳೆ ಬದುಕು ಹಾರೈಸಿ. ನಿಮ್ಮ ಬಾಳೂ ಸರಿ ಹೋಗುತ್ತೆ."

ರೋಷದ ಹೆಣ್ಣು ತಲೆ ಕೊಡವಿತು.

"ಕಾರ್ತೀಕನಿಗೆ ಹೇಳ್ಬಿಡು. ನಾನು ಅವನನ್ನು ಅಷ್ಟು ಸುಲಭವಾಗಿ ಮರೆಯೊ ಹಾಗಿಲ್ಲ. ಪಕ್ಷಿಗಳ ಬಂಧನ ಸಹಿಸದೆ ಇದ್ದೋನಿಗೆ ಮನುಷ್ಯ ಜಾತಿ ಮೇಲೆ ಪ್ರೇಮ ಇಲ್ಲ!"

"ನೀವು ಮಾಡಿದ ತಪ್ಪಿಗೆ ನಿರಪರಾಧಿ ಮೇಲೆ ಎಷ್ಟು ಕಠಿಣವಾಗಿ, ಅರ್ಥವಿಲ್ಲದೆ ದಾಳಿ ಮಾಡ್ತೀರಿ."

"ಒಂದು ರೀತಿಯಲ್ಲಿ ನಾನೇ ಮೋಸ ಹೋದೆ."

"ಹಾಗಂತ ಭಾವಿಸ್ಕೊಳ್ಳಿ. ಅವರು ನಿಮಗೆ ಮೋಸ ಮಾಡ್ಲಿಲ್ಲ. ಆಕರ್ಷಣೆ ಮಾಡೊ ವಸ್ತುವಿನಲ್ಲಿ ದೋಷ ಹುಡುಕಬಾರದು"

ಅಂಬಿನ ದೃಷ್ಟಿ ತೂರಿ ಬಂತು. ಎಳೆ ಹುಡುಗಿಯಿಂದ ದೊಡ್ಡ ಮಾತು! ನಿಟ್ಟುಸಿರು ಬಂತು.

"ಆ ಮನೆಯಲ್ಲಿ ಆಶ್ರಯ ಪಡೆದೋಳಿಗೆ ಇಷ್ಟೊಂದು ಅಭಿಮಾನ. ಕೃತಜ್ಞತೆ!... ಸೌಭಾಗ್ಯ, ನೀನು ಕಾರ್ತೀಕನ ಹೆಂಡತಿ ಆಗಿದ್ರೆ ನನ್ನ ಕೊಂದುಬಿಡ್ತಿದ್ದೆ."

ಬೆನ್ನು ಸವರಿದಳು. ಆ ಸ್ಪರ್ಶ ಅವಳಲ್ಲಿ ಉದ್ರೇಕ ಪುಟಿಸಿತು. ಹೃದಯ ತಳ್ಳಿದ ಮಾತು ಹೊರಬರುವಂತಿಲ್ಲ.

ಅವಳ ಮೌನ ತನ್ನ ಬಗೆಗೆ ತಾಳುತ್ತಿರುವ ಒಳ್ಳೆಯ ಅಭಿಪ್ರಾಯ ಎನಿಸಿತು ಶರ್ಮಿಳಾಗೆ. ಆತ್ಮೀಯವಾಗಿ ಭುಜ ಒತ್ತಿ ನುಡಿದಳು.

"ಆ ಮನೇಲಿರೊ ನಿನಗೇ ಅರ್ಥವಾಗಿದೆ. ಹೆಂಡತಿ ಹೆಸರಿನ ಎಳೆ ಹುಡುಗಿ ಕಾರ್ತೀಕನ ಘನತೆ ಏನು ಉಳಿಸ್ತಾಳೆ?.... ನನ್ನ ಗಂಡ ಬಿಡುಗಡೆ ನೀಡೋದಿಕ್ಕೆ ಸಿದ್ಧವಾಗಿದಾನೆ. ನಾನು ಕಾರ್ತೀಕನ್ನ ಮತ್ತೆ ಒಲಿಸಿಕೊಳ್ಳಬಲ್ಲೆ. ಅವನು ನನ್ನ ಮದುವೆ ಆಗ್ತಾನೆ."

" ಆ ವಿಶ್ವಾಸ ಇದೆಯೆ?"

ಪ್ರಶ್ನೆಯಲ್ಲಿ ಆತ್ಮವಿಶ್ವಾಸ ಬಲವಾಗಿತ್ತು.

"ಪೂರ ವಿಶ್ವಾಸ ಇದೆ. ನನ್ನ ಮದುವೆ ಆಗೋದಿಕ್ಕೆ ಅರ್ಧ ಒಪ್ಪಿಗೆ ಕೊಟ್ಟಿದಾನೆ. ಆ ಎಳೆ ಹುಡುಗಿಯಿಂದ ಬಿಡುಗಡೆ ಪ್ರಯತ್ನ ಮಾಡ್ತಿದಾನೆ ಅಂತ ತಿಳಿದೆ."

ಅರ್ಧ ಒಪ್ಪಿಗೆ? ಅದು ಅಸಂಭವವಲ್ಲ. ತನ್ನಿಂದ ಅವನು ಬಿಡುಗಡೆ ಹೊಂದಲು ಸೂಚನೆ ಕೊಟ್ಟಿರುವುದು ನಿಜ.

ಶರ್ಮಿಳಾ ಉತ್ಸಾಹದಿಂದ ಮುಂದೆ ಹೇಳಿದಳು.

"ನನ್ನ ಬಾಳು ಸರಿಪಡಿಸಿಕೊಳ್ಳೋದಿಕ್ಕೆ ಅವಕಾಶ ಸಿಕ್ಕಿದೆ. ಅದಕ್ಕೆ ಹೋರಾಡ್ತೀನಿ. ಕಾರ್ತೀಕನಿಗೆ ಇತ್ತೀಚೆಗೆ ಏಕಾಏಕಿ ಹಣದ ಮೇಲೆ ಆಸೆ ಹುಟ್ಟಿದೆ. ಅವನನ್ನ ಹಣದಿಂದ ಗೆಲ್ತೀನಿ. ತಂದೆಗೆ ತಿಳಿಸಿದೀನಿ. ಧನಗೂರಿನ ಆಸ್ತಿಯೆಲ್ಲಾ ಕರಗಿದರೂ ಸರಿ."

ವಿಕಟ ನಗೆ ಅವಳನ್ನು ದೇಹಾದ್ಯಂತ ನಡುಗಿಸಿತು. ಕಾರ್ತೀಕನಿಗೆ ಹಣದ ಮೇಲೆ ಆಸೆ! ಹೊಸ ಜಾಡ್ಯಕ್ಕೆ ತನ್ನಲ್ಲಿ ಮದ್ದಿಲ್ಲ.

"ಆ ಎಳೆ ಹುಡುಗಿ ಬಿಡುಗಡೆಗೆ ಒಪ್ಪದ ಹೋದ್ರೆ?"

ಧ್ವನಿ ಕಂಪನ ಸ್ಪಷ್ಟವಾಗಿ ಕೇಳುವಂತಿತ್ತು.

ನಗೆ ಮಾಯವಾದ ಶರ್ಮಿಳಾ ಮುಖದಲ್ಲಿ ರಂಗು ಬದಲಿಸಿತು.

"ಕಾರ್ತೀಕನ ಮಗಳ ವಯಸ್ಸಿನ ಆ ಹುಡುಗಿ ಬಿಡುಗಡೆಗೆ ಒಪ್ಪದೆ ಹೋದ್ರೆ."

"ಹುಂ... ಒಪ್ಪದೆ ಹೋದ್ರೆ?....

"ಅವಳಿಗೆ ನಾನು ಚೂರಿ ಹಾಕಿಬಿಡ್ತೀನಿ."

ಸಿಡಿದು ಬಂತು ನುಡಿ.

ಸೌಭಾಗ್ಯಳ ಕಂಪನ ಒದರಿ ಹೋಗಿತ್ತು. ಭವಿಷ್ಯ ರೂಪಿಸಿಕೊಳ್ಳಲು ಎಂತಹ ನಿಲುವು ನಿರ್ಧಾರ ಅವಳದು! ಅದನ್ನು ರೂಪಿಸಿಕೊಡಲು ತನ್ನ ಹತ್ಯೆ? ತಾನು ಭೈರಾಗಿಣಿ ಅಲ್ಲ.

ಪ್ರತಿ ಮಾತು ನಿರ್ಭಯವಾಗಿ ಬಂತು.

"ನೋಡಿ, ಶರ್ಮಿಳಾ. ನಾನು ಕಾರ್ತೀಕನ ಮನೆಯಲ್ಲಿ ಅಧಿಕಾರವಿಲ್ಲದ ಹೆಣ್ಣು ಬೊಂಬೆ. ಆದರೂ ಧೈರ್ಯವಹಿಸಿ ಇಷ್ಟು ಹೇಳ್ತೀನಿ. ಕಾರ್ತೀಕನ ಮಗಳ ವಯಸ್ಸಿನ ಹೆಂಡತಿ ಮೊದಲು ಮುಗ್ಧೆ ಆಗಿದ್ಲು. ಈಗ ಬದುಕೊ ಆಸೆ. ಸ್ವಾರ್ಥ ಅವಳಲ್ಲಿ ಚಿಗುರ್ತಾ ಇದೆ. ಆ ಮನೆ ಸೇರಿ ರಕ್ಷಣೆ, ಪೋಷಣೆ, ಶಿಕ್ಷಣ ನಾಗರಿಕತೆ ಎಲ್ಲಾ ಪಡೆದ ನಾನು ಋಣ ತೀರಿಸಬೇಡವೆ? – ಆ ಎಳೆ ಹುಡುಗಿಯ ರಕ್ಷಣೆ ನನ್ನ ಕರ್ತವ್ಯ ಅಲ್ಲವೆ? ಅವಳ ವಿರುದ್ಧ ಮಿತಿ ಮೀರಿದ ಪ್ರಯತ್ನ ನೀವು ಮಾಡೋದಿಕ್ಕೆ ಮೊದಲೇ ನಾನು ನಿಮಗೆ ಚೂರಿ ಹಾಕಿಬಿಡ್ತೀನಿ!.... ಇನ್ನು ನನಗೆ ಏನೂ ಹೇಳ್ಬೇಡಿ. ಕಾರು ತಿರುಗ್ಸಿ ನನ್ನ ಶಾಲೆ ಹತ್ರ ಬಿಟ್ಟು ಹೋಗಿ."

ಕರ್ಕಶವಾಗಿ ಒದರಿ ಅಂಚಿಗೆ ಸರಿದು ಮುಖ ಹೊರಕ್ಕೆ ತಿರುವಿದಳು. ಎಳೆ ನಾಗರದ ಫೂತ್ಕಾರಕ್ಕೆ ಬೆದರಿದ ಶರ್ಮಿಳಾ ಮಾತಿಲ್ಲದೆ ವಾಹನ ಹಿಂದಕ್ಕೆ ತಿರುಗಿಸಿದಳು.

* * *

ಸ್ಟುಡಿಯೊ ಸೆಟ್‌ನಲ್ಲಿ ಕುಳಿತು ಫೈಲಿನ ಪುಟಗಳನ್ನು ಸರಸರ ತಿರುವುತ್ತಿದ್ದ ಕಾರ್ತೀಕ, ತನಗಾಗಿ ಯಾರೊ ಕಾದಿರುವರೆಂದು ಕೇಳಿ ಲಾಂಜ್ ಪ್ರವೇಶಿಸಿದವನು ಹಿಮಗಟ್ಟಿ ನಿಂತ.

ಕಾದಿದ್ದವನು ಬರ್ನಾರ್ಡ್! ಮಣ್ಣಿನ ದೋಣಿಗೆ ತನ್ನನ್ನು ಇಳಿಸಿ, ದಂಡೆಯಲ್ಲಿ ನಿಂತ ಧೂರ್ತ ಅಂಬಿಗ.

ಧೊಪ್ಪನೆ ಎದ್ದ ಭಾವನೆಗಳನ್ನು ತಾಳ್ಮೆಯಿಂದ ಒತ್ತಿ ಹಿಂದಕ್ಕೆ ಅಡಿಯಿಟ್ಟ.

"ನಿಲ್ಲು. ಕಾರ್ತೀಕ. ನನಗೆ ಹೆದರಬೇಕಾಗಿಲ್ಲ ನೀನು"

ಬಲಿಷ್ಠ ಕೈಗಳನ್ನು ಜೋಡಿಸಿ ವಿನಂತಿಸಿದ ಬರ್ನಾರ್ಡ್.

"ನಾನು ಯಾವತ್ತೂ ನಿನಗೆ ಹೆದರಲಿಲ್ಲ, ಬರ್ನಾರ್ಡ್. ಹಿಂದೆ ಸೋತಿದ್ದು ನಿನ್ನ ಬೆದರಿಕೆ. ಆರ್ಭಟಕ್ಕಲ್ಲ. ನಿನ್ನ ಹೆಂಡತಿಗೆ ಸಾಯೋವಾಗ ಕೊಟ್ಟ ಮಾತು ನೈತಿಕವಾಗಿ ನನ್ನ ಜಗ್ಗಿ ಹಾಕ್ತು."

"ಬಲ್ಲೆ. ಅದರ ಲಾಭ ಪಡೆದು ನಾನು ತೋರಿದ ಒರಟು ವರ್ತನೆಗೆ ಪಶ್ಚಾತ್ತಾಪ ಪಟ್ಟಿದೀನಿ. ಈಗ ಕ್ಷಮೆ ಬೇಡೋದಿಕ್ಕೆ ಬಂದೆ."

ಕಾರ್ತೀಕ ಗಂಭೀರವಾಗಿ ತನ್ನ ಹಿಂದೆ ಬಾಗಿಲು ಮುಚ್ಚಿದ.

"ನನ್ನಲ್ಲಿ ಇನ್ನೂ ಏನು ಉಳಿದಿದೇಂತ ಕಸಿದುಕೊಳ್ಳೋದಿಕ್ಕೆ ಬಂದೆ. ಮಗಳಾಗಿ ಸಾಕಬೇಕಾದೋಳನ್ನ ಬಲವಂತವಾಗಿ ಮದುವೆ ಮಾಡಿಸ್ದೆ. ಇಬ್ಬರಿಗೂ ನೆಮ್ಮದಿ ಸಿಗದ ಹಾಗೆ ಮಾಡಿದ್ರಿಂದ ನಿನಗೇನು ಲಾಭ ಆಯ್ತು..?"

"ಅದರಲ್ಲಿ ನನ್ನೊಬ್ಬನ ಸ್ವಾರ್ಥ ಇರ್ಲಿಲ್ಲ. ಮೂವರಿಗೂ ಲಾಭ ಆಗುತ್ತೆ ಅಂತಲೇ ಆ ಮದುವೆ ಮಾಡ್ಸಿದ್ದು. ಈಗಲೂ ಅತಂತ್ರವಾಗಿಲ್ಲ. ನೀನು ಸೌಭಾಗ್ಯಳಿಗೆ ಹಾಕಿರೊ ಬಿಡುಗಡೆ ಬೆದರಿಕೆಯಿಂದ ಈ ದೊಡ್ಡ ದೇಹ ಉಡುಗಿ ಹೋಗಿದೆ. ನಿನ್ನ ಸಹಕಾರ ಇಲ್ಲವಾದ್ರೆ ನನ್ನ ವರ್ಷಗಳ ಶ್ರಮ ಸ್ವಲ್ಪದರಲ್ಲಿ ವ್ಯರ್ಥವಾಗಿ ಬಿಡುತ್ತೆ. ಸೌಭಾಗ್ಯಳ ಬದುಕು ಹಾಳಾಗತ್ತೆ."

ಸಹಕಾರ? ವರ್ಷಗಳ ಶ್ರಮ ಯಾರಿಗಾಗಿ?

ಗಹನವಾಗಿ ನೋಡಿದ ಕಾರ್ತೀಕ, ದಟ್ಟ ರೋಮಭರಿತ ಮುಖದಲ್ಲಿ ಹಿಂದಿನ ಭೀಕರತೆ ಇಲ್ಲ. ನಿಸ್ತೇಜ ಕಣ್ಣುಗಳು. ಸಮಸ್ಯೆಯ ವ್ಯಕ್ತಿ ಬರ್ನಾರ್ಡ್!

"ನಾನು ಬಿಡುಗಡೆಯ ಬೆದರಿಕೆ ಹಾಕಿಲ್ಲ. ಸೌಭಾಗ್ಯಳ ಜೀವನ ಹಾಳಾಗಬಾರದು ಅಂತಲೇ ನಾನು ಅವಳಿಗೆ ಅದರ ಸೂಚನೆ ಕೊಟ್ಟಿದ್ದು. ಅವಳ ವಯಸ್ಸಿಗೆ ತಕ್ಕ ವ್ಯಕ್ತೀನ ಅವಳು ನಿರಾಂತಕವಾಗಿ ಪಡೆಯೋದಿಕ್ಕೆ ಅದು ದಾರಿ."

"ಕಾಗದದಲ್ಲಿ ಎಲ್ಲಾ ತಿಳಿಸಿದಾಳೆ ಸೌಭಾಗ್ಯ. ಬುದ್ಧಿ ಬಲಿಯದ ಹುಡುಗಿ ಅವಳು. ಅವಳಿಗೆ ಹದಿನಾರು ವರ್ಷ ದಾಟೋದೆ ಕಾದಿದ್ದೆ. ಹಾರಂಗಿಯಂತಹ ಜಂಗಲ್ ಜಾಗದಲ್ಲಿ. ನನ್ನ ಯೋಗ್ಯತೆಗೆ ಸರಿಯಾದ ಹುಡುಗ ಎಲ್ಲಿ ಸಿಗ್ತಿದ್ದ? ನೀನು ದೇವರ ಹಾಗೆ ಬಂದೆ. ನಿನ್ನ ಬಳಸಿಕೊಂಡೆ. ನೀನು ಹೆಸರು ಪಡೆದ ಮನುಷ್ಯ. ಸಮತೂಕದ ಬುದ್ಧಿಯವ ಅಂತ ನಿನ್ನ ಸ್ನೇಹಿತನಿಂದ ತಿಳಿದೆ. ನಿನ್ನ ಬಿಡೋಕೆ ಮನುಷ್ಯ ಬರ್ಲಿಲ್ಲ. ಆಗ ವಯಸ್ಸಿನ ಪ್ರಶ್ನೆ ನನಗೆ ಬರಲಿಲ್ಲ. ಒಳ್ಳೆ ದಾಂಪತ್ಯಕ್ಕೆ ವಯಸ್ಸು ಅಡ್ಡ ಬರಲಾದರು. ಸ್ವಲ್ಪ ವಯಸ್ಸು ಏರಿದ ಗಂಡನೇ ಹೆಂಡತೀನ ಸುಖವಾಗಿ ಇಡಬಲ್ಲ ಅಂತ ನಂಬಿರೋನು ನಾನು."

"ನಿನ್ನ ಉದ್ದೇಶ ಏನೇ ಇರಲಿ. ಆಗ ನೀನು ಮಾಡಿದ್ದು ಸರಿಯಲ್ಲಾಂತ ಹೇಳ್ತೀನಿ. ನನ್ನ ಮನಸ್ಸು ಕೆಟ್ಟಿದ್ದ ಕಾಲದಲ್ಲಿ. ನಿನ್ನ ಹೆಂಡತಿ ಆರೋಗ್ಯ ಹೆದಗೆಟ್ಟಿದ್ದಾಗ

ನಿನ್ನ ಸ್ವಾರ್ಥ ಸಾಧಿಸ್ಕೊಂಡೆ. ಮೃಗ ನೀನು! ಮೃಗ ಎರಡು ಕ್ಷಣ ಮೆದು ಆಗಿರಬೋದು. ನನ್ನ ಸ್ವಾರ್ಥದ ಕಾಲ ಇದು. ಸೌಭಾಗ್ಯಳ ಮೇಲೆ ಬಿಡುಗಡೆ ಒತ್ತಾಯ ತಂದ್ರೆ ಏನು ಮಾಡ್ತೀಯ? ನನ್ನ ಕೊಲೆ ಮಾಡ್ತೀಯ?"

ಕೈ ಚಾಚಿ ಸೋಲುತ್ತಿದ್ದವನ ಮುಖ ನಿಟ್ಟಿಸಿದ. ಬರ್ನಾರ್ಡ್ ಕಣ್ಣು ಮುಚ್ಚಿ ನಿಸ್ಸಹಾಯಕನಂತೆ ತಲೆ ಅಲುಗಿಸಿದ.

"ನನಗೆ ಈಗ ಅಂತಾ ತಾಕತ್ತಿಲ್ಲ. ನೀನು ಸೌಭಾಗ್ಯಳನ್ನ ಬಿಟ್ಟರೆ ನನಗೆ... ಸ್ವಂತದ ನಷ್ಟ ವಿಪರೀತ. ಆದರೆ ಚಿಂತೆ ಅಷ್ಟಿಲ್ಲ. ಸೌಭಾಗ್ಯಳ ಎಳೆ ವಯಸ್ಸಿನ ಮೇಲೆ ಆಳವಾದ ಬರೆ ಬೀಳತ್ತೆ. ಹಾಗೆ ಮಾಡ್ಬೇಡ, ಕಾರ್ತೀಕ."

ಅಜಾನುಬಾಹು ಮುಂದೆ ಸರಿದು ಅವನ ಎರಡು ಕಾಲುಗಳನ್ನು ಹಿಡಿದ.

"ನೀನು ಕುಡುಕ. ಬರ್ನಾರ್ಡ್. ಕುಡಿಯೋನಿಗೆ ಒಂದು ಸಾರಿ ದುಡುಕು. ಮತ್ತೊಂದು ಸಾರಿ ಅತಿ ವಿನಯ. ನೀನೂ ಅದಕ್ಕೆ ಹೊರತಲ್ಲ."

ಅವನ ಮೇಲಿನ ಸಂಶಯ ತಪ್ಪದೆಂದು ನಯವಾಗಿ ಪ್ರಕಟಿಸಿದ ಕಾರ್ತೀಕ.

"ಈಗ ತೋರಿಸ್ತಾ ಇರೊ ವಿನಯ ನನ್ನ ಸದ್ಯದ ಪರಿಸ್ಥಿತಿಯ ಸತ್ಯ ಚಿತ್ರ. ಕುಡುಕ ಆದ್ರು ನಿಯತ್ತು ಬಿಟ್ಟೋನಲ್ಲ. ನನ್ನ ಮಗನ ಸಾವು. ಹೆಂಡತಿ ಕಾಯಿಲೆಗೆ, ಬಡತನ, ಅಲೆಮಾರಿ ಜೀವನ. ಬದುಕಿನಲ್ಲಿ ಬೆನ್ನೇರಿದ ಪಾಪ ಇವೆಲ್ಲ ನನಗೆ ಕುಡಿತ ಕಲಿಸಿದ್ವು..."

"ಬರಹಗಾರರೆಲ್ಲ ನಿನ್ನ ಹಾಗೆ ಕುಡುಕರು. ಅಂತ ನಿನ್ನ ಭಾವನೆ."

ಅದನು ಕಾಲು ಹಿಡಿದೇ ಇದ್ದ.

"ಹಾಗೆ ಭಾವಿಸಿದ್ದು ತಪ್ಪು. ಸೌಭಾಗ್ಯ ಹೇಳಿದ್ಲು...."

ಲಾಂಜ್ ಬಾಗಿಲು ಮೆದು ಶಬ್ದದಲ್ಲಿ ತುಸು ಒಳ ಸರಿಯಿತು. ಲೇಖಕನ ಪಾದ ಹಿಡಿದ ಬಲಾಢ್ಯ! ನಿರ್ದೇಶಕ ಅರ್ಥವಾಗದ ಬಿಗು ಸನ್ನಿವೇಶ ಗಮನಿಸಿ. "ಕ್ಷಮಿಸು, ಮಿಸ್ಟರ್ ಕಾರ್ತೀಕ" ಎಂದು ತಲೆ ಹಿಂದಕ್ಕೆ ತೆಗೆದು ಬಾಗಿಲು ಎಳೆದುಕೊಂಡ.

ಬರ್ನಾರ್ಡ್ ಎದ್ದು ನಿಂತು ಹಣೆ ಸವರಿದ.

"ನಿನ್ನಿಂದ ವಿಪರೀತ ಮುಚ್ಚು ಮರೆ ನಡೆದಿದೆ. ಎರಡು ತಿಂಗಳಾದ ಮೇಲೆ ಬಂದೋನು ನನಗೆ ಕಾಯದೆ, ಸೌಭಾಗ್ಯಳಿಗೆ ಒಂದು ಮಾತೂ ತಿಳಿಸ್ದೆ ಮಹಡಿಯಿಂದ ಧುಮುಕಿ ಹೋಗಿದ್ದು ಯಾಕೆ?"

ಕಾರ್ತೀಕನ ಪ್ರಶ್ನೆ ಅವನತ್ತಲೇ ತಿರುಗಿತು. ತಾನು ಆ ರಾತ್ರಿ ಮಹಡಿಯಿಂದ ಜಿಗಿದುದೇಕೆ?

"ಬದುಕಿನಲ್ಲಿ ಮಾಡಿರೊ ತಪ್ಪುಗಳು ನನ್ನಿಂದ ಅಂಥಾ ಹುಚ್ಚು ಕೆಲಸ ಮಾಡಿಸ್ತಾ

ಇವೆ."

"ನೀನು ರಹಸ್ಯದ ಮನುಷ್ಯ."

ಗೋಡೆ ಒರಗಿದ ಬರ್ನಾರ್ಡ್ ಅಪರಾಧಿಯಂತೆ ಮೌನವಾಗಿ ನೆಲ ನೋಡಿದ. ಕಾರ್ತೀಕ ಅವನನ್ನು ಸಮೀಪಿಸಿ ಎದೆ ತಟ್ಟಿದ.

"ಸೌಭಾಗ್ಯ ಹೇಳಿದ್ಲು ನಿನಗೆ ಯಾವುದೊಕನಸಿನ ಗಂಟು ಸಿಕ್ಕಿದೆ ಅಂತ. ಅನಾಯಾಸವಾಗಿ ಬಂದ ಹಣ! ಸೌಭಾಗ್ಯಳನ್ನು ನನ್ನ ಹೆಂಡತಿಯಾಗಿ ಉಳಿಸಿ ಕೊಂಡ್ರೆ ನನಗೆ ಎಷ್ಟು ಹಣ ಕೊಡ್ತೀಯ?"

ಕನಸುಗಾರ ಅಚ್ಚರಿಯ ಪರಮಾವಧಿಯಲ್ಲಿ ಕಂಪಿಸಿದ. ತಾನು ಸೌಭಾಗ್ಯಳಿಗಾಗಿ ಸೃಷ್ಟಿಸಿದ ಸೂಕ್ತ ಪತಿ ಇವನೆ? ಅಂದು ನಿರಪರಾಧಿ ಕಾರ್ತೀಕನ ಮೇಲೆ ತೋರಿದ ಧೂರ್ತತೆಯ ಪ್ರತೀಕಾರ!

ಬೆವರು ಒರೆಸಿ ಉಸಿರಿದ.

"ನೀನು ಆಸೆಪಡೋದಕ್ಕಿಂತ ಹೆಚ್ಚಾಗಿ...ಕೆಲವು ಲಕ್ಷ! ನಾನು ಕೊಡಬೇಕಾಗಿಲ್ಲ. ಅದೇ ಸಿಗುತ್ತೆ."

ಧನದಾಹಿ ಮೆಲ್ಲನೆ ಗಹಗಹಿಸಿದ.

"ನನಗೆ ಹಣ ಬೇಕು. ಇದೊಂದು ಒಪ್ಪಂದದ ಹಾಗೆ. ನೀನು ಹಣ ಕೊಡೋದಿಕ್ಕೆ ಒಪ್ಪಿದೀಯ. ನಾನು ಸೌಭಾಗ್ಯಳನ್ನು ಬಿಡೋದಿಲ್ಲಾಂತ ಆಶ್ವಾಸನೆ ಕೊಡ್ತೀನಿ. ಹಾರಂಗಿಯಲ್ಲಿ ನಡೆದ ಪ್ರಸಂಗದಿಂದ ಈತನಕ ನನ್ನ ತಲೆಯಲ್ಲಿ ಗೊಂದಲ ಸಾಗ್ತಾ ಇದೆ. ಬರ್ನಾರ್ಡ್! ಸೌಭಾಗ್ಯ!.... ಎರಡೂ ಹೊಂದಿಕೊಳ್ಳದೆ ತಾಕಲಾಟ ನಡೆಸ್ತಾ ಇರೊ ನೆಮ್ಮದಿಗೆಟ್ಟ ಜೀವಿಗಳ ಜೋಡಿ ನೀನು ಮನಸ್ಸಿನಲ್ಲಿ ಏನೊ ಕೂಡಿಟ್ಟು ಕ್ಷಯಿಸ್ತಾ ಇದೀಯ. ಕಟುಕನ ಮುಖವಾಡ ಹಾಕಿದ್ರೂ ನಿನ್ನ ಹೃದಯ, ತಲೆ ಚಿಂತೆಯಿಂದ ಛಿದ್ರವಾಗಿವೆ. ನಿನಗೆ ಶಾಂತಿ ಇಲ್ಲ."

"ನಿಜ, ಕಾರ್ತೀಕ. ಅದು ಪಾಪದ ಫಲ."

ಕಣ್ಣುಗಳಿಂದ ನೀರಿಳಿಯಿತು.

"ಈ ಸೋಗು ಯಾಕೆ? ನೀನು ಕ್ರಿಶ್ಚಿಯನ್ ಅಲ್ಲ."

"ನಾನು ಕ್ರಿಶ್ಚಿಯನ್ ಅಲ್ಲ..." ತಗ್ಗಿಸಿದ ತಲೆ ಎತ್ತದೆ ಸಮ್ಮತಿಸಿದ.

"ಹಾರಂಗಿಯ ರೂತಮ್ಮ ಸೌಭಾಗ್ಯಳ ಚಿಕ್ಕಮ್ಮ ಅಲ್ಲ."

"ಅಲ್ಲ" ತಲೆ ಎತ್ತಿದ.

"ನನ್ನ ಮಾತಿಗೆ ಸತ್ಯವಾದ ಉತ್ತರ ಕೊಡು."

ಅವನ ದೃಢವಾದ ಕೈ ಎತ್ತಿ ತನ್ನ ತಲೆಯ ಮೇಲಿರಿಸಿದ.

"ಉತ್ತರ ಕೊಡ್ತೀನಿ" ಕಣ್ಣು ಮುಚ್ಚಿದ.

"ಸೌಭಾಗ್ಯ ನಿನ್ನ ಮಗಳಲ್ಲ.....!"

"ನಿಜ, ಕಾರ್ತೀಕ....ಸೌಭಾಗ್ಯ ನನ್ನ ಮಗಳಲ್ಲ."

ದೃಢದೇಹಿ ಕಾರ್ತೀಕನ ಕಾಲುಗಳಿಗೆ ಕುಸಿದ.

## ೧೦

ಸೆಲುಲಾಯ್ಡ್ ಬೊಂಬೆಯಂತಹ ಬಾಲಕಿ ಕೊಳವೆಯ ಮೇಲೆ ಅಂಗಾತ ಮಲಗಿ ನಿಧಾನವಾಗಿ ತಲೆ ಹಿಂದಕ್ಕೆ ಸರಿಸಿ ಬಿಗಿ ಕೊಳವೆಯಲ್ಲಿ ಹಾವಿನಂತೆ ದೇಹ ಹೊರಳಿಸಿದ ಮುಖವಡಿಯಾಗಿ ಹೊರಬಂದಳು.

ಬಲವಾದ ಕರತಾಡನಕ್ಕೆ ಕಿವಿ ಮುಚ್ಚಿದಳು ಸೌಭಾಗ್ಯ. ಸಾಹಸ ಪ್ರದರ್ಶನದ ಮೇಲೆ ನಿಸ್ಸಾರ ನೋಟ ಹೂಡಿದವಳ ಭುಜ ತಟ್ಟಿದ ಕಮಲಹಾಸ ಪಕ್ಕದ ದೃಶ್ಯಕ್ಕೆ ಬೆರಳು ಮಾಡಿದ.

ಕಪ್ಪು ಉಡುಪಿನವರು ಉರಿಯುತ್ತಿದ್ದ ಕಬ್ಬಿಣದ ಬಳೆಗಳ, ಭರ್ಜಿಗಳ ನಡುವೆ ಮೀನಿನಂತೆ ತೂರಿ ಹೋಗುತ್ತಿದ್ದರು. ಸಂಗೀತ ವಾದ್ಯಗಳ ಶಬ್ದ ಏರಿತ್ತು.

ನರ ಕೆರಳಿಸುವ ಪ್ರದರ್ಶನಗಳ ಪರಿಸರದಲ್ಲಿ ನಿಂತಿದ್ದರೂ ಅವಳ ತಲೆಯಲ್ಲಿ ಹೊತ್ತುವ, ಆರುವ ದೀಪಗಳ ಆಟ. ಬದುಕಿನಲ್ಲಿ ಸರ್ಕಸ್ ಪಾತ್ರ ಮಹತ್ತರ. ಎಪ್ಪತ್ತು ದಿನಗಳ ಹಿಂದೆ ಕಾರ್ತೀಕನ ಪರಿಚಯವಾದ ತಾಣ ಕುಶಾಲನಗರದ ಮೂರನೆ ದರ್ಜೆಯ ಟೆಂಟ್! ನೂರಾರು ರಂಧ್ರಗಳ ಚಾವಣಿಯಿಂದ ಮಳೆ ನೀರು ತೊಟ್ಟಿಕ್ಕಿಸಿ, ಕತ್ತಲು, ಬೆಳಕಿನ ಕಣ್ಣುಮುಚ್ಚಾಲೆ ನಡೆಸಿದ ಹಳೆಯ ಕ್ಯಾನ್ವಾಸ್ ಡೇರೆ.

ಇಂದು ವೀಕ್ಷಿಸುತ್ತಿರುವುದು ಜನತಾ ಮೇಳದ ಶೃಂಗಾರಮಯ ಮಳಿಗೆಗಳ ನಡುವಿನ ಮನರಂಜನೆಗಳ ಸರಮಾಲೆ. ನಿಮಿಷದ ಬಿಡುವು ಕೊಡದಂತೆ ಪ್ರೇಕ್ಷಕರನ್ನು ರಂಜಿಸುತ್ತಿರುವ ಸಾಹಸ ಪ್ರದರ್ಶನಗಳು, ನೃತ್ಯಗಳು, ಬುದ್ಧಿಶಕ್ತಿ ಪರೀಕ್ಷಿಸುವ ಕ್ರೀಡೆಗಳು. ಮೇಳಕ್ಕೆ ಅವಳನ್ನು ಕರೆ ತಂದಿದ್ದ ಮೀನಾಕ್ಷಿ ಮೃತ್ಯುಕೂಪದಲ್ಲಿ ಜೋಡಿ ಮೋಟಾರ್ ಸೈಕಲ್‌ಗಳು ಅಸಾಧಾರಣ ವೇಗದಲ್ಲಿ ಮೇಲೆ ಕೆಳಗೆ ಸರಿದಾಡುತ್ತಿದ್ದವು.

"ಇವೆಲ್ಲಾ ಮಾಮೂಲು ಸರ್ಕಸ್ ಕೆಲಸಗಳು."

ಎಂದು ಮೀನಾಕ್ಷಿ ಕೈಚೀಲ ತಿರುಗಿಸಿ ಅವರಿಬ್ಬರನ್ನೂ ಮುಂದಕ್ಕೆ ಕರೆದೊಯ್ದಳು.

"ಮೀನಾಕ್ಷಿ, ನೀನು ಗಮನಿಸಲಿಲ್ಲ. ಕಣ್ಣು ಮುಚ್ಚಿ ಪ್ರದರ್ಶನ ನೋಡ್ತಾ ಇದ್ಲು ಸೌಭಾಗ್ಯ."

ಕೆಣಕುವಂತೆ ವರದಿ ಕೊಟ್ಟು ಕಬ್ಬಿನ ಹಾಲಿನ ಲೋಟ ನೀಡಿದ ಕಮಲಹಾಸ. ನಾಚಿದ ಬಾಲೆ ನಾಲಿಗೆ ಕಚ್ಚಿದಳು.

"ಮಗೂಗೆ ಮೇಳ ಇಷ್ಟವಾಗಲಿಲ್ಲಾಂತ ಕಾಣತ್ತೆ. ನನಗೂ ಹಾಗೇ. ಒಂದು ದೊಡ್ಡ ಬೊಂಬೆ ಷೊ ತರಹ ಇದೆ. ಒಂದು ಕಡೆ ಅಗ್ಗದ ಕ್ಲಬ್ ಡ್ಯಾನ್ಸ್ ಮತ್ತೊಂದು ಕಡೆ ಟೇಪ್, ರಿಬ್ಬನ್‌ಗಳ ಸ್ಟಾಲ್. ಅದು ಬಿಟ್ರೆ ಕಬ್ಬಿನ ಹಾಲು, ಐಸ್ ಕ್ಯಾಂಡಿ, ಬಟಾಣಿ, ಪುಟಾಣಿಗಳ ಅಂಗಡಿ ಸಾಲು."

ಸೌಭಾಗ್ಯ ತನ್ನಿಂದ ಅವರಿಗೆ ಬೇಸರ ಆದೀತೆಂದು ಇಲ್ಲದ ಹುರುಪಿನಿಂದ ನಗೆ ಮುಖ ಅಲುಗಿಸಿದಳು.

"ಕುಶಾಲನಗರದ ಸರ್ಕಸ್ ನೆನಪಿಗೆ ಬಂದಿತ್ತು. ಅಲ್ಲೇ ನನಗೆ ಕಾರ್ತೀಕನ ಪರಿಚಯ ಆಗಿದ್ದು."

"ಅದ್ಭುತ!"

ಅರಿತ ಸಂಗತಿಯಾದರೂ ಅಚ್ಚರಿಯಿಂದ ಕಣ್ಣೇರಿಸಿದ ಕಮಲಹಾಸ, ಕೊಟ್ಟಿದ್ದು ನಾನು. ಸಂಗೀತ ಕಲಿಯೋದಿಕ್ಕೆ ಬಂದೋಳಿಗೆ ಪ್ರೇಮದ ಟ್ಯೂಷನ್!"

ಮೀನಾಕ್ಷಿ ಕಿಲಕಿಲ ನಕ್ಕು ಅವಳ ಜಡೆ ಜಗ್ಗಿದಳು.

ಸೌಭಾಗ್ಯಳಿಗೆ ಮೈಗೂಡುತ್ತಿದ್ದ ಹುರುಪು ಬತ್ತಿತು.

ಪ್ರೇಮದ ಪಾಠ! ಬತ್ತಲೆ ವಿನ್ಯಾಸದ ಚಿತ್ರಗಳು. ಅಂಗಗಳನ್ನು ನವಿರಾಗಿ ಒತ್ತುವ ಅವಳ ಕಾಮ ಪ್ರಚೋದಕ ಪ್ರವೃತ್ತಿ.. ಸುಧಾಕರನಿಗೆ ಪೇರೇಪಿಸಿ ಕೊಟ್ಟ ಮಾತುಗಳು.

ಬಹುಶಃ ಕಾರ್ತೀಕನನ್ನು ದೂರವಾಗಿಸುವ ಸಂಚು!

ಕಾರ್ತೀಕನ ಮಿದುಳಿಗೆ ಮಂಪರು ಕವಿದಿದೆ. ಲೇಖಕನಿಗೆ ಚಿತ್ತ ಚಾಂಚಲ್ಯ? ಬಿಡುಗಡೆಯ ಶಬ್ದ ಉಚ್ಚರಿಸಿ ತನ್ನ ನರಗಳು ಕುಸಿಯುವಂತೆ ಮಾಡಿ ತಲೆಗೆಡಿಸಿದ. ಪಪ್ಪ ಬರಲು ಅದೇ ಕಾರಣವಾಯ್ತು. ಅವನಿಗೂ 'ಬಿಡುಗಡೆ' ಪದ ಎದೆ ಬಿರಿಯುವಂತೆ ನಗಾರಿ ಬಾರಿಸಿದೆ.

ಈಗ ಕಾರ್ತೀಕನ ಕಂಠ ಸೀಳಿದೆ. ಬಿಡುಗಡೆಯ ಅಗತ್ಯವೇನೆಂದು ಅವನ ಪ್ರಶ್ನೆ. ತಾನು ಅವನ ಮಡದಿಯೆಂದು ಹಾರ್ದಿಕವಾಗಿ ಭಾವಿಸಿರುವನಂತೆ. ಆದರೂ ಸಮಾಜಕ್ಕೆ ಪತಿ, ಪತ್ನಿ ಸಂಬಂಧ ತಿಳಿಯುವುದು ಬೇಡವಂತೆ! ಅವನಿಗೆ ಎಲ್ಲಿಂದ ಹತ್ತಿ ಬಂತು ಹಣದ ಆಸೆ?

ಶರ್ಮಿಳಾಗೆ ಬರೆದ ಪತ್ರ ತನ್ನ ವಿಶ್ವಾಸಗಳಿಸುವ ಹುನ್ನರು ಪತ್ರವನ್ನು ತಾನೇ ಅಂಚೆಗೆ ಹಾಕಿದ. ಅವನ ನಿರ್ಧಾರ ಸ್ಫುಟವಾಗಿ ನಿರೂಪಿಸಿರುವ ಮೊಟಕು ಪದಗಳ ಒಕ್ಕಣೆ.

ಶರ್ಮಿಳಾ,

..... ನಿನ್ನ ಮರಳು ಉಪ್ಪರಿಗೆ ಇನ್ನಷ್ಟು ಏರದಿರಲೆಂದು ಬರೆದ ಅಂತಿಮ ಪತ್ರ ಇದು. ನನ್ನ ಮಗಳ ವಯಸ್ಸಿನ ಹೆಂಡತಿ ಯಾವತ್ತಿಗೂ ಹೆಂಡತಿಯೇ. ಪತಿ, ಪತ್ನಿಯರ ಮಧ್ಯೆ ಅಸಮತೆ ಹುಡುಕಿ ಲಾಭ ಪಡೆಯುವ ವ್ಯರ್ಥ ಶ್ರಮ ನಿನಗೇಕೆ? ಇತ್ತೀಚೆಗೆ ನನಗೆ ಹಣದ ಅಗತ್ಯ ಅಧಿಕವಾಗಿರುವುದು ನಿಜ. ಆದರೂ ನಿನ್ನ ಧನಗೂರಿನ ಇಡೀ ಆಸ್ತಿಯೂ ಅದನ್ನು ತುಂಬಲಾರದು. ನನ್ನ ಸಾಕು ಹುಡುಗಿಗೆ ನನ್ನ ಹೆಂಡತಿಯ ಮೇಲೆ ಕೃತಜ್ಞತೆಯ ಅಭಿಮಾನ. ನೀನು ಹಠವಾದಿಯಾಗಿ, ಆ ಸಾಕು ಹುಡುಗಿ ನಿನಗೆ ಚೂರಿ ಹಾಕುವ ಭೀಕರ ಪ್ರಸಂಗ ಸಂಭವಿಸುವುದು ಬೇಡ. ಕೋಲು ಹಿಡಿದು ನಡೆಯುತ್ತಿರುವ ನಿನ್ನ ಪತಿ ಬೇಗ ನಡೆಯುವಂತಾಗಲು ನಿನ್ನ ಸೇವೆಯ ಅಗತ್ಯ ಬಹಳವಿದೆ. ಅದರಲ್ಲೇ ನಿನ್ನ ಹಿತವಿದೆ.

ಇಂತು

ಕಾರ್ತೀಕ.

ಸ್ಫೂರ್ತಿಗೆಟ್ಟ ಬರಹಗಾರನ ಸಾಧಕತನ? ಕಾರ್ತೀಕನ 'ಸಾಕು ಹುಡುಗಿ'! ಶರ್ಮಿಳಾಗೆ ತಾನು ಕಾರ್ತೀಕನ ಹೆಂಡತಿ ಎಂಬುದು ತಿಳಿಯುವುದೇ ಬೇಡ. ಅಂತೆಯೇ ಮೀನಾಕ್ಷಿಗೂ....

ಹದಿನೈದು ಅಡಿ ಎತ್ತರದ ಅಟ್ಟಣೆಯ ಮೇಲೆ ಅರೆ ನಗ್ನ ಹೆಣ್ಣಿನ ನರ್ತನ ನಡೆದಿತ್ತು. ಪ್ರೇಕ್ಷಕರ ಕೇಕೆ. ಸಿಳ್ಳು ಗಗನಕ್ಕೆ ಏರಿತ್ತು.

ಕಮಲಹಾಸ ಮೀನಾಕ್ಷಿಗೆ ಹೇಳುತ್ತಿದ್ದ.

"ನಿನ್ನ ಮಾತು ಒಂದೊಂದು ಸಾರಿ ಬಲು ಬೇಸರ ತರುತ್ತೆ. ಅದೇನೊ ಹೇಳ್ದೆ ನೋಡು, ಆ ಹುಡುಗಿ ಮುಖದಲ್ಲಿ ಬಣ್ಣ ಹೋಯ್ತು."

"ತಪ್ಪಾಯ್ತು. ನನ್ನಲ್ಲಿ ಡಜನ್ ಬಗೆಯ ಬಣ್ಣ ಇವೆ. ಹಚ್ಚಿಬಿಡೋಣ.... ನಾನು ಶಿಕ್ಷೆಗೆ ಸಿದ್ಧ."

ಹುಡುಗಾಟಿಕೆ ತಪ್ಪಿರಲಿಲ್ಲ.

"ಏನು ಶಿಕ್ಷೆ ಅನುಭವಿಸ್ತೀಯ?"

"ಆ ಜಯಂಟ್ ವೀಲ್‌ನಲ್ಲಿ ಹುಡುಗಿ ಜತೆ ಕೊತ್ಕೊಳ್ತೀನಿ."

ಬೃಹದಾಕಾರದಲ್ಲಿ ಹನ್ನೆರಡು ತೊಟ್ಟಿಲುಗಳ ಜನ ತುಂಬಿಕೊಂಡು ಸುತ್ತುತ್ತಿದ್ದ ರಕ್ಕಸ ಚಕ್ರ ನೋಡಿ ಸೌಭಾಗ್ಯಳ ಎದೆ ಕುಸಿಯಿತು.

"ಅಯ್ಯಮ್ಮ...."

ಎಂದು ಬೆದರಿ ಬಾಯಿಗೆ ಕೈ ಹಚ್ಚಿದಳು. 'ಒಲ್ಲೆ' ಎನ್ನಲಾಗದ ಪರಿಸ್ಥಿತಿ. ಟಿಕೆಟ್

ಕೊಳ್ಳಲು ಕಮಲಹಾಸ ಇಪ್ಪತ್ತರ ನೋಟು ಹಿಡಿದು ಜನರ ಮಧ್ಯೆ ಸರಿದ.

"ನನ್ನಲ್ಲಿ ಚಿಲ್ಲರೆ ಇದೆ"

ಅವನ ಹಿಂದೆ ತೂರಿ ಹೋದಳು ಮೀನಾಕ್ಷಿ.

ಹಣೆ ಒರೆಸಿದಳು. ಸೌಭಾಗ್ಯ, ಕರವಸ್ತ್ರ ಹಣೆಯ ಮೇಲೇ ನಿಂತಿತು...

ಮಫ್ಲರ್ ಸುತ್ತಿದ ಗಡ್ಡ, ಮೀಸೆಗಳ ಮುಖ!

ಮೂರು ದಿನಗಳ ಹಿಂದೆ ತನಗೆ ಏನೊಂದೂ ಸೂಚನೆ ಕೊಡದೆ, ಮಹಡಿಯಿಂದ ಜಿಗಿದು ಹೋದ ತಂದೆ!

"ಇಲ್ಲಿಂದ ಹೋಗ್ಬಿಡು... ಅಪಾಯ...."

ಅಕ್ಕಪಕ್ಕದಲ್ಲಿದ್ದವರಿಗೆ ಕೇಳಿಸದಂತೆ ಆತುರಾತುರದಲ್ಲಿ ಪಿಸುಗು ಸೂಚನೆ ಕೊಟ್ಟ ಬರ್ನಾರ್ಡ್

"ಅಪಾಯ!....ಎಲ್ಲಿ?"

ದಿಕ್ಕೆಟ್ಟು ಹಿಂತಿರುಗಿದಾಗ ಮೀನಾಕ್ಷಿ ಕಾಣಿಸಿದಳು. ಬರ್ನಾರ್ಡ್ ಕಣ್ಮರೆಯಾದ. ಅವಳ ಅಸ್ತವ್ಯಸ್ತ ಸ್ಥಿತಿ ಗ್ರಹಿಸಿದ. ಮೀನಾಕ್ಷಿ ಆತುರದಲ್ಲಿ ಕೇಳಿದಳು.

"ಮೈ ಸರಿ ಇಲ್ಲವೆ?"

"ಸರಿ ಇದೆ... ಮತ್ತೆ ಯಾವುದೊ ಕೆಟ್ಟ ನೆನಪು."

ಅವಳ ಮುಖದ ಸಮೀಪ ಮುಖ ತಂದು ವಿನೋದದಲ್ಲಿ ಛೇಡಿಸಿದಳು.

"ಕೆಟ್ಟ ನೆನಪಿಗೆ ಸಾವು ಬರಲಿ ಅಂತ ಇಲ್ಲಿಗೆ ಬರೋದು. ಸಂತೆಯಲ್ಲಿ ನಿದ್ರೆ ಮಾಡೊ ಹಾಗಿರ್ಬೇಕು. ತಲೆ, ಮನಸ್ಸು. ನಿನಗೆ ಬುದ್ಧಿ ಯಾವಾಗ ಬರುತ್ತೊ?"

ರಾಗ ಎಳೆದು ಅವಳ ಕೈ ಹಿಡಿದು ಜನರನ್ನು ತಳ್ಳಿ ರಕ್ಕಸ ಚಕ್ರದ ಮುಂದೆ ನಿಂತಳು. ಕಮಲಹಾಸ ಮೊದಲು ಏರಿ ಯಾರೊಂದಿಗೂ ಕುಳಿತ. ಹಿಂದಿನ ತೊಟ್ಟಿಲಿನಲ್ಲಿ ಸೌಭಾಗ್ಯ ಮೀನಾಕ್ಷಿಯ ಕೈ ಹಿಡಿದು ಕುಳಿತಳು. ಚಕ್ರ ಹಿಮ್ಮುಖವಾಗಿ ಮೆಲ್ಲನೆ ಏರಿತು.

ಗಗನದಲ್ಲಿ ಸಹಸ್ರಾರು ಅಡಿಗಳ ಮೇಲೆ ತೂಗಾಡಿದಂತೆ ಉಸಿರು ಬಿಗಿಸುವ ಅಪೂರ್ವ ಅನುಭವ. ನಗರವೇ ಮೇಲಕ್ಕೆ ಏಳುವಂತೆ ಕಂಡಿತು.

"ನಾನು ಕಾಣೋದಿಕ್ಕೆಲ್ಲಾ ನಾನೇ ರಾಣಿ..."

ಕೆಳಗಿನ ಪ್ರಪಂಚಕ್ಕೆ ಕೈ ಆಡಿಸುತ್ತಾ ರಾಗ ಎತ್ತಿದಳು ಮೀನಾಕ್ಷಿ.

ಚಕ್ರ ತುಟ್ಟ ತುದಿಮುಟ್ಟಿ ಎರಡು ಕ್ಷಣ ನಿಂತಾಗ ಸೌಭಾಗ್ಯಳಿಗೆ ಕಿರಿಚುವಂತೆ ಆಯಿತು. ಆಧಾರವಿಲ್ಲದ ಅಂತರಿಕ್ಷದಲ್ಲಿ ನಿಲುಗಡೆ! ಹೃದಯದ ಬಡಿತ ಮರೆತಿತು.

ಚಕ್ರ ಮುಂದಕ್ಕೆ ನಿಧಾನವಾಗಿ ಇಳಿಯುವಾಗ ಮುಗ್ಗರಿಸುವಂತೆ ಉಮ್ಮಳ.

ಹಿಡಿದ ಅಡ್ಡ ಕಂಬಿ ಕಟಕಟಕ ಆಡಿತು. ಮುಂದಕ್ಕೆ ಚಿಮ್ಮಿದರೆ ಸಾವು ನಿಶ್ಚಯ. ತಾನು ಸೃಜಿಸಿದ ಸಮಸ್ಯೆಗಳಿಗೆಲ್ಲ ದಿಢೀರ್ ಪರಿಹಾರ.

ಯೋಚನೆ, ಆತಂಕ ಹರಿದು ಹೋಗುವಂತೆ, ಕಣ್ಣುಗಳಿಗೆ ರಾಚುವಂತೆ ತಳದ ಗುಂಪಿನ ಗರ್ಭದಿಂದ ಮೇಲಕ್ಕೆ ನಿರುಕಿಸುವ ಮಫ್ಲರ್ ಹೊದಿಕೆಯ ರೋಮಭರಿತ ಮುಖ ಕಾಣಿಸಿತು!

"ಬರ್ನಾರ್ಡ್........"

ನೀಳ ಉದ್ಗಾರ ಪಕ್ಕದವಳಿಗೆ ಚೆನ್ನಾಗಿ ಕೇಳಿತು.

"ಎಲ್ಲಿ ನಿನ್ನ ತಂದೆ ಬರ್ನಾರ್ಡ್?"

ವಾಚಾಳಿ ಮೈಯೆಲ್ಲ ಕಣ್ಣು ಮಾಡಿ ತಳ ಭಾಗಕ್ಕೆ ದೃಷ್ಟಿ ಹರಡಿದಳು.

"ಅಲ್ಲಿ, ಅಲ್ಲಿ... ಬಲಕ್ಕೆ..."

ನಡುಗುವ ಬೆರಳು ಚಾಚಿತು.

"ಎಲ್ಲಿ?"

ನಾಗರ ಕಣ್ಣು ಚಕಚಕ ಅಳೆಯಿತು. ಮಫ್ಲರ್ ತಲೆ ಮಾಯವಾಗಿತ್ತು. ಬೇಸರದಲ್ಲಿ ಹೂಂಕರಿಸಿದಳು.

"ಪಪ್ಪ! ಬರ್ನಾರ್ಡ್! ಯಾಕೆ ನಿನಗೆ ತಂದೆಯ ದುಃಸ್ವಪ್ನ ಅಂಟಿಬಿಡ್ತು. ಮಹಡಿಯಿಂದ ಹಾರಿ ಹೋದೋನು ಗವಾಕ್ಷಿಯಲ್ಲಿ ಕಂಡಿರಬೇಕು. ...ತಂದೆಗೆ ಯಾಕೆ ಮಗಳ ಸಂಗಡ ಈ ತರಹ ತರಲೆ ಚಕ್ಕಂದ?" ತಿರಸ್ಕಾರದಲ್ಲಿ ಕೇಳಿದಳು.

ಅಭಿಮಾನಭಂಗಿತಳಿಗೆ ತಂದೆಯ ಪಕ್ಷ ವಹಿಸುವುದು ಶ್ರಮವಾಯಿತು.

"ಅವನಿಗೆ ಸಂಕೋಚ, ತಾನು ಟ್ರಕ್ ಡ್ರೈವರ್ ಅಂತ."

"ಪ್ರಪಂಚದಲ್ಲಿ ಬೇರೆ ಟ್ರಕ್ ಡ್ರೈವರ್‌ಗಳೇ ಇಲ್ಲವೆ? ಡ್ರೈವರ್ ಆದ್ರೆ ಮನುಷ್ಯ ಅಲ್ಲ ಅಂತಲೆ?.... ಸಂಕೋಚ ಅಲ್ಲ. ಅವನಿಗೆ ನನ್ನ ನೋಡೋದು ಬೇಡ ಅಥವಾ ನಾನು ಅವನ್ನ ನೋಡೋದು ಬೇಡ. ಯಾವುದೊ ಹೇಳಲಿಕ್ಕಾಗದ ಭಾರಿ ರಹಸ್ಯ!"

ಗಂಭೀರ ಮಾತು ಅವಳ ಸೊಲ್ಲಡಗಿಸಿತು. ರಕ್ಕಸ ಚಕ್ರ ಚೊರಗುಟ್ಟಿ ನೆಲ ಸೇರಿತ್ತು.

ಸೀರೆಯ ಸ್ಟಾಲ್‌ನಲ್ಲಿ ಕಮಲಹಾಸ ಕಂದು ದಾರದ ಹೂವಿನ ಚಿತ್ರ ಬಿಡಿಸಿದ ಬಾದಾಮಿ ರಂಗಿನ ಸೀರೆ ಆರಿಸಿದ.

"ಆಯ್ಕೆ ಸರಿಯಾಗಿದೆ ಎಂದು ಮೀನಾಕ್ಷಿ ಸೀರೆಯನ್ನು ಅವಳ ಭುಜದ

ಮೇಲೆ ಹರವಿ ಹೊಂದಾಣಿಕೆ ನೋಡಿದಳು.

"ನನಗೆ ಬೇಡ...." ಹಾವು ಹೊತ್ತವಳಂತೆ ಬೆದರಿದಳು ಬಾಲೆ.

"ಬೇಡ ಅನ್ನೊ ಹಾಗಿಲ್ಲ ಯಾವುದಕ್ಕೂ, ನಿಮ್ಮತ್ತೆ ಇವತ್ತು ಪೂರ್ತಿ ನಿನ್ನ ನಮ್ಮ ವಶಕ್ಕೆ ಕೊಟ್ಟಿರೋದು ಮರಿಬೇಡ. ನಾವು ಹೇಳಿದ ಹಾಗೆ ಕೇಳ್ಬೇಕು."

ಪ್ರೀತಿಪೂರ್ವಕವಾಗಿ ನುಡಿದ ಕಮಲಹಾಸ. ಮೀನಾಕ್ಷಿಯ ನಸುಗೋಪದ ಮಾತೂ ಕೂಡಿತು.

"ಬಡಪೆಟ್ಟಿಗೆ 'ಹುಂ' ಅನ್ನದ ಸ್ವರ್ಣಮ್ಮನ ಪರ್ಮಿಟ್ ಸಿಕ್ಕಿರೋವಾಗ ನಿನ್ನ 'ಉಹುಂ'ಗೆ ಸೊಪ್ಪು ಹಾಕೋದಿಲ್ಲ."

ಟ್ಯಾಕ್ಸಿ ವಸಂತನಗರದ ಮನೆ ಸೇರಿದಾಗ ಸೌಭಾಗ್ಯಳಿಗೆ ಸಂಕೋಚ, ನಾಚಿಕೆ... ಅರ್ಥವಾಗದ ಹಂಗಿನ ಕಟ್ಟುಪಾಡು.

ಮೀನಾಕ್ಷಿ ಅವಳ ಕೆನ್ನೆ ಸವರಿದಳು.

"ನಮಗೆ ಇವತ್ತು ಬಹಳ ಖುಷಿ ಆಗಿದೆ, ಸೌಭಾಗ್ಯ. ಅಣ್ಣಿನಿಗೆ ಪೇಪರ್ ವ್ಯವಹಾರದಲ್ಲಿ ಲಾಭ ಬಂದಿದೆ. ನಿಮ್ಮತ್ತೆ ಎದುರಿಗೆ ಒಪ್ಪಿರೊ ಹಾಗೆ ರಾತ್ರಿ ಇಲ್ಲೇ ಉಳೀಬೇಕು. ಇಲ್ಲ ಅಂತೀಯ?"

"ಇಲ್ಲ"

"ಇಲ್ಲ ಅಂದ್ರೆ ಇರೋದಿಲ್ಲ ಅಂತಲೆ?"

"ಉಹುಂ, ಇರ್ತೀನಿ"

ಗಾಬರಿಯ ಹೇಳಿಕೆಗೆ ಅವರೊಂದಿಗೆ ತಾನೂ ನಕ್ಕಳು.

ಹಿತವಾದ ಊಟ ಸಿದ್ಧವಾಗಿತ್ತು. ಅವಳ ಸಂಕೋಚವನ್ನು ಲೆಕ್ಕಿಸದೆ ತನ್ನ ಇಚ್ಛೆ ಬಂದಂತೆ ಬಡಿಸಿದಳು ಮೀನಾಕ್ಷಿ. ಊಟ ಮುಗಿಸುತ್ತಲೇ ಫ್ರಿಜ್‌ನಿಂದ ಹೊಳಪಿನ ಗಾಜಿನ ಗೋಲಿ ಗುಚ್ಛದಂತಹ ದ್ರಾಕ್ಷಿ ಬಂತು.

"ಇದು ನಿಮಗೆ ಬಹಳ ಇಷ್ಟ ಅಂತ ಕಾಣತ್ತೆ."

ಸಂಕೋಚ ಒತ್ತಟ್ಟು ಮಾಡಿ ಮಾತಿನ ಪಾಲು ತುಂಬಿಸಿದಳು.

"ನಮ್ಮೂರಿನ ಅನಾಬ್ ಷಾಹಿ ದ್ರಾಕ್ಷಿ. ಇಲ್ಲಿಯದರ ಹಾಗಲ್ಲ, ಪ್ಲೇನ್‌ನಲ್ಲಿ ಬರುತ್ತೆ. ನೀನೂ ನಾಳೆ ಬೆಳೆಯೋದು ಇದು."

ಅರ್ಥಕ್ಕೆ ಮುಟ್ಟದ ಮಾತನ್ನು ತಲೆಗೆ ಹಚ್ಚಿಕೊಳ್ಳಲಿಲ್ಲ. ಕಮಲಹಾಸ ಆಲ್ಬಮ್ ತಂದ. ಅವಳಿಗೆ ಅದರಲ್ಲಿ ನೋಡಿದ್ದ ಚಿತ್ರಗಳು ಅಸ್ಪಷ್ಟವಾಗಿ ಸ್ಮೃತಿ ಫಲಕದ ಮೇಲೆ ಹರಿದುಬಂದವು. ಬೆಗಂಚೆರ್ಲಾದ ಪರಿವಾರ, ದೃಶ್ಯಗಳು. ತನಿಖೆಯ ಪ್ರಶ್ನಾವಳಿ ಮತ್ತೆ ಪ್ರಾರಂಭವಾಗುವುದೆಂಬ ಬೇಸರ, ಹೆದರಿಕೆ.

ಸಿಳ್ಳು ರಾಗ ನಿಲ್ಲಿಸಿ ಕುತೂಹಲ ಪ್ರದರ್ಶಿಸುವಂತೆ ಮೆದು ಸ್ವರದಲ್ಲಿ ಕೇಳಿದ.

"ಸೌಭಾಗ್ಯ, ಹನ್ನೊಂದು ವರ್ಷದ ಹಿಂದೆ ನೀನು ಹೇಗಿದ್ದೆ ಅಂತ ನೋಡ್ಬೇಕ?"

ಕತ್ತಲಿನಲ್ಲಿ ನಿಂತ ಅನುಭವ, ಹನ್ನೊಂದು ವರ್ಷದ ಹಿಂದಿನ ತನ್ನ ಫೋಟೋ ಇಲ್ಲಿ? ಹೊಸ ಸಮಸ್ಯೆಯ ಸೃಷ್ಟಿ!

"ಹಾಂ! ತುಂಬಾ ಆಸೆ ಆಗತ್ತೆ."

ಆಸೆ ನೂರು ಬಾಹುಗಳು ಬೀಸಿ ಕರೆ ನೀಡಿತು. ಆಲ್ಬಮ್ ತೆರೆದು ತೋರಿದ.

ಧರ್ಮಾವರದ ಜರಿ ಅಂಚಿನ ಕೆಂಪು ಲಂಗ. ಫ್ರಾಕ್ ಧರಿಸಿದ ಐದು ವರ್ಷಗಳ ಪುಟ್ಟ ಬಾಲೆಯ ಬಣ್ಣದ ಫೋಟೋ. ಆಕರ್ಷಕ ನಸುಗಪ್ಪು, ಮುಖ ಕಣ್ಣು ಸೆಳೆಯುವ ತುಂಬುಗೂದಲು.

"ಇದು ನನ್ನ ಫೋಟೋನೆ?... ಎಲ್ಲಿತ್ತು?"

ನಾಲಗೆ ತುಟಿ ಸವರಿತು, ಕುತೂಹಲ ಚಿಮ್ಮಿತು ಕಣ್ಣು, ಮೀನಾಕ್ಷಿ ಉತ್ತರಕ್ಕೆ ಅವನ ಕಡೆ ತಿರುಗಿದಳು. ನಗೆ ಮಿಂಚಿಸಿದ.

"ಹಾರಂಗಿಯಿಂದ ಯಾರೊ ಕಳಿಸಿಕೊಟ್ರು..."

"ಉಹುಂ ನಮ್ಮ ಮನೇಲಿ ಇದನ್ನ ಯಾವತ್ತೂ ನೋಡ್ಲಿಲ್ಲ."

ಮ್ಲಾನ ಮುಖ ಸಂಶಯ ಹರಿದಾಡಿತು.

"ಹಾರಂಗಿಯಿಂದ ಅಂತ ಸುಳ್ಳು ಹೇಳ್ದೆ. ಇದು ನಮ್ಮ ಸಂಬಂಧಿ ಪದ್ಮಾವತಿ ಅನ್ನೋಳ ಫೋಟೋ. ನೋಡೋದಿಕ್ಕೆ ನಿನ್ನ ಹಾಗೇ ಕಾಣ್ತಾಳೆ.

ಭುಜ ಏರಿಸಿ ತುಟಿ ಉಬ್ಬಿಸಿ ಅವಳನ್ನು ಯೋಚನೆ, ಸಂಶಯದಲ್ಲಿ ಉಳಿಸಿದ.

ಹೊರಗೆ ಗೇಟಿನ ಸದ್ದಾಯಿತು. ಕಮಲಹಾಸ ಅತ್ತ ನೋಡಿ ಬಂದ.

"ಯಾರದು?" ಮೀನಾಕ್ಷಿ ನಿರ್ಲಕ್ಷ್ಯದಲ್ಲಿ ಕೇಳಿದಳು.

"ಯಾರೂ ಕಾಣ್ಲಿಲ್ಲ."

ಏನೊ ಮರೆತವಳಂತೆ ಮೀನಾಕ್ಷಿ ಹಣೆ ಚಚ್ಚಿದಳು.

"ಸೌಭಾಗ್ಯಳಿಗೆ ಮೇಳದಲ್ಲಿ ಒಂದು ಬಣ್ಣದ ಛತ್ರಿ ಕೊಡಿಸಬೇಕಾಗಿತ್ತು. ಮರೆತುಹೋಯ್ತು."

"ಅಷ್ಟೆ ತಾನೆ? ನಾಳೆ ಡಜನ್ ಛತ್ರಿ ಕೊಡಿಸು.. ಸೌಭಾಗ್ಯ. ನಿನ್ನ ಸಂಗಡ ಬಹಳ ಮಾತಾಡಬೇಕೂಂತ ಮೀನಾಕ್ಷಿಗೆ. ನೀನು ಬೇಸರ ಪಟ್ಟುಕೊಳ್ಳುತ್ತೀಯ ಅಂತ ಹೆದರಿಕೆ."

"ಹಾಗೇನಿಲ್ಲ" ಹಿಂಜರಿಯುತ್ತ ಸಮ್ಮತಿಸಿದಳು.

ಬಹಳ ಮಾತು? ಮೈಯಲ್ಲಿ ಮೆಲ್ಲನೆ ಚಳಿ ಹುಟ್ಟಿತು. ಮೀನಾಕ್ಷಿ ಗಂಭೀರ ನಗೆ ಮುಖದಲ್ಲಿ ಕೇಳಿದಳು.

"ಮಣ್ಣಿನ ದೋಣಿ ಕಾದಂಬರಿ ಪುಟಗಳು ಬೆಳೆದವೇನು?"

ಹಿತವಾದ ಪ್ರಶ್ನೆ ಅದು. ಉತ್ತರ ನಿರಾತಂಕವಾಗಿ ಬಂತು.

"ಅದು ಶರ್ಮಿಳಾ ಪ್ರಸಂಗದಲ್ಲಿ ನಿಂತಿದೆ. ಮುಂದಕ್ಕೆ ಕಥೆ ಓಟ ಹೇಗೇಂತ ಬಹುಶಃ ಕಾರ್ತೀಕನಿಗೇ ಗೊತ್ತಿಲ್ಲ."

"ಕಾರ್ತೀಕನಿಗೆ ನಾನು ಕಥೆ ಮುಂದುವರಿಸಿಕೊಡ್ತೀನಿ. ಕಥಾನಾಯಕ ತನ್ನ ಹಿಂದಿನ ಭಗ್ನ ಪ್ರೇಮದ ಗುಂಗಿನಲ್ಲಿ. ಬವಣೆಯಲ್ಲಿ ಮನೆಯ ಸಾಕು ಹುಡುಗೀನ ಮರೆತುಬಿಟ್ಟ. ಆಗ ಆ ಹುಡುಗಿಯ ಹಿರಿಯ ಸ್ನೇಹಿತೆ ಅವಳ ಚಿಂತೆ ಹಚ್ಚಿಕೊಳ್ಳ ಬೇಕಾಯ್ತು...."

"ನನ್ನ ಚಿಂತೆ ನಿಮಗೆ ಬೇಡ, ಮೀನಾಕ್ಷಿ."

ಕಳಕಳಿಯಿಂದ ನುಡಿದಳು.

"ಚಿಂತೆ ಅಲ್ಲವಾದರೆ ಹಿತ ಕೋರೋದಾದ್ರೂ ಉಂಟಲ್ಲ...ಕಾರ್ತೀಕ ಸಂಯಮಿ, ಸ್ಥಿತಪ್ರಜ್ಞ, ನಲವತ್ತು ದಾಟಿದರೂ ಮದುವೆಯ ಪ್ರಶ್ನೆ ದೂರ ಸರಿಸಿದ್ದಾನೆ. ಆದರೆ ಬೇರೆಯೋರ ಮನೋಭಾವ, ದೇಹ ಧರ್ಮ ಅದೇ ಇರೋದಿಕ್ಕೆ ಹೇಗೆ ಸಾಧ್ಯ?"

ಸೌಭಾಗ್ಯ ಚಕಿತಗೊಂಡಿದ್ದಳು. ಮೀನಾಕ್ಷಿ ಇಷ್ಟೊಂದು ಶುದ್ಧ, ಗಂಭೀರ ಪದಗಳ ಪ್ರಯೋಗ ಮಾಡುತ್ತಿರುವುದು ಇಂದೇ ಮೊದಲು.

"ನೀವು ಏನು ಹೇಳೋದಿಕ್ಕೆ ಹೊರಟಿದೀರಿ?

ತಡೆಯದೆ ಕೇಳಿದಳು.

"ಸೌಭಾಗ್ಯ, ನಿನ್ನ ಹಿತೈಷಿಯಾಗಿ ನೇರವಾಗಿ ಹೇಳೊ ಮಾತಿದು.. ಆಗಬೇಕಾದ ವಯಸ್ಸಿನಲ್ಲಿ ಮದುವೆ ಆದರೆ ಚೆಂದ. ಈಗ ನನ್ನ. ನಮ್ಮಣ್ಣನ್ನ ನೋಡು. ಯಾವ ಕಾರಣಕ್ಕೊ ಮದುವೆ ಪ್ರಶ್ನೆ ದೂರ ಇಟ್ಟು ಹೀಗಿದೀವಿ. ಮೇಲೆ ನೋಡೋದಿಕ್ಕೆ ನಮ್ಮಂಥ ಸುಖಿಗಳಿಲ್ಲ. ಆದರೆ ಮಾನಸಿಕವಾಗಿ ನಮ್ಮ ಬದುಕು ಸ್ವಾರಸ್ಯ ಕಳಕೊಂಡುಬಿಡ್ತು... ಚಿಕ್ಕವಯಸ್ಸಿನಲ್ಲಿ ಮದುವೆಯಾದ್ರೆ ಚೆಂದ ಅಂತ ಹೇಳ್ತಾರೆ... ನಿನಗೆ ಜಾಗ್ರತೆ ಮದುವೆ ಮಾಡಿಸೊದಿಕ್ಕೆ ಕಾರ್ತೀಕನಿಗೆ ಹೇಳೋಣವೆ?"

ಕಣ್ಣುಗಳ ಮುಂದೆ ಕತ್ತಲು ಪರದೆ ಹರಡಿತು. ಗರ ಬಡಿದು ಕುಳಿತಳು ಸೌಭಾಗ್ಯ. ಕಮಲಹಾಸ ತನ್ನ ಮಾತಿಗೆ ಪುಷ್ಟಿ ನೀಡಿದ.

"ಹೌದು, ಮಗು. ನಿನ್ನ ಮದುವೆಯಿಂದ ಸಂತೋಷಪಡೋಷ್ಟು ಆತ್ಮೀಯತೆಯಂತೆ ಬೆಳೆದಿದೆ ನಮಗೆ. ಸುಧಾಕರ ಸಾಮಾನ್ಯ ಮನೆತನದ ಹುಡುಗ. ಆದ್ರೂ ನಿನಗೆ

ಸರಿಯಾದ ಜೋಡಿ ಅಂತ ಭಾವಿಸ್ತೀವಿ..."

ಬವಳಿ ಬಂದವಳಂತೆ ಮುಚ್ಚಿದ ಕಣ್ಣುಗಳಿಗೆ ಕೈ ಹಚ್ಚಿದಳು.

"ಸೌಭಾಗ್ಯ..........!" ಆತಂಕಪೂರ್ವಕವಾಗಿ ಅವಳನ್ನು ಅಲುಗಿಸಿದ.

"ಹಾಂ!" ಬೆಚ್ಚಿ ಕಣ್ತೆರೆದಳು.

"ಏನಾಗ್ತಾ ಇದೆ?"

"ಸ್ವಲ್ಪ ಗಾಳಿಗೆ ಹೋಗೋಣ ಅನ್ನಿಸುತ್ತೆ."

"ಆಯಾಸದಲ್ಲಿ ಉಸುರಿದಳು. ಮೀನಾಕ್ಷಿ ಅವಳ ಮುಖದ ಬೆವರು ಒರೆಸಿದಳು.

"ಸಿನಿಮಾಗೆ ಹೋಗೋಣವೆ?"

"ಹುಂ"

ಆವರಣ ಬದಲಿಸಲು ಹಾತೊರೆದಳು.

ಒಂಬತ್ತರ ಹೊತ್ತಿಗೆ ಟ್ಯಾಕ್ಸಿ ಬಂತು. ಹತ್ತು ನಿಮಿಷದ ಹರಿದಾಟ ಮುಗಿದಾಗ ಇಂಗ್ಲಿಷ್ ಚಿತ್ರದ ದೊಡ್ಡ ಫಲಕ ಕಾಣಿಸಿತು.

"ನೀವು ಬೇರೆ ಭಾಷೆ ಚಿತ್ರ ನೋಡೋದಿಲ್ಲವೆ?"

ಸೌಭಾಗ್ಯ ಮೈ ಹತ್ತುತ್ತಿದ್ದ ನಿದ್ರೆ ತಡೆದು ಇಲ್ಲದ ಹುರುಪು ತೋರಿದಳು. ಅವರಿಗೆ ಬೇಸರವಾಗದಿರಲೆಂದು ತನ್ನ ದೀರ್ಘ ಮೌನ ಮುರಿಯಲು ನಿಮಿತ್ತದ ಪ್ರಶ್ನೆ ಇದು.

"ಇಲ್ಲ ಮೊದಲಿಂದ ಇದೇ ರೂಢಿ. ಬೇರೆ ಭಾಷೆ ಚಿತ್ರಗಳಲ್ಲಿ ಏನು ಇರುತ್ತೆ? ಕೂತರೆ ಒಂದು ಹಾಡು, ಎದ್ದರೆ ಒಂದು ಹಾಡು. ಬರೀ ಗೋಳು.. ಇದರಲ್ಲಾದ್ರೆ ಲವ್! ಲವ್!"

ಅಭಿಪ್ರಾಯಕ್ಕೆ ಅಡ್ಡಿ ಇಲ್ಲವೆಂದು ಮೆಲ್ಲನೆ ಚಿವುಟಿದಳು.

ಮೀನಾಕ್ಷಿ ತುಂಬು ಮಾತಿನಲ್ಲಿ ನುಡಿದಂತೆ ಅದು ಪೂರ್ಣ ಪ್ರಣಯ ಚಿತ್ರ. ಅಪ್ಪುಗೆ, ಚುಂಬನಗಳಿಗೆ ಲೆಕ್ಕವಿಲ್ಲ. ಮಲಗುವ ಕೋಣೆಯ ಉದ್ರೇಕಕಾರಕ ದೃಶ್ಯ.

ಚಿತ್ರ ನಾಯಕನ ಮೇಲೆ ಕಾರ್ತೀಕನನ್ನು ಹೊಂದಿಸಿ ನೋಡುತ್ತಿದ್ದಳು ಸೌಭಾಗ್ಯ. ಗಂಭೀರ ತರಹದ, ಅರ್ಥವಾಗದ ಮನೋ ವಿಕಾರಗಳು. ಗೆರೆಮೂಡಿದ ಕೆನ್ನೆಯ ಕಾರ್ತೀಕನನ್ನು ಸರಿಸಿ ನಿಲ್ಲಿಸುವಂತೆ ಹರೆಯದ ನಾಯಕ ಚುರುಕಿನ ಅಭಿನಯ ತೋರುತ್ತಿದ್ದ. ಮಧ್ಯೆ ಸುಳಿಯುವ ತುಂಟ ಕಣ್ಣುಗಳ ಸುಧಾಕರ!

ದ್ರೋಹ! ಅಲ್ಲ. ಇದು ದೃಷ್ಟಿ ದೋಷ. ಇದನ್ನು ತಟ್ಟಿಸಿದವರು ಮೀನಾಕ್ಷಿ. ಕಮಲಹಾಸ.

ಉಸಿರಾಟ ತೀವ್ರಗೊಂಡು ಬೆವರಿದಳು. ಬೆಚ್ಚಿ ಎಡ, ಬಲ ನೋಡಿದಳು. ಚಿತ್ರದಲ್ಲಿ ಮಗ್ನವಾದ ಪ್ರೇಕ್ಷಕರ ಸಾಲುಗಳು.

ಮನೆಗೆ ಹಿಂತಿರುಗಿದಾಗ ಮಾನಸಿಕ ದಣಿವು ಏರಿತ್ತು. ನಿದ್ರೆಯ ಬಲವತ್ತರ ಸೆಳೆತ.

"ಸೌಭಾಗ್ಯಂಗೆ ನಿದ್ರೆ ಬರ್ತಿದೆ. ಮಾತು ನಾಳೆ ಆಡು."

ಕಿಚನ್ ಕಡೆಗೆ ಹೋಗುತ್ತಿದ್ದ ಮೀನಾಕ್ಷಿಗೆ ಸೂಚನೆ ಕೊಟ್ಟು ಕಮಲಹಾಸ ಉಡುಪು ಬದಲಿಸಲು ಕೋಣೆ ಸೇರಿದ.

ಇಂಗ್ಲಿಷ್ ಚಿತ್ರದ ಗುಂಗಿನಲ್ಲಿದ್ದ ಸೌಭಾಗ್ಯ ಹೊರಬಂದು ಪೋರ್ಟಿಕೊ ಗೂಮ್ಮಟ್ಟಿಲ ಮೇಲೆ ನಿಂತು ಮೈ ಮುರಿದು ಸಣ್ಣ ಆಕಳಿಕೆ ಹಾಕಿದಳು. ಎಡಕ್ಕೆ ಹೊರಳಿದ ದೃಷ್ಟಿ ಹಾಗೆಯೇ ಸ್ಥಗಿತಗೊಂಡಿತು!

ಕಾಂಪೌಂಡ್ ಮೇಲೆ ತಲೆ ಕಾಣಿಸುವಷ್ಟು ಮಾತ್ರದ ಮಾಸಲು ನೋಟ ! ತಲೆ ಮತ್ತಷ್ಟು ಏರಿ ರೋಮಮಯ ಮುಖ ಚೆನ್ನಾಗಿ ತೋರಿತು.

"ಸೌಭಾಗ್ಯ..." ಕೈಸನ್ನೆಯೊಂದಿಗೆ ಮೆಲ್ಲನೆಯ ಗೊಗ್ಗರು ಸ್ವರದ ಕರೆ ಬಂತು. ನಿರ್ಭಯದಿಂದ ಅತ್ತ ನಡೆದಳು.

'ಈ ಹೊತ್ನಲ್ಲಿ ಇಲ್ಲಿ ಯಾಕೆ ಬಂದೆ? ಮೇಳದಲ್ಲಿ ಮಿಂಚಿನ ಹಾಗೆ ಕಾಣಿಸ್ಕೊಂಡು ಹೋದೆ... ಒಳಗೆ ಬಾ, ಪಪ್ಪ."

ಕಾತರದಲ್ಲಿ ವಿನಂತಿಸಿದಳು.

"ಯಾವ ಹೊತ್ನಲ್ಲೂ ನೀನು ಮನೇಲಿ ಇರೋದಿಲ್ಲ. ಚಕ್ರದ ಕಾಲಿನೊಳಗೆ ಎಷ್ಟೊಂದು ಸ್ನೇಹಿತರು.. ಈ ಮನೆಗೆ ಯಾಕೆ ಬಂದೆ?"

ಗಸಗಸನೆ ಧ್ವನಿಸಿತು. ಬಿರುಸು ಕಂಠ.

"ಇವರು ನನಗೆ ಬಹಳ ಬೇಕಾದೋರು. ಅತ್ತೆಯೇ ಕಳಿಸಿಕೊಟ್ರು.....

"ಎಲ್ಲಾ ನೋಡ್ದೆ. ಮೇಳದಲ್ಲಿ ಸೀರೆ ಕೊಡಿಸಿದ್ರು. ಅವರಿಗೆ ನೀನು ನೂರು ಸೀರೆ ಕೊಡಿಸೊ ಶಕ್ತಿ ಬಂದಿದೆ. ಇಂಥ ಹತ್ತು ಮನೆ ಖರೀದಿ ಮಾಡೊ ಅಧಿಕಾರ ಇದೆ... ನಿನಗೆ ಎಚ್ಚರಿಕೆ ಕೊಡೋದಿಕ್ಕೆ ಮೂರು ಸಾರಿ ಪ್ರಯತ್ನ ಮಾಡ್ದೆ. ಆಗ್ಲಿಲ್ಲ. ಅಪಾಯದ ಜೋಡಿ ಇದು."

"ಮೀನಾಕ್ಷಿ, ಕಮಲಹಾಸ ಅಪಾಯಕಾರಿಗಳೆ?"

"ಪ್ರಶ್ನೆ ಹಾಕ್ಬೇಡ, ಹೇಳಿದಷ್ಟು ಕೇಳು."

"ಐದು ವರ್ಷದೊಳಾಗಿದ್ದಾಗ ತೆಗೆದ ನನ್ನ ಫೋಟೋ ಇವರಲ್ಲಿದೆ."

ಫಕ್ಕನೆ ಹೊಳೆದ ನೆನಪಿನಿಂದ ಮಾತಿನ ಗಡಿ ಕೆಡಿಸಿದಳು.

"ಹುಟ್ಟಿದಾಗಿನಿಂದ ಸಾಕಿದೋನ ಮಾತು ಹಾರ್ಸಿ ಏನೇನೊ ಒದುರ್ತಾ ಇದ್ದಿ... ಮೊದಲು ಗೋಡೆ ದಾಟಿ ಬಾ!"

"ಎಲ್ಲಿಗೆ?"

"ಥೇ, ಎಲ್ಲಿಯ ಪ್ರಾರಬ್ಧದ ಮಗಳು! ಅಪಾಯ ಕಾದಿದೆ ಅಂದ್ರೆ ಅರ್ಥ ಆಗಲ್ವೆ?"

ನುಣುಪು ನೆಲದ ಮೇಲಿನ ಪಾದರಕ್ಷೆ ಸಪ್ಪಳ ಕೇಳಿಸಿತು.

""ಕಮಲಹಾಸ ಬಂದ್ರು...."

ಸರಕ್ಕನೆ ಗುಲಾಬಿ ಕಿತ್ತು ವರಾಂಡಕ್ಕೆ ಹೊರಳಿದಳು.

"ರಾತ್ರಿಯಲ್ಲೂ ನಿನಗೆ ರೋಸ್ ಬೇಕೆ? ಇಷ್ಟು ಹೊತ್ತಿನಲ್ಲಿ ಹೊರಗೆ ನಿಲ್ಲಬಾರದು, ಸೌಭಾಗ್ಯ. ನಡಿ ಒಳಗೆ."

ಪ್ರೀತಿಯ ಗದರಿಕೆ ಹಾಕಿದ ಕಮಲಹಾಸ. ಅವಳು ನಡೆದು ಬಂದ ದಿಕ್ಕಿನಲ್ಲಿ ಕಣ್ಣು ಮುಂದು ಮಾಡಿ ನೋಡಿದ. ಕತ್ತಲಲ್ಲಿ ನೀರವತೆಯ ನಿರ್ಜನ ಆವರಣ.

ಗೋಡೆಯ ಮರೆಯಿಂದ ಗಡ್ಡದ ಮುಖ ಮತ್ತೆ ಎದ್ದಿತು. ರಾತ್ರಿಯ ಗೌನ್ ಧರಿಸಿದ ಅಜಾನುಬಾಹು, ಮಗಳಿಗಿಂತಲೂ ಅಧಿಕವಾದ ಆತ್ಮೀಯ ಸೌಭಾಗ್ಯಳ ನಡು ಹಿಡಿದು ಒಳಕ್ಕೆ ನಡೆದುದನ್ನು ನೋಡಿ ತಿರಸ್ಕಾರದಿಂದ ಹೂಂಕರಿಸಿ ಮರೆಯಾಯಿತು.

* * *

ಹಳೆಯ ಕಾರು 'ಗಡಗಡ' ಸದ್ದು ಹಾಕುತ್ತಾ ಹತ್ತು ಗಜ ಸರಿದು ಗರಕ್ಕನೆ ನಿಂತಿತು.

"ನೀವು ಕ್ಲಚ್ ಒತ್ತೋದು ಮರೆತು ಹೀಗೆ ಚಲಾಯಿಸಿದ್ರೆ ಗೇರ್ ಬಾಕ್ಸ್‌ನ ಗುಜರಿಗೆ ಹಾಕ್ಬೇಕಾಗತ್ತೆ. ಕಾರಿನ ಮಾಲೀಕನಿಗೆ ನಾನು ಡ್ರೈವಿಂಗ್ ಕಲಿಸೋದಿಕ್ಕೆ ಒಯ್ತಿದೀನಿ ಅಂತ ಗೊತ್ತಾಗಿದ್ರೆ ಕಾರನ್ನ ನನಗೆ ತೋರಿಸ್ತಲೇ ಇರ್ಲಿಲ್ಲ. ನಾನು ಹೇಳ್ತಾ ಇರೋದು ನಿಮ್ಮ ಗಮನಕ್ಕೇ ಬರ್ತಾ ಇಲ್ಲ."

ಕ್ಲಚ್ ಒತ್ತಿ, ಗೇರ್ ಸರಿಪಡಿಸಿ ಸೋತವನಂತೆ ಸಿಗರೇಟು ಹಚ್ಚಿದ ಸುಧಾಕರ.

"ಕಾರು ಕಲಿಯೋದು ಬೇಡಾಂತ ಅಷ್ಟು ಹೇಳಿದ್ರೂ ಕೇಳ್ಲಿಲ್ಲ ನೀವು. ನಾನು ಕಾರಿನಲ್ಲಿ ಕೂತ್ಕೊಳ್ಳೋದು ಕಲಿತರೆ ಸಾಕು."

ಸೌಭಾಗ್ಯಳ ಚೆಂದದ ನಗುವಿನಿಂದ ಉತ್ತೇಜಿತನಾಗಿ ಸಿಗರೇಟು ಗಾಢವಾಗಿ ಎಳೆದು ಅವಳ ತೋಳು ಮೆಲ್ಲನೆ ತಟ್ಟಿದ.

"ಮೀನಾಕ್ಷಿ ಹೇಳೊ ತರ ನಿಮಗೆ ಕಾಲು ನೆಲದ ಮೇಲಿರೋದಿಲ್ಲ. ತಲೆ

ಭುಜದ ಮೇಲಿರೋದಿಲ್ಲ. ಮನಸ್ಸು ಎಲ್ಲೊ, ನಿಮಗೆ ಯಾಕೆ ಹೀಗೆ. ಮಜವಾಗಿ ಓಡಾಡ್ತಾ, ಸಂಗೀತ ಹಾಡ್ತಾ ಇರೋದು ನೋಡಿ."

"ಯಾರ ಹಂಗೂ ಇಲ್ಲದೆ, ಯಾರು ಲಗಾಮೂ ಇಲ್ಲದೆ?"

ಮುಖದಲ್ಲಿ ಗೆರೆ ತಂದುಕೊಂಡ.

"ಹಂಗು, ಲಗಾಮು ನಿಮಗೆ ಕಿತ್ತು ಹೋಗೋದು ಮುಂದಿನ ಜನ್ಮಕ್ಕೆ. ಕಾರ್ತೀಕನ ಪೋಷಣೆ, ಹಂಗು ಸಾಮಾನ್ಯದ್ದಲ್ಲ. ಸ್ವರ್ಣಮ್ಮ ಹಾಕಿರೋದು ಲಗಾಮಲ್ಲ, ಕಬ್ಬಿಣದ ಸರಪಣಿ,"

ಹೊಗೆಯ ಮೂರು ಉಂಗುರ ಸೃಷ್ಟಿಸಿ, ಚೇಷ್ಟೆಯ ಬಾಲಕನಂತೆ ಹಾರನ್ ಬಾರಿಸಿದ. ಜನತಾ ಮೇಳದಲ್ಲಿ ಮೀನಾಕ್ಷಿ ಕೊಡಿಸಿದ ಬಾದಾಮಿ ರಂಗಿನ ಸೀರೆಯಲ್ಲಿ ಹೊಸ ಚೆಲುವಿನ ನೋಟ ಹೃದಯದಲ್ಲಿ ಬೆರಳಾಡಿಸಿತು.

"ನನ್ನ ಪರಾಧೀನತೆ ಅರ್ಥ ಮಾಡ್ಕೊಂಡಿರೋದಿಕ್ಕೆ ಥ್ಯಾಂಕ್ಸ್.... ಈಚೆಗೆ ಅವರು ನನ್ನ ಮೇಲಿನ ಹಿಡಿತ ಸಡಿಲ ಮಾಡ್ತಿದಾರೆ, ಸುಧಾಕರ. ಅದರಿಂದ ಸಂತೋಷಕ್ಕೆ ಬದಲು ಆತಂಕ ಹೆಚ್ಚಾ ಇದೆ."

ಏಕಾಏಕಿ ಒಳ ಕಣ್ಣುಗಳ ಮುಂದೆ ರಾತ್ರಿಯ ಇಂಗ್ಲಿಷ್ ಚಿತ್ರ ಸರಿದುಬಂತು. ಚಿತ್ರ ನಾಯಕ ಹಾಗೂ ಕಾರ್ತೀಕ ಇಬ್ಬರ ಮಧ್ಯೆ ನುಸುಳಿದ ಸುಧಾಕರ! ಮೀನಾಕ್ಷಿಯ ಉತ್ತೇಜನದಿಂದ ತನ್ನನ್ನು ಹೆಂಡತಿಯಾಗಿ ಹೊಂದಲು ಹಂಬಲಿಸುವ ಕನಸುಗಾರ.

ಲಜ್ಜೆಯಿಂದ ಮುಖ ಕೆಂಪೇರಿತು.

"ಈಚೆಗೆ ಮೀನಾಕ್ಷಿ ನನ್ನ ಮೂಲಕ ನಿಮ್ಮ ತನಿಖೆ ಕೆಲಸ ನಡೆಸೋದು ಕಡಿಮೆ ಮಾಡಿದಾರೆ, ಸೌಭಾಗ್ಯ. ಎಚ್ಚರಿಕೆಯಿಂದ ಇದೀನಿ... ಸರಿ. ಇನ್ನು ಗಾಡಿ ಓಡ್ಸಿ."

ಅವಳ ಬಳೆಗಳ ಮೇಲೆ ಬೆರಳಾಡಿಸಿದ. ಚಾಕಚಕ್ಯತೆಯಿಂದ ವಾಹನ ಸರಿಸಿದಳು. ವೀಲ್ ಅತಿಯಾಗಿ ತಿರುಗಿಸಿದುದರಿಂದ ವೇಗ ಹಿಡಿಯದ ಬಂಡಿ ಗಡಕ್ಕನೆ ಮುಗ್ಗರಿಸುವಂತೆ ನಿಂತಿತು.

"ವೀಲ್ ಆಡಿಸೋದೆ ಒಂದು ದಿನ ಕಲೀಬೇಕು."

ವಾಹನ ಚಲಾಯಿಸುವ ಗೋಜಿಗೆ ಹೋಗದೆ ವೀಲ್ ಮೇಲೆ ಮುಖ ಒತ್ತಿ ಗುನುಗುನು ಹಾಡಿದಳು. ಪಿಯಾನೊ ವಾದಕ ಗಾಜಿನ ಮೇಲೆ ಬೆರಳು ಬಡಿದು ತಾಳ ಕೂಡಿಸಿದ.

"ನಿಮ್ಮ ತಂದೆ ಬಂದಿದ್ರಂತೆ. ಮೀನಾಕ್ಷಿನ ಕಾಣೋದು ತಪ್ಪಿಸಿ ಅಷ್ಟು ಎತ್ತರದಿಂದ ಸಿನಿಮಾ ಹೀರೊ ಹಾಗೆ ಧುಮುಕಿ ಹೋದ್ರು ಅಂತ ಹೇಳಿದ್ರು. ಅದೇನು ಸಮಾಚಾರ?"

ಹಾಡು ನಿಲ್ಲಿಸಿ ಮುಖ ಚಕ್ರಕ್ಕೆ ಒತ್ತಿದಂತೆಯೇ ಉತ್ತರಿಸಿದಳು.

"ಮೀನಾಕ್ಷಿ ಮಾತಿಗೆ ಯಾವತ್ತಿಗೂ ಚಕಾರ ಎತ್ತದೆ ಸುಮ್ಮನೆ 'ಹುಂ' ಅನ್ನಿ. ಅವರಿಗೆ ಆಗ ಬಲು ಸಂತೋಷ... ಮೀನಾಕ್ಷಿ ಯಾವ ದೊಡ್ಡ ಹುಲಿ ಅಂತ ನನ್ನ ಬಲಶಾಲಿ ತಂದೆ ಓಡಿ ಹೋಗ್ಬೇಕು? ಆಕೆ ನಮ್ಮ ಮನೆಗೆ ಬರೋದಿಕ್ಕೆ ಮೊದಲೇ ತಂದೆ ಹೊರಗೆ ಹೋಗಿದ್ರು. ಅವರು ಇನ್ನೂ ಮಹಡಿಯಲ್ಲಿರಬೋದೂಂತ ನಾನು ಕೂಗ್ದೆ. ಸ್ವರ್ಣಮ್ಮನಿಗೂ ಅದು ಗೊತ್ತಿರಲಿಲ್ಲ. ಮೀನಾಕ್ಷಿಗೆ, ಅದೇ ಒಂದು ಅದ್ಭುತ ಕಥೆ! ಎಷ್ಟು ಸಣ್ಣ ವಿಷಯ. ನಿಮಗೂ ಇದು ಹೇಳಿದಾರೆ. ಮೀನಾಕ್ಷಿಗೆ. ಅವರ ಅಣ್ಣನಿಗೆ, ನನ್ನ ತಂದೆ, ತಾಯಿ, ಮನೆ ವಿಷಯದಲ್ಲಿ ಪ್ರಶ್ನೆ ಹಾಕೋದ್ರಲ್ಲಿ ಎರಡೂವರೆ ತಿಂಗಳು ಕಳೆದಿದೆ. ಅದೂ ಸಾಲದು ಅಂತ ನಿಮಗೂ ಆ ಕೆಲಸ ಒಪ್ಸಿದ್ರು."

ಕತ್ತು ಹೊರಳಿಸಿ ಬಾಣದ ನೋಟ ತೂರಿದಳು. ಅವನು ದೃಷ್ಟಿ ಎದುರಿಸಲು ನಾಚಿದ.

"ಮರ್ಯಾದೆ ತೆಗೀಬೇಡಿ. ಈಗ ನಿಮಗೆ ಕಾರು ಕಲಿಸೋದಿಕ್ಕೂ ಅವರೇ ನನಗೆ ಸೂಚನೆ ಕೊಟ್ರು ಅಂತ ತಿಳಿದುಬಿಟ್ಟೀರಿ... ಹುಂ, ಚಲಾಯ್ಸಿ. ಇವತ್ತೇ ಕಲಿಯೋದು ಮುಗೀಬೇಕು. ಈ ಬಂಡಿ ಇನ್ನೊಂದು ದಿನ ನನಗೆ ಸಿಗೋದಿಲ್ಲ."

ಮೈಸೂರು ಹೆದ್ದಾರಿಯಿಂದ ಎಡಕ್ಕೆ ತಿರುಗಿದ ಹಾದಿಯಲ್ಲಿ ಉಳುಮೆ ಭೂಮಿಗಳ ಮಧ್ಯದ ಏರು ತಗ್ಗುಗಳ ಭಾಗದಲ್ಲಿ ಕಾರು ಚಲಿಸುತ್ತಿತ್ತು. ಮಧ್ಯೆ ನೊರಜುಗಲ್ಲು ದಿಬ್ಬಗಳ ಮರೆ.

"ಯೋಚನೆ ಮಾಡಿದ್ರಾ?"

ತುಂಡು ಸಿಗರೇಟು ಹೊರಕ್ಕೆಸೆದು ವೀಲ್‌ಗೆ ಕೈ ಸೇರಿಸಿ ಚಲನೆಯ ಗತಿ ಸರಿಪಡಿಸುತ್ತಾ ಕೇಳಿದ.

ಮೈ ಬಿಸಿ ಆಯಿತು. ಹಿಂದಿನ ರಾತ್ರಿಯ ದಣಿವು ಮತ್ತೆ ತಲೆ ಹಾಕಿತು. ಅವನ ಅಂತಹ ಮಾತಿನ ಪ್ರಾರಂಭಕ್ಕೆ ಬಲು ಹೊತ್ತಿನಿಂದ ತಡೆ ಹಾಕಿದ್ದಳು. ಏನೂ ಅರಿಯದವಳಂತೆ ಮರು ಪ್ರಶ್ನೆ ಹಾಕಿದಳು.

"ಯಾವುದನ್ನ?"

"ನಿಮ್ಮ ನಿರ್ಧಾರಕ್ಕೆ ಕಾಯ್ತೀನಿ ಅಂತ ಹೇಳಿದ್ದೆ."

"ನಿರ್ಧಾರಕ್ಕೆ ಬರೋವರೆಗೆ ತಡ್ಕೊಳ್ಳಿ."

ನಿರಾತಂಕವಾಗಿ ಛೇಡಿಸಿದಳು.

"ನೀವು ಮನಸ್ಸಿನಲ್ಲಿ ಏನೂ ನಿರ್ಧಾರ ಮಾಡಿ ಮುಗಿಸಿದ ಹಾಗೆ ತೋರುತ್ತೆ.... ನನ್ನ ಆಟ ಆಡಿಸ್ತಾ ಇದೀರಿ."

ಅವಳ ತೋಳು ನೇವರಿಸಿದ.

"ಕೈ ತೆಗೀರಿ. ಇದು ಕಾರು ಕಲಿಸೊ ರೀತಿಯೆ?"

ಕೈ ತೆಗೆಯಲಿಲ್ಲ. ಅದನ್ನು ಮೇಲಕ್ಕೆ ಸರಿಸಿ ತಲೆ ಕೂದಲಿನಲ್ಲಿ ಬೆರಳಾಡಿಸಿದ. ಅವಳನ್ನು ಒತ್ತುವಂತೆ ಸರಿದು ಸಮೃದ್ಧ ಕೇಶ ರಾಶಿಯನ್ನು ಎದೆಗೊತ್ತಿಕೊಂಡು ತುಟಿ ಒತ್ತಿದ. ಮತ್ತೊಂದು ಕೈ ಅವಳನ್ನು ಬಳಸಿತು.

ಯಂತ್ರ 'ಕಟಕ್' ಸದ್ದು ಮಾಡಿತು. ವಾಹನ ನಿಂತಿತು. ಅವನನ್ನು ಕೊಡವಿ ಬೇರ್ಪಡಿಸಿದಳು.

"ನೀವು ಹೀಗೆ ಉದ್ರೇಕಕ್ಕೆ ಒಳಗಾಗಿ ನನ್ನ ಮನಸ್ಸಿನಲ್ಲಿ ಗೊಂದಲ ಎಬ್ಬಿಸಬೇಡಿ ಅಂತ ಎಷ್ಟೋ ಸಾರಿ ಹೇಳಿದೀನಿ... ನಿಮಗೆ ಸಂಯಮ ಇಲ್ಲವಾದ್ರೆ ನಿಮಗೆ ನನ್ನ ಸ್ನೇಹ ಉಳಿಯೋದಿಲ್ಲ."

"ಇಂಥಾ ವಿಷಯದಲ್ಲಿ ಸಂಯಮ ಉಳಿಯೋದು ಕಷ್ಟ."

ಕುಹಕ ಸ್ವರದಿಂದ ಅಪ್ರತಿಭಳಾದ ಹೆಣ್ಣು ಕ್ಷಣದಲ್ಲಿ ಸಾವರಿಸಿಕೊಂಡು ನಿಮಿರಿ ಕುಳಿತಳು.

"ಹಾಗಾದ್ರೆ ನಮ್ಮಿಬ್ಬರ ಸ್ನೇಹ ಇವತ್ತಿಗೇ, ಇಲ್ಲಿಗೇ ಮುಕ್ತಾಯವಾಯ್ತೂಂತ ವಿಷಾದಪಡ್ತೀನಿ. ಸುಧಾಕರ, ನಾನು ಇವತ್ತು ಕಾರು ಕಲಿಯೋಕೆ ಬರ್ಲಿಲ್ಲ. ನನ್ನ ನಿರ್ಧಾರ ತಿಳಿಸೋದಿಕ್ಕೆ ನಿಮ್ಮ ಜೊತೆ ಒಪ್ಕೊಂಡು ಬಂದಿದ್ದು...."

ರೋಸಿದವಳ ಕ್ರುದ್ಧ ಮಾತು ನಿಂತಿತು. ಹಿಂದಿನಿಂದ ಟ್ರಕ್ ಗಟ್ಟಿಯಾಗಿ ಹಾರನ್ ಮಾಡುತ್ತಿತ್ತು. ಅಂಥ ಪ್ರಣಯಿ ಬೆಚ್ಚಿ ಹಿಂದಕ್ಕೆ ನೋಡಿ ಬೇಸರದಲ್ಲಿ ಗೊಣಗಿದ.

"ಇಂಥಾ ಜಾಗದಲ್ಲೂ ಟ್ರಕ್ ಓಡಾಟ. ತಥ್, ಸ್ವಲ್ಪ ಕಾರು ಎಡಕ್ಕೆ ತೊಗೊಳ್ಳಿ."

ಕಾರು ಚಲನೆಗೆ ಬಂದು ಎಡ ಅಂಚಿಗೆ ಜರುಗಿತು. ಟ್ರಕ್ ಮುಂದಕ್ಕೆ ಹಾದು ಹೋಗಲಿಲ್ಲ. ಮತ್ತೆ ಹಿನ್ನೋಟ ಹಾಕಿದ ಸುಧಾಕರನ ಮುಖದಲ್ಲಿ ಆತಂಕ ಬಂತು. ನೋಟ ಹಿಡಿದು ನಿಲ್ಲಿಸುವ ಕಟು ಮುಖ!

"ಆ ಡ್ರೈವರ್ ಮುಖದ ಗಡ್ಡ, ಮೀಸೆ ನೋಡಿದ್ರೆ..."

"ಗಡ್ಡ, ಮೀಸೆಯ ಮುಖ ?" ಕಂಗಾಲಳಂತೆ ಕೇಳಿದಳು.

ಅರಿವಿಲ್ಲದೆ ಕಾರು ನಿಂತಿತು. ಸುಧಾಕರ ಹೊರ ಬರುವ ಮೊದಲೇ ಟ್ರಕ್ ಚಾಲಕ ವಿಶಾಲ ಎದೆ ಉಬ್ಬಿಸ್ತಾ ಬುಸುಗುಟ್ಟಿ ನಿಂತಿದ್ದ!

"ಗಾಡಿ ಮುಂದಕ್ಕೆ ತೊಗೊ..."

ಪೊಳ್ಳು ಗದರಿಕೆಯ ಸ್ವರದಲ್ಲಿ ಕೇಳಿದ ಸುಧಾಕರ. ಸೌಭಾಗ್ಯ ಅವನ ಕೈ ಹಿಡಿದಳು.

"ನನ್ನ ತಂದೆ ಬರ್ನಾರ್ಡ್......"

ಅವಳ ಪಿಸು ನುಡಿಯಿಂದ ಯುವಕನಿಗೆ ಜೀವ ಕೂಡಿ ಬಂತು.

"ಮಿಸ್ಟರ್ ಬರ್ನಾರ್ಡ್, ನಿಮ್ಮ ಮಗಳಿಗೆ ಕಾರು ಡ್ರೈವಿಂಗ್ ಕಲಿಸೋದಿಕ್ಕೆ ಕರಕೊಂಡು ಬಂದೆ... ಹಾಗೆ...ನೋಡ್ಬೇಡಿ. ಪ್ಲೀಸ್...ನಾನು ಸೌಭಾಗ್ಯನ್ನ ಶೀಘ್ರದಲ್ಲಿ ಮದುವೆ ಆಗೋನು."

ಸುಧಾಕರ ಏನೆಂದು ಅರಿಯುವ ಮೊದಲೇ ಬರ್ನಾರ್ಡ್ ಮುಂದೆ ನುಗ್ಗಿ ಅವನನ್ನು ಕಾಲಿನಿಂದ ಝಾಡಿಸಿದ. ಯುವಕ ಧೊಪ್ಪನೆ ಚಿಮ್ಮಿ ಬಿದ್ದ.

"ಬೇಡ, ಪಪ್ಪ.... ಬೇಡ" ಅಂಗಲಾಚಿದಳು.

ತಡವರಿಸಿ ಎದ್ದು ನಿಲ್ಲುವುದರಲ್ಲಿ ಮೊಳಕೈನ ಬಲವಾದ ತಾಡನಕ್ಕೆ ಸಿಕ್ಕಿದ. ಪಿಯಾನೊ ವಾದಕ್ಕೆ ಚೆಂಡಿನಂತೆ ತಗ್ಗಿಗೆ ಉರುಳಿ ಹೋದ.

"ಸುಧಾಕರ!.... ಸಾಯ್ತೀಯ.....ಓಡು........ಪಪ್ಪ ಕೋಪ ಬಂದಾಗ ರಾಕ್ಷಸ..."

ಆರ್ತಳಂತೆ ಒಂದೇ ಉಸಿರಿನಲ್ಲಿ ಒದರಿದಳು. ತೂರಾಡಾತ್ತ ಎದ್ದು ದಿಬ್ಬ ಒರಗಿದ ಸುಧಾಕರ ತಲೆ ಒದರಿ ತಗ್ಗಿನಲ್ಲಿ ತಪ್ಪು ಹೆಜ್ಜೆ ಹಾಕುತ್ತಾ ಓಡಿದ.

ಬರ್ನಾರ್ಡ್ ಒರಟಾಗಿ ಮುಖ ಉಜ್ಜಿ ಅಬ್ಬರಿಸಿದ.

"ಅಯೋಗ್ಯ ಆ ಮಾತು ಆಡ್ತಾ ಇದ್ರೆ ಸುಮ್ಮನೆ ಯಾಕೆ ನಿಂತೆ? ನೀನು ಅವನ್ನ ಮದುವೆ ಆಗ್ತೀಯಾ?.........ಕಾರ್ತೀಕನಿಗೆ ದ್ರೋಹ!"

ಮುಸಮುಸ ಉಸಿರಾಡುತ್ತಾ ಮುಂದಕ್ಕೆ ಬಂದ. ಸೌಭಾಗ್ಯ ವಿಕಾರ ತೋರದೆ ಸ್ಥಿರವಾಗಿ ನಿಂತಳು.

"ಕಾರ್ತೀಕನಿಗೆ ದ್ರೋಹ ಬಗೆಯಲಿಲ್ಲ ನಾನು. ಅವನು ಸುಧಾಕರ, ಮೀನಾಕ್ಷಿಯ ಸ್ನೇಹಿತೆ. ಅವನ ವಿಷಯಾನೂ ಕಾಗದದಲ್ಲಿ ಬರೆದಿರಲಿಲ್ಲವೆ? ಅವನಿಗೆ ನನ್ನ ಮೇಲೆ ಆಸೆ, ಕನಸು, ಕಲ್ಪನೆ ಇದ್ರೆ ನನ್ನ ತಪ್ಪೇನಿದೆ?.... ಅವನಿಗೆ ನಾನು ಒಪ್ಪಿಗೆ ಕೊಟ್ಟಿಲ್ಲ. ಅವನ ಹುಚ್ಚು ಮಾತಿಗೆ ನೀನು ಯಾಕೆ ಅಷ್ಟೊಂದು ಕೆರಳ್ದೆ? ಬದುಕೆಲ್ಲ ಹೀಗೇ ಹಿಂಸೆಯಲ್ಲಿ ಕಳೆದುಬಿಡ್ತೀಯ?"

ಬುದ್ಧಿ ಚಿಗುರಿದವಳ ಮಾತು ಅಚ್ಚರಿ ತಟ್ಟಸಿದರೂ ಉಗ್ರತೆ ಇಳಿಸಲಿಲ್ಲ.

"ಹಿಂಸೆಯಿಂದ ಈ ರೂಪ, ಜೀವನ ಹೊತ್ಕೊಂಡೋನು ಹಿಂಸೆಯಲ್ಲಿಯೇ ಮುಕ್ತಾಯವಾಗಿಬಿಡ್ತೀನಿ, ಸೌಭಾಗ್ಯ. ಈ ಎರಡೂವರೆ ತಿಂಗಳಲ್ಲಿ ನೀನೆಷ್ಟು ಬದಲಾಯಿಸಿ ಹೋಗಿದೀಯ! ಇದು ಒಳ್ಳೇದಕ್ಕಲ್ಲ. ಕಾರ್ತೀಕನ ಬಿಡುಗಡೆ ಬೆದರಿಕೆಗೂ ನೀನು ಜಗ್ಗಿಲ್ಲ."

"ಬೆದರಿಕೆಗೆಲ್ಲಾ ಜಗ್ತಾ ಇದ್ರೆ ನಾನು ಬರ್ನಾರ್ಡ್‌ನ ಮಗಳಾಗಿ ಏನು ಪ್ರಯೋಜನ?

ನೀನು ದಿಢೀರ್ ಅಂತ ಬಲಾತ್ಕಾರವಾಗಿ ನನಗೆ ಹೊರಿಸಿದ ಹೊಸ ಜೀವನ ಬೇಕಾದಷ್ಟು ಅನುಭವ ಕಲಿಸಿಕೊಡ್ತು."

ಅವಾಕ್ಕಾದ ಕಟು ಮನುಷ್ಯ. ನಡುವಿನಿಂದ ಕೈ ಇಳಿಯಿತು.

"ನೀನು ಇಷ್ಟೊಂದು ಸ್ನೇಹಗಳನ್ನು ಮಾಡ್ಕೊಂಡು ನನ್ನ ಕೋಟಲೆಗೆ ಸಿಕ್ಕಿ ಹಾಕಿಸ್ತೀಯ ಅಂತ ತಿಳಿದಿರಲಿಲ್ಲ."

ಅರ್ಥವಾಗದ ಮಾತಿನಿಂದ ಮತ್ತಷ್ಟು ನಮ್ರಳಾದಳು.

"ನನ್ನಿಂದ ಕೋಟಲೆ ಯಾವುದು? ಈ ಸ್ನೇಹಗಳೆಲ್ಲ ನಾನು ಮಾಡ್ಕೊಳ್ಳಿಲ್ಲ. ಅವೇ ಬಂದು ಕಾಡ್ತಾ ಇವೆ. ಕಾರ್ತೀಕ ನನಗೆ ಅಪ್ಪಣೆ ಮಾಡಿದ್ರು ನಾನು ಅವರ ಹೆಂಡತಿ ಅನ್ನೋದು ಯಾರಿಗೂ ತಿಳಿಬಾರದು ಅಂತ. ನನಗೆ ಹೊತ್ತು ಹೋಗಲಿ ಅಂತ ಸಂಗೀತ ಶಾಲೆಗೆ ಸೇರಿಸಿದ್ರು. ಶಾಲೆಯಲ್ಲಿ ಕೂಡಿಕೊಂಡ ಸ್ನೇಹಿತರು ಇವರು. ಸುಧಾಕರನಿಗೆ ನನ್ನ ಮದುವೆಯಾಗೊ ಹುಚ್ಚು ಕಲ್ಪನೆ. ಮೀನಾಕ್ಷಿಗೆ ನನ್ನ ಪೂರ್ವೋತ್ತರ ತಿಳಿಯೊ ಚಪಲ."

"ಅವಳು ನಿನ್ನ ಶತ್ರು ಅಂತ ಎಚ್ಚರಿಸ್ತಾ ಇದೀನಿ. ಕಮಲಹಾಸ ಗೋಮುಖ ವ್ಯಾಘ್ರ..... ನಿನಗೆ ಹೆಚ್ಚಾಗಿ ಹೇಳದ ಹಾಗೆ ನನ್ನ ಬಾಯಿ ಕಟ್ಟಿ ಹೋಗಿದೆ."

"ಅವರು ಪ್ರೀತಿ ತೋರಿಸ್ತಾರೆ. ಅವರಿಂದ ಅಪಾಯ ಅಂತ ನೀನು ಬೆನ್ನು ಹತ್ತಿ ಎಚ್ಚರಿಸ್ತಾ ಇದೀಯ. ಈಗ ನನಗೆ ಶತ್ರು ಯಾರು, ಹಿತೈಷಿ ಯಾರು ಅಂತ ಪ್ರಮಾಣಿಸಿ ನೋಡೋ ವಿವೇಚನೆಯೇ ಹೋಗ್ಬಿಟ್ಟಿದೆ."

"ಆ ಕಟ್ಟಿಗೆ ದೇಹದ ಹುಂಬ ಕಾರು ಕಲಿಸೊ ನೆಪದಲ್ಲಿ ನಿನ್ನ ಮೇಲೆ ಅತ್ಯಾಚಾರ ನಡೆಸೋದ್ರಲ್ಲಿದ್ದಾಂತ ಭಾವಿಸ್ತೀನಿ."

ತಗ್ಗಿನತ್ತ ದೃಷ್ಟಿ ತೂರಿದ.

"ಅಂಥಾ ಭಯ ಇಲ್ಲ. ಒಂದು ರೀತಿಯಲ್ಲಿ ಹೇಡಿ ಅವನು. ಬಾಯಿ ಕಟ್ಟಿದ ನನ್ನ ಪರಿಸ್ಥಿತಿಯಿಂದ, ಮೀನಾಕ್ಷಿಯ ಪ್ರಚೋದನೆಯಿಂದ ಅವನಿಗೆ ಈ ಧೈರ್ಯ. ನಾನು ಹಿಂಸೆಪಟ್ಕೊಂಡು ಅವನ್ನ ತಪ್ಪಿಸ್ತಾ ಇದೀನಿ. ಕಾರ್ತೀಕದ ಬಿಡುಗಡೆ ಶಬ್ದ ಈ ಸ್ನೇಹದಿಂದಲೇ ಹೊರಟಿದ್ದು... ನನ್ನ ಪರಿಸ್ಥಿತಿ ಅರ್ಥ ಮಾಡ್ಕೊ, ಪಪ್ಪ."

"ಕಾರ್ತೀಕನ ಆ ಹೆಣ್ಣು ಏನಾದ್ಲು?"

"ಶರ್ಮಿಳಾ?........ ಕಾರ್ತೀಕನಿಗೆ ಹಣದ ಆಸೆ ತೋರ್ಸಿ, ಸೋತು ಗಂಡನ ಮನೆಗೆ ಹೋದ್ಲು. ನೀನು ತೋರ್ಸಿರೊ ಆಸೆಗೆ ಕಾರ್ತೀಕ ಸೋತಿದಾರೆ. ಅರ್ಥವಾಗದ ಬರಹಗಾರ!"

ಉಮ್ಮಳಿಸಿ ಬರುವ ಮಾತುಗಳನ್ನು ಆಡಲಾಗದೆ ಪರಿತಪಿಸಿದ. ಮನದಲ್ಲಿ

ಸುಪ್ತವಾಗಿದ್ದು ಸಜೀವ ಸುಡುವ ರಹಸ್ಯ!

"ನನಗೆ ನಂಬಿಕೆ ಬರ್ತಾ ಇಲ್ಲ.... ನೀನು ಅದೇ ಸೌಭಾಗ್ಯಳೇ ಅಂತ ಸಂದೇಹ. ಎಷ್ಟು ಚೆನ್ನಾಗಿ ಮಾತಾಡ್ತೀಯ! ನನಗೆ ಸಂತೋಷ, ಹೆದರಿಕೆ ಒಟ್ಟಾಗಿ ಆಗ್ತಿವೆ."

ಬೇಸರದ ಎಳೆ ಉಳಿದಿತ್ತು.

"ಎಲ್ಲಾ ಕಾರ್ತೀಕನ ಸಂಬಂಧದ ಪ್ರಭಾವ. ಕೊಳಚೆಯಿಂದ ಸ್ವರ್ಗಕ್ಕೆ ಸೇರಿಸಿದ ನಿನ್ನ ಉಪಕಾರ."

ನನ್ನಲ್ಲಿ ವಿಶ್ವಾಸ ಇಲ್ಲ ನಿನಗೆ."

ಮಾತು ಮುಗಿದವ ಸೋತಿದ್ದ.

"ನಿನಗೆ ಭ್ರಮೆ. ಯಾಕೆ ಈ ಸಂಶಯ? ವಿಶ್ವಾಸ ಇದ್ದಿದ್ರಿಂದಲೇ ನಿನಗೆ ತುರ್ತು ಕಾಗದ ಬರೆದಿದ್ದು."

"ನನ್ನ ಜೊತೆಗೆ ಬರೋದಿಕ್ಕೆ ತಯಾರಿದೀಯಾ?"

ನಿರ್ಣಾಯಕ ಕಂಠ ಅದು.

"ಯೋಚನೆ ಮಾಡೋದಿಕ್ಕೆ ಸ್ವಲ್ಪ ಅವಕಾಶ ಕೊಡು."

ಅವನ ಹೃದಯ ಕುಸಿಯಿತು. ಬುದ್ಧಿ ಬೆಳೆದ ಬಾಲೆ!

"ತಂದೆ ಮೇಲೆ ನಿನಗೆ ಕನಿಕರ, ಅಭಿಮಾನ ಇಲ್ಲ."

ತಂದೆ! ಪದ ಪ್ರಯೋಗದಿಂದ ತನ್ನನ್ನೇ ಹಿಂಡಿದ. ರಹಸ್ಯದ ಅರಿವಿಲ್ಲದ, ಮುಗ್ಧೆಯ ತಂದೆ ತಾನಲ್ಲ! ಮಹತ್ತರ ಸಂಗತಿಯನ್ನು ಇವಳಿಗೆ ತಿಳಿಸಿದಂತೆ ಕಾರ್ತೀಕನನ್ನು ತಾನು ಯಾಚಿಸಿರುವೆ.

"ಅಭಿಮಾನ, ವಿಧೇಯತೆ ಎಲ್ಲಾ ಇವೆ. ಮದುವೆಯ ಅರ್ಥವೇ ಗೊತ್ತಿಲ್ಲದ ಕಾಲದಲ್ಲಿ, ತಂದೆ ವಯಸ್ಸಿನ ವ್ಯಕ್ತಿನ ತೋರಿಸಿ ಮದುವೆ ಆಗು ಅಂದಾಗ ಉಸಿರೆತ್ತದೆ ಮದುವೆ ಆಗಿದ್ದೇ ಅದಕ್ಕೆ ಸಾಕ್ಷಿ."

"ನಿನಗೆ ಒಳ್ಳೇದಾಗಲಿ ಅಂತ ಮಾಡಿದ ಅಪರಾಧ ಅದು."

"ನಿನ್ನ ಜೊತೆಗೆ ಎಲ್ಲಿಗೆ ಬೇಕಾದ್ರು ಕಣ್ಣುಮುಚ್ಚಿ ಬರ್ತೀನಿ."

ಹಾರ್ದಿಕ ದೃಢ ಸ್ವರದಲ್ಲಿ ಹೇಳಿದಳು.

ಬರ್ನಾರ್ಡ್ ಅಗಾಧ ಸಂತೋಷದಲ್ಲಿ ಅವಳನ್ನು ಎದೆಗೊತ್ತಿಕೊಂಡು ಮೌನವಾಗಿ ರೋದಿಸಿದ.

* * *

ಬಿರಿದ ನಾಗರ ಕಣ್ಣುಗಳನ್ನು ಪರಿಚಿತ ಕೋಣೆಯಲ್ಲಿ ಸುತ್ತಿಸಿದಳು ಮೀನಾಕ್ಷಿ.

'ಮಣ್ಣಿನ ದೋಣಿ' ಪುಟಗಳಿದ್ದ ತೆರೆದ ಕಪಾಟು, ಅದರಡಿಯ ಬುಲ್ ಬುಲ್ ತರಂಗವಿದ್ದ ಭಾಗ ಎರಡೂ ಖಾಲಿ!

"ಅಂದರೆ ಕಾರ್ತೀಕ ಕನಿಷ್ಠ ಹದಿನೈದು ದಿನಗಳವರೆಗೆ ಬರೋ ಹಾಗಿಲ್ಲ ಅಂತೀರಾ?"

ಮುಖ ಓರೆ ಮಾಡಿ ಮಾತಿಲ್ಲದೆ ಅವಳ ಚರ್ಯೆಗಳನ್ನು ಮಾಸಲು ನಗೆಯಲ್ಲಿ ವೀಕ್ಷಿಸುತ್ತಿದ್ದ ಸ್ವರ್ಣಮ್ಮ ಹೌದೆಂದು ಸೂಚಿಸಿದಳು.

"ಸ್ವರ್ಣಮ್ಮ, ನಾನು ಬಂದಿದ್ದು ಸೌಭಾಗ್ಯನ್ನ ಬೇಗಂಚೆರ್ಲಾಗೆ ಕಳಿಸಿ ಕೊಡಿ ಅಂತ ಕೇಳೋದಿಕ್ಕೆ... ಹಾಗೇ ಅವಳನ್ನ ಸುಧಾಕರನಿಗೆ ಮದುವೆ ಮಾಡಿಸೋದಿಕ್ಕೆ ನಿಮ್ಮ, ಕಾರ್ತೀಕನ ಒಪ್ಪಿಗೆ ಬೇಕಿತ್ತು."

"ಅವಳಿಗೆ ಮದುವೆ ಅಗತ್ಯ ಇಲ್ಲ. ಅವಳೂ ಹೋಗಿದಾಳೆ ಕಾರ್ತೀಕನೊಂದಿಗೆ. ಹೊರಟಿದ್ದು ನಿಮ್ಮ ಬೇಗಂಚೆರ್ಲಾಗೆ."

"ಹಾಂ! ಎಂದು ಬೆರಳು ಕಚ್ಚಿ ನಿಂತ ಚಕಿತಳ ಪ್ರಶ್ನೆಗೆ ಮೊದಲೇ ಸ್ವರ್ಣಮ್ಮ ಕೇಳಿದಳು.

"ಬರ್ನಾರ್ಡ್ ಅವರಿಬ್ಬರನ್ನೂ ಒಯ್ದ ಅಂದ್ರೆ ಇನ್ನಷ್ಟು ಆಶ್ಚರ್ಯವೆ?"

ಕಣ್ಣು ಮುಚ್ಚಿ ಹಣೆಗೆ ಬೆರಳು ತಟ್ಟಿದಳು.

"ನಾನು ವಿಳಂಬ ಮಾಡಿದ್ದು ಅಚಾತುರ್ಯ ಆಯ್ತು. ಬರ್ನಾರ್ಡ್ ಜೊತೆಗೆ ಕಾರ್ತೀಕ, ಸೌಭಾಗ್ಯ. ಇದು ಮೋಜಿನ ಪ್ರವಾಸ ಅಲ್ಲ, ಸ್ವರ್ಣಮ್ಮ... ಸೌಭಾಗ್ಯಳ ಚಿಂತೆ ನಿಮಗೆ ಇರಲಾರದು. ಕಾರ್ತೀಕ ಬದುಕಿ ಹಿಂತಿರುಗೋದು ನನಗೇ ಸಂಶಯ."

ಕಾರ್ತೀಕನಿಗೆ ಅಪಾಯ! ಬರ್ನಾರ್ಡ್‌ನಿಂದ? ಸೌಭಾಗ್ಯಳಿಂದ?

ಸ್ವರ್ಣಮ್ಮ ತಲ್ಲಣಿಸುವಂತೆ ಸಂದಿಗ್ಧದಲ್ಲಿಟ್ಟು ಮೀನಾಕ್ಷಿ ದಡದಡ ಮೆಟ್ಟಿಲು ಇಳಿದು ಹೋದಳು.

## ೧೧

ಸೀಳು ಕಲ್ಲುಗಳ ಹಂದರಗಳ ಮೇಲೆ ಹರಡಿದ ದ್ರಾಕ್ಷಿಬಳ್ಳಿಗಳ ವಿಶಾಲ ಹಸಿರು ಪಂಕ್ತಿಗಳ ಹಾಸು. ಆ ವಲಯ ದಾಟಿ ಬಂದರೆ ಪ್ರವೇಶದ ಕಿರು ರಸ್ತೆ. ಅದರ ಎರಡು ಪಕ್ಕಗಳಿಗೂ ತುಂಬಿ ನಿಂತ ನೀರು. ತೊರೆಯ ಮೇಲಿನ ಚಿಕ್ಕ ಸೇತುವೆ. ಮುಂದಕ್ಕೆ ಎಸ್ಟೇಟ್ ಬಂಗಲೆ ಮನೆ. ಅದಕ್ಕೆ ಅಂಟಿದ ನಕ್ಷತ್ರ ಗುರುತಿನ ಪುಟ್ಟ ವಾಸದ ಮನೆ, ಎಡ ಪಕ್ಕದ ತಗ್ಗಿನಲ್ಲಿ ಸಿಮೆಂಟ್ ಕಾಮಗಾರಿಯ ತೊಟ್ಟಿಗಳು.

ಹೊಂಡಗಳು. ಆಗಸೆ ಮರಗಳ ಗುಂಪು. ಅರ್ಧ ಫರ್ಲಾಂಗ್ ಆಚೆಗೆ ಕಾರ್ಮಿಕರ ಗೂಡು ಮನೆಗಳ ಸಾಲು....

ರಾತ್ರಿಯ ರೈಲು ಮನದಲ್ಲಿ ಕುಟುಕುವ ಶಬ್ದಗಳಿಗೆಲ್ಲ ಹೊಂದಿಕೊಳ್ಳುವ ವಿವಿಧ ಸ್ತರಗಳಲ್ಲಿ ಕತ್ತಲಿನ ನೀರವತೆ ಕಲಕಿ ಧಾವಿಸುತ್ತಿತ್ತು. ಬರ್ನಾರ್ಡ್ ತನ್ನ ಪಕ್ಕದಲ್ಲಿ ಮೌನ ಶ್ರೋತೃವಾಗಿ ಕುಳಿತಿದ್ದ ಕಾರ್ತೀಕನಿಗೆ ಬೇಗಂಚೆರ್ಲಾ ಎಸ್ಟೇಟಿನ ಕಥೆ ಪ್ರಾರಂಭಿಸಿದ್ದ. ಮೇಲಿನ ಬರ್ತ್‌ನಲ್ಲಿ ಮೈ ಮುದುರಿ ಮಲಗಿದ್ದ ಸೌಭಾಗ್ಯಳಿಗೆ ಅರೆ ನಿದ್ರೆ. ಕೆಳಗಿನ ಮಾತು ಕೇಳಿಸದಂತೆ ಕಿವಿ ಕೊರೆವ ರೈಲು ಸದ್ದು.

"ಫಲವತ್ತು ಭೂಮಿ ಅಂದ್ರೆ ಬಂಗಾರದ ಬಟ್ಟಲು. ವರ್ಷವೆಲ್ಲಾ ಬಿಡುವಿಲ್ಲದೆ ನಡೆಯೊ ಸಿಮೆಂಟ್ ಕಾಮಗಾರಿ. ಕಣ್ಣು, ಮನಸ್ಸಿಗೆ ಹಿತಕೊಡೊ ಎಸ್ಟೇಟ್ ಮನೆ. ಇವೆಲ್ಲ ಒಂದೇ ಕಡೆ ಸೇರಿರೊ ಸ್ಥಳಕ್ಕೆ ಕರೆದೊಯ್ತಾ ಇದೀನಿ. ಬರಹಗಾರನಿಗೆ ಅದಕ್ಕಿಂತ ಸೊಗಸಾದ ಲೋಕ ಇನ್ನೊಂದಿಲ್ಲ. ಒಂದೆರಡು ಸಾರಿ ನಾನೂ ಆ ಲೋಕ ನೋಡಿದೀನಿ. ಮಾಲೀಕ ಚಂದ್ರಬಾಬು ಸತ್ತು ಹನ್ನೊಂದು ವರ್ಷ ಆಯ್ತು. ಆತ ಮನುಷ್ಯ ರೂಪದ ದೈವ ಅಂತ ನನ್ನ ಬಂಧು ಸಂತುರಾಮ ಹೇಳ್ತಿದ್ದ..."

"ಸಂತುರಾಮ?" ಕಾರ್ತೀಕ ಮೌನ ಒಡೆದ.

"ಒಡ ಹುಟ್ಟಿದೋನಿಗಿಂತ ಹೆಚ್ಚಾದ ದೂರದ ಸಂಬಂಧಿ. ನನ್ನ ಹಾಗೇ ದೊಡ್ಡ ಶರೀರ. ಅದೇ ಕೋಪ. ಆತುರ...ಸಾಲದೂಂತ ನನ್ನ ಕಸುಬೇ.... ಡ್ರೈವಿಂಗ್! ತೀಡು ಮೀಸೆಯ ಶ್ರೀಮಂತ ಚಂದ್ರಬಾಬು. ಅಗಲ ಕುಂಕುಮದ ಹೆಂಡತಿ ದೇವಕಿ. ಕುಡುಕ, ಕೇಡಿಗೆ ತಮ್ಮ ಶತ್ರುಘ್ನ ಬಾಬು. ನನ್ನ ಬಂಧು ಸಂತುರಾಮ...ಯಾರೂ ಅಲ್ಲಿ ಬದುಕಿಲ್ಲ ಈಗ..."

* * *

ಚಂದ್ರಬಾಬು ತಿದ್ದಿದ ಮೀಸೆಗೆ ಬೆರಳಾಡಿಸಿ ಕೋಟಿನ ಕಾಲರ್ ಎಳೆದು ಕೋಲಿನ ಮೇಲೆ ಎರಡೂ ಕೈಯಿಟ್ಟ. ಬಲ ಪಕ್ಕದಲ್ಲಿ ಕುಳಿತ ದೇವಕಿ ಹಿಂದಕ್ಕೆ ತಿರುಗುತ್ತಲೇ ಹೆಣ್ಣಾಳು ಕಪ್ಪು ಚರ್ಮದ ಕೈಚೀಲ ಅವಳ ಮುಂದೆ ತೆರೆದಳು. ಕೈಗನ್ನಡಿಯಲ್ಲಿ ನೋಡಿಕೊಂಡು ಕುಂಕುಮ, ಮುಂಗುರುಳು ತಿದ್ದುಕೊಂಡಳು ಒಡತಿ.

"ಎಷ್ಟೊತ್ತು!.... ಫೋಟೋ ತೋರಿಸ್ಲೇ ಇಲ್ಲ ಮಾಮ...."

ಮುದ್ದು ಮುನಿಸು ನುಡಿಯಲ್ಲಿ ಕೊರಗಿದಳು ಇಬ್ಬರ ಮಧ್ಯೆ ಕುಳಿತ ಐದು ವರ್ಷದ ಬಾಲೆ ಪದ್ಮಾವತಿ. ಹತ್ತಾರು ನಗೆ ಒಂದಾದಾಗ ಎಡ ಬಲ ಮೊಲದಂತೆ ದಿಟ್ಟಿಸಿದಳು.

"ತೋರಿಸ್ತೀನಿ, ಪದ್ದು. ಒಂದೇ ನಿಮಿಷ."

ಎಂದು ಕಮಲಹಾಸ ಅವಳ ಸಮೃದ್ಧ ತಲೆಗೂದಲು ಸರಿಪಡಿಸಿ ಹೊಸದಾಗಿ ತಂದಿದ್ದ ವಿದೇಶ ಕ್ಯಾಮರ ಕಣ್ಣಿಗೆ ಹಚ್ಚಿದ.

"ಕೊಂಚ ತಾಳ್ರಿ, ಕಮಲಬಾಬು."

ಡ್ರೈವರ್ ಪಿಲ್ಲಿಯನ್ನು ಹಿಡಿದು ಓಡಿ ಬಂದ. ಮತ್ತೆ ಕಿಲಕಿಲ ನಗೆ ತರಂಗ ಎದ್ದಿತು. ಕೆಂಚು ಕೂದಲಿನ, ದಪ್ಪ ಬಾಲದ ಪ್ರೀತಿಯ ಬೆಕ್ಕನ್ನು ತೊಡೆಯ ಮೇಲೆ ಕೂರಿಸಿಕೊಂಡಳು ಪದ್ದು.

ಕಮಲಹಾಸ ಕ್ಲಿಕ್ ಮಾಡುವ ಘಳಿಗೆಯಲ್ಲಿ ಪಿಲ್ಲಿ ಚಿಮ್ಮಿಹೋಯಿತು.

ಚಂದ್ರಬಾಬು ಕನ್ನಡಕ ಹೊಂದಿಸಿ ನೋಡಿದ. ಮೀನಾಕ್ಷಿ ಧಾವಿಸಿ ಬರುತ್ತಿದ್ದಳು. ಹಿಂದೆಯೇ ತೂರಾಡಿ ಬರುತ್ತಿದ್ದ ಶತ್ರುಘ್ನಬಾಬು.

ಚಂದ್ರಬಾಬು ಕ್ಯಾಮರ ಹಿಡಿದವನಿಗೆ ತುಚ್ಛ ನೋಟ ಒಗೆದ.

"ಅಣ್ಣ!.....ಹೇಡಿ ನೀನು"

"ಮಾಮ, ಅವರು ನಿಮ್ಮ ತಮ್ಮ ಅನ್ನೊ ಒಂದೇ ವಿಷಯಕ್ಕೆ ರಕ್ತದ ಕಾವು ತಣ್ಣಗೆ ಮಾಡಬೇಕಾಗಿದೆ."

ಕಮಲಹಾಸ ತಲೆ ತಗ್ಗಿಸಿ ನಿಂತ.

"ನಿಮಗೆಲ್ಲಾ ಮಜ! ಮೋಜು!.... ನನ್ನ ವಿಚಾರಿಸೋ ಮಗ ಒಬ್ಬನೂ ಇಲ್ಲ."

ತಪ್ಪು ಹೆಜ್ಜೆ ಹಾಕುತ್ತಾ ಬಂದ ಶತ್ರುಘ್ನಬಾಬು ದಪ್ಪ ಮೀಸೆ ಒರೆಸುತ್ತಾ ಒದರಿದ. ನಿದ್ರೆ ಕಾಲದ ಹೊರತಾಗಿ ಉಳಿದೆಲ್ಲ ವೇಳೆಯನ್ನು ಕುಡಿತದಿಂದ ತುಂಬಿಸಿ ಮಿದುಳು, ಹೃದಯಕ್ಕೆ ಸದಾ ಗ್ರಹಣ ಹಿಡಿಸಿಕೊಂಡ ಮನುಷ್ಯ ರೂಪದ ಮೃಗ! ಬೇಗಂಚೆರ್ಲಾ ಎಸ್ಟೇಟು ಒಡೆಯನ ನೆಮ್ಮದಿ ಘನತೆ, ಅಲುಗಾಡಿಸುವ ಒಡಹುಟ್ಟಿದ ತಮ್ಮ.

"ಮಜ ಬೇಕಿದ್ರೆ ಮದುವೆ ಆಗು...ವೆಧವ!"

ಚಂದ್ರಬಾಬು ಜಿಗುಪ್ಸೆಯಿಂದ ಅವನ ಕಡೆಗೆ ಕೈಗೋಲು ಆಡಿಸಿ ಹೆಂಡತಿ, ಮಗಳೊಂದಿಗೆ ಕಾರಿನ ಹಿಂದಿನ ಸೀಟಿನಲ್ಲಿ ಕುಳಿತ. ನಿಮಿಷದಲ್ಲಿ ನಾಲ್ಕು ಬಾರಿ ಕೈಗಡಿಯಾರ ನೋಡಿಕೊಂಡ. ನೆಮ್ಮದಿ ಕಳೆದುಕೊಂಡ ತುಟಿ, ಕಣ್ಣು, ಬೆರಳುಗಳಲ್ಲಿ ಕಂಪನ.

"ಸಂತು, ಮುಕ್ಕಾಲು ಗಂಟೆಯೊಳಗೆ ವಕೀಲರ ಆಫೀಸು ಸೇರ್ಬೇಕು. ಪಿತಾಪುರಂ ಕಲ್ಲು ಮನುಷ್ಯ, ಹೈಕೋರ್ಟ್ ಹಾಲ್ ಸೇರಿಬಿಟ್ರೆ ಅವನು ಅಲ್ಲೇ. ನಾವು ಹೊರಗೇ.. ಶೀಘ್ರ...."

ಬೆವರು ಒರೆಸಿದ.

“ನಲವತ್ತು ನಿಮಿಷದೊಳಗೆ ಸೇರಿದರೆ ಆಯ್ತಲ್ಲ, ಬಾಬು.”

ನಲವತ್ತು ಮೈಲಿಗಳ ದೂರದ ಸಣ್ಣ ಘಾಟಿನ, ಡೊಂಕು ರಸ್ತೆಯನ್ನು ನಲವತ್ತು ನಿಮಿಷಗಳ ಅವಧಿಯಲ್ಲಿ ಹರಿಸುವ ಆಶ್ವಾಸನೆಯನ್ನು ನಿರಾತಂಕವಾಗಿ ನೀಡಿದ ಪ್ರಾಮಾಣಿಕ ಚಾಲಕ.

ಘಾಟು ರಸ್ತೆ ಅರ್ಧ ಕಳೆದು ರಾಣಿಗುಡದ ಕಡೆಗೆ ಇಳಿಯತೊಡಗಿದಾಗ ಮುಂದಕ್ಕೆ ಬಾಗಿ ಚಾಲಕನ ಕಿವಿಗೆ ಮುಖ ತಂದು ಮೆಲ್ಲನೆ ಕರೆದ.

“ಸಂತು...”

ಸಂತುರಾಮ ಬ್ರೇಕ್ ಮೇಲೆ ಲಘು ಒತ್ತಡ ಕೊಟ್ಟು ವಾಹನದ ವೇಗ ಮಂದಗೊಳಿಸಿದ.

“ಬಾಬು, ಕಾರು ನಿಲ್ಲಿಸ್ಲೆ?”

“ಬೇಡ...ನನಗೆ ಯಾಕೊ ಇವತ್ತು...”

ಮತ್ತಷ್ಟು ಬೆವರು ಒರೆಸಿದ.

“ಗೊತ್ತಾಯ್ತು, ಬಾಬು. ನಿಮಗೆ ಮನಸ್ಸು ಸರಿ ಇಲ್ಲ. ಚಿಂತೆ ಕಾಡ್ತಿದೆ.”

“ಚಿಂತೆ ನನಗಾಗಿ ಅಲ್ಲ. ಪದ್ದು ಸಲುವಾಗಿ.”

ತನ್ನ ಹಾಗೂ ಹೆಂಡತಿಯ ಮಧ್ಯೆ ಮೊಣಕಾಲೂರಿ ನಿಂತು ಹಿಂದಿನ ಗಾಜಿನಲ್ಲಿ ಸರಿದು ಹೋಗುತ್ತಿದ್ದ ರಸ್ತೆಯತ್ತ ಗಮನಿಸುತ್ತಿದ್ದ ಮಗಳ ತಲೆ ಸವರಿದ.

“ಧಣಿಯ ಉಪ್ಪು ತಿಂದು ಬೆಳೆದ ದೇಹ ಪ್ರಾಣ ಕೊಡಲಿಕ್ಕೆ ಸಿದ್ಧವಾಗಿದೆ. ಹೇಳಿ, ಬಾಬುಗಾರು.”

“ಒಂದು ವಾರದಿಂದ ಏನೊ ಭಯ. ಪ್ರಾಣಕ್ಕೆ ಅಪಾಯ ಕಾದಿದೆ ಅಂತ ಭಾವಿಸ್ತೀನಿ. ಹೆಚ್ಚು ದಿನ ಬದುಕೊ ಭರವಸೆ ಇಲ್ಲ.”

ಪತಿಯ ಚಿಂತೆ ಬಲ್ಲ ದೇವಕಿ ಸೆರಗು ಎಳೆದು ಆತಂಕದ ಮುಖ ಮಾಡಿದಳು. ಭಯ ಮೈಗೂಡಿ ಉಸಿರು ಕಟ್ಟಿದ ಚಾಲಕ.

“ಕೆಟ್ಟ ಮಾತು ಆಡ್ಬೇಡಿ. ನೂರು ವರ್ಷ ಬದುಕಿ, ಬಾಬು. ಪೊಲೀಸ್ ಕಂಪ್ಲೇಂಟ್ ಕೊಡಿ. ಶತ್ರು ಯಾರೂಂತ ಗೊತ್ತಿದ್ರೂ ಯಾಕೆ ಸುಮ್ಮನೆ ಇದೀರಿ. ಶತ್ರುಘ್ನಬಾಬು ನಿಮ್ಮ ತಮ್ಮ ಅಂತ ಜನ ಉಳಿಸಿದಾರೆ. ಬೇರೆಯವ ಆಗಿದ್ರೆ ಆತ ಈ ಲೋಕ ಬಿಟ್ಟು ಎಷ್ಟೋ ದಿನ ಆಗ್ತಿತ್ತು.”

ಮಾತಿಗೆ ಬೆಂಬಲಿಸುವಂತೆ ದೇವಕಿ ಶಾಪದ ಲಟಿಕೆ ಮುರಿದಳು.

“ನಿಜ, ಸಂತು... ಶತ್ರುಘ್ನ ನಮ್ಮ ಶತ್ರು!”

"ಮೀನಾಕ್ಷಿ, ಕಮಲಬಾಬುಗೆ ಒಂದು ಮಾತು ತಿಳಿಸಬೋದಿತ್ತಲ್ಲ. ಬಾಬು."

"ಶ್ರೀಮಂತ ತಿರಸ್ಕಾರದಲ್ಲಿ ಹೂಂಕರಿಸಿದ.

"ಅಣ್ಣ! ತಂಗಿ!... ಪರಾವಲಂಬಿಗಳ ಜೊತೆ... ಇವತ್ತು ವಕೀಲರ ಸಂಗಡ ಮಾತಾಡಿಬಿಡ್ತೀನಿ. ಬದುಕು ಗ್ಯಾರಂಟಿ ಇಲ್ಲ. ಹೆಂಡತಿ, ಮಗಳ ಚಿಂತೆ ಕಾಡ್ತಿದೆ. ನೀನು ಹೇಳೋ ಹಾಗೇ ಶತ್ರುಘ್ನ ಇಷ್ಟು ದೊಡ್ಡ ಸ್ವಯಾರ್ಜಿತ ಆಸ್ತಿನ ನುಂಗೋದಿಕ್ಕೆ ಕಾದಿದಾನೆ. ನಾನು ಉಯಿಲು ಮಾಡಬೇಕೂಂತ ಇದೀನಿ. ನಾನು ಹೋಗಿಬಿಟ್ರೂ ಪದ್ದೂಗೆ ಅನ್ಯಾಯ ಆಗಬಾರದು."

ಶ್ರೀಮಂತ ಧಣಿಯ ದೊಡ್ಡ ಸಂಗಾತಿ! ಮುಂದಿನ ರಸ್ತೆಗೆ ಕಣ್ಣು ಹೂಡಿದ್ದ ಸಂತುರಾಮ ಉತ್ತರ ನೀಡಲಿಲ್ಲ. ತಲೆಯಲ್ಲಿ ಭೀಕರ ಚಿತ್ರಗಳು ಹರಿದಾಡಿದವು.

ನಿಶ್ಶಬ್ದ ರಾತ್ರಿಯಲ್ಲಿ ಧಣಿಯ ಕೊಲೆ. ಕಾರಣವಿಲ್ಲದೆ ದೇವಕಿ ಹಾಗೂ ಪದ್ಮಾವತಿಯ ನಿರ್ದಯ ಹತ್ಯೆ. ಇಡೀ ಆಸ್ತಿಯನ್ನು ಕಬಳಿಸಿದ ಕರ್ಕಶ ನಗೆಯ ಶತ್ರುಘ್ನಬಾಬು.

ವೀಲ್ ಬಲವಾಗಿ ಬತ್ತಿ ಹಲ್ಲು ಮಸೆದ ಸಂತುರಾಮ. ಮಾತು ಬರದು. ಧಣಿ ತಾನು ನಿಶ್ಚಯಿಸಿದ ಉಯಿಲಿನ ಮುಖ್ಯಾಂಶವನ್ನು ಉದ್ರೇಕದಲ್ಲಿ ಹೊರಗೆಡುವುತ್ತಿದ್ದ.

"ದೇವಕಿಗೆ ನಿಭಾಯಿಸೊ ಶಕ್ತಿ ಇದ್ರೂ ಕುತಂತ್ರಕ್ಕೆ ಸೋಲಲೇ ಬೇಕು. ಆಸ್ತಿ ರಕ್ಷಣೆ ಮುಖ್ಯ ಅಲ್ಲ ನನಗೆ... ನನ್ನ ಮಗಳನ್ನ ರಕ್ಷಣೆ ಮಾಡಿ, ಅವಳನ್ನ ಚೆನ್ನಾಗಿ ಸಾಕಿ, ಮದುವೆ ಮಾಡಿದೋನಿಗೆ... ಅವನು ಯಾರೇ ಆಗಿರಲಿ. ಅವನಿಗೆ ಈ ಆಸ್ತಿಯ ಕಾಲು ಭಾಗ ಬಿಡ್ತೀನಿ..."

ದೇವಕಿ ಮೆಲ್ಲನೆ ಕುಸುಕಿ ಅಳುತ್ತಿದ್ದಳು. ಸಂತುರಾಮ ಧಣಿಯ ಮಾತು ಮೆಲುಕುತ್ತಾ ವಾಹನದ ವೇಗ ಹೆಚ್ಚಿಸಿದ. ತಿಳಿಸಿದ ಕಾಲಾವಧಿಗೆ ಮೂರು ನಿಮಿಷಗಳ ಮೊದಲೇ ಸಿಕಂದರಾಬಾದ್ ದಾಟಿ ಹಿಮಾಯತ್ ನಗರದ ವಕೀಲರ ದೊಡ್ಡ ನಿವಾಸದ ಮುಂದೆ ವಾಹನ ನಿಲ್ಲಿಸಿದ.

ಮರುದಿನ ಸಂತುರಾಮ ತನಗೇ ಅರ್ಥವಾಗದ ಕಾತರದಲ್ಲಿ ಪ್ರತಿ ನಿಮಿಷ ಬಂಗಲೆಯ ವಿದ್ಯಮಾನವನ್ನು ದೂರದಿಂದ ಗಮನಿಸುತ್ತಾ ಹರಿದಾಡಿದ. ನಿಮಿಷದ ಬಿಡುವು ಕಾಣದ ಪ್ರಸಿದ್ಧ ವಕೀಲ ಪಿತಾಪುರಂ ದೊಡ್ಡ ವಿದೇಶಿ ಕಾರಿನಲ್ಲಿ ಬೇಗಂಚೆರ್ಲಾಗೆ ಬಂದು ಮೂರು ತಾಸುಗಳಷ್ಟು ದೀರ್ಘವಾಗಿ ಧಣಿಯೊಂದಿಗೆ ಮುಚ್ಚಿದ ಕೋಣೆಯಲ್ಲಿ ಸೇರಿದ. ಚಂದ್ರಬಾಬು ಅವನನ್ನು ಬೀಳ್ಕೊಟ್ಟಾಗ ಸಂತೋಷ, ಉತ್ಸಾಹದಲ್ಲಿದ್ದ.

ಮತ್ತೆರಡು ದಿನಗಳು ಕಳೆದವು. ಚಂದ್ರಬಾಬು ಒಪ್ಪಿಸಿದ ಕೆಲಸವನ್ನು ಮುಗಿಸಿ ಎಸ್ಟೇಟ್ ವ್ಯಾನ್‌ನಲ್ಲಿ ವೆಂಗಪಲ್ಲಿಯಿಂದ ಹಿಂತಿರುಗುತ್ತಿದ್ದ ಸಂತರಾಮ ರಾಣಿಗುಡದಲ್ಲಿ

ಸಿಗರೇಟಿಗಾಗಿ ಇಳಿಯುವ ಹೊತ್ತಿಗೆ ಮಧ್ಯರಾತ್ರಿ ಮೀರಿತ್ತು.

"ಸಂತು, ಈಗ ಬರ್ತಿದಿಯೇನು?.... ಚಂದ್ರಬಾಬು ನಿನ್ನೆ ತೀರಿಹೋಗಿದ್ದು ಗೊತ್ತಿಲ್ಲ ನಿನಗೆ..."

ತಾನೇ ಮೊದಲು ಸುದ್ದಿ ಕೊಡುವ ದುಃಖಮಿಶ್ರಿತ ಉದ್ವೇಗದಲ್ಲಿ ತಿಳಿಸಿದ ಅಂಗಡಿಯವ.

ಬೆಂಕಿ ಕೊರೆದ ಕಡ್ಡಿಯೊಂದಿಗೆ ತುಟಿಯ ಸಿಗರೇಟು ಕೆಳಗೆ ಬಿತ್ತು. ದೇಹದಲ್ಲಿ ಸಹಸ್ರ ಬಳ್ಳಿಗಳಾಗಿ ಹರಿದಾಡಿದ ವಿದ್ಯುತ್ ಅವನನ್ನು ವಿಗ್ರಹವಾಗಿ ನಿಲ್ಲಿಸಿತು.

ಬೇಗಂಚೆರ್ಲಾ ಎಸ್ಟೇಟಿನ ಒಡೆಯ, ಎಪ್ಪತಕ್ಕೂ ಹೆಚ್ಚು ಮಂದಿಯ ಆಶ್ರಯದಾತ ಚಂದ್ರಬಾಬು ಹಿಂದಿನ ಸಂಜೆ ಆರರ ಹೊತ್ತಿನಲ್ಲಿ ಕಾರು ಅಪಘಾತದಲ್ಲಿ ಹೆಂಡತಿಯೊಂದಿಗೆ ಮರಣಿಸಿದ್ದ! ಘಾಟು ರಸ್ತೆಯಲ್ಲಿ ಇಳಿಯುತ್ತಿದ್ದಾಗ ಕಾರಿನ ಬ್ರೇಕ್ ಕೆಲಸ ಮಾಡದೆ, ವಾಹನ ವೇಗದಲ್ಲಿ ಹತೋಟಿಗೆ ಬಾರದೆ ರಸ್ತೆ ಅಂಚಿನ ನೇರಳೆ ಮರಕ್ಕೆ ಘರ್ಷಿಸಿತ್ತು. ಪತಿ, ಪತ್ನಿ ಸ್ಥಳದಲ್ಲಿಯೇ ಮೃತರಾಗಿದ್ದರು.

ಆಘಾತದಿಂದ ಚೇತರಿಸಿಕೊಳ್ಳದ ಸಂತುರಾಮ ರಾಣಿಗುಡದಿಂದ ಘಾಟಿ ರಸ್ತೆ ಏರುವಾಗ ತಾನು ಅಪಘಾತಕ್ಕೆ ಒಳಗಾಗದೆ ಇದ್ದುದು ದೊಡ್ಡ ಸಂಗತಿ. ಆತುರದಲ್ಲಿಯೇ ಹೆಂಡತಿಯಿಂದ ವಿವರ ತಿಳಿದ.

ಅಲ್ಲಲ್ಲಿ ಮಿನುಗುವ ದೂರ ದೂರದ ದೀಪಗಳ ಹೊರತಾಗಿ ಅಪರಾತ್ರಿಯ ಪೂರ್ಣ ಕತ್ತಲಿನಲ್ಲಿ ಮುಳುಗಿತ್ತು ಎಸ್ಟೇಟ್. ಅಂತಿಮ ದರ್ಶನಕ್ಕೆ ದೊರೆಯದ ಒಡೆಯ, ಒಡತಿ ಇಬ್ಬರ ದೇಹಗಳೂ ಬೆಳಗ್ಗೆಯೇ ಸಂಸ್ಕಾರ ಹೊಂದಿದ್ದವು.

ಧಣಿ ಇಲ್ಲ! ಧೂರ್ತ ಶತ್ರುಘ್ನಬಾಬುವಿನ ಅತ್ಯಾಚಾರಕ್ಕೆ ಇನ್ನು ಅಂಕುಶವಿಲ್ಲ. ಮೀನಾಕ್ಷಿ, ಕಮಲಹಾಸರ ಅನುಭವವಿಲ್ಲದ ಕಾರ್ಯಗೇಡಿತನ! ತನಗಾಗಿ ಕಟ್ಟಿಸಿಕೊಟ್ಟ ನಕ್ಷತ್ರ ಗುರುತಿನ ಮನೆಯಿಂದ ತಾನು, ತನ್ನ ಹೆಂಡತಿ ಸರೋಜ ನಿರ್ವಸಿತರಾಗುವುದು ನಿಶ್ಚಯ... ಭವಿಷ್ಯ ಅಂಧಕಾರ!

ಚಂದ್ರಬಾಬುವಿನ ಉಯಿಲಿನಂತೆ ಪದ್ಮಾವತಿಗೆ ರಕ್ಷಣೆ ನೀಡಿ. ಸಾಕ್ಷಿ, ಅವಳ ಮದುವೆ ನೆರವೇರಿಸುವವ ಕಾಲು ಭಾಗದ ಆಸ್ತಿಗೆ ಬಾಧ್ಯ! ಆಸ್ತಿಯ ಪಾಲು ಪಡೆಯುವುದಕ್ಕಿಂತಲೂ ಹೆಚ್ಚಿನದು ತಬ್ಬಲಿ ಪದ್ಮಾವತಿಯ ರಕ್ಷಣೆ. ಇಲ್ಲವಾದರೆ ಬಾಲೆಯ ಹತ್ಯೆ ಖಂಡಿತ!

ಸಂತುರಾಮ ಬಿರುಬಿರು ಹೆಜ್ಜೆ ಹಾಕಿದ. ಧಣಿಯ ಋಣ ತೀರಿಸಲು, ತನ್ನ ಕುಟುಂಬ ಉಳಿಸಿಕೊಳ್ಳಲು ಒಂದೇ ದಾರಿ. ಪದ್ಮಾವತಿಯೊಂದಿಗೆ ದೂರಕ್ಕೆ ಪಲಾಯನ!

ಇಡೀ ಮನೆಯ ವಸ್ತುಗಳಲ್ಲಿ ಒಂದು ಪೆಟ್ಟಿಗೆ ಹಿಡಿಯುವಷ್ಟು ಮಾತ್ರ ಸಾಗಲು ಸಿದ್ಧವಾಯಿತು. ಎಸ್ಟೇಟ್ ಹೊರ ಗೇಟಿನ ಕಾವಲುಗಾರನಿಗೆ ಸಂಶಯ ತಟ್ಟದಂತೆ

ಅವನಿಗೊಂದು ಕಾರಣ ಹೇಳಿ ವ್ಯಾನ್ ಅಲ್ಲಿಯೇ ನಿಲ್ಲಿಸಿದ್ದಾಯ್ತು.

ಸಂತುರಾಮ ದ್ರಾಕ್ಷಿ ತೋಟದ ದಿಬ್ಬದ ಪಕ್ಕದಲ್ಲಿ ಬರುತ್ತಲೇ, ಶೀಷೆ ಹಿಡಿದ ನಿಶಾಚರ ಶತ್ರುಘ್ನಬಾಬು ಪ್ರತ್ಯಕ್ಷನಾಗಿದ್ದ!

"ಎಲ್ಲಿ ಹೋಗ್ತಾ ಇದೀಯ ಈ ಹೊತ್ನಲ್ಲಿ?"

ಸಾಕಷ್ಟು ಕುಡಿದಿದ್ದರೂ ಪೂರ್ತಿ ಸಂಶಯ ತಳೆದ ಕೇಡಿಗನ ಕಂಠದಲ್ಲಿ ದರ್ಪ ಪ್ರತಿಧ್ವನಿಸಿತು.

ಸಂತುರಾಮನ ಎದೆಯಲ್ಲಿ ರೋಷ ಭುಗಿಲೆದ್ದಿತು. ಚಂದ್ರಬಾಬುವಿನ ಶೀತಳ ಕೊಲೆ! ಧಣಿಯ ಕಾರಿನ ಬ್ರೇಕ್‌ನಲ್ಲಿ ಕೈ ಆಡಿಸಿ ಅಪಘಾತ ಮಾಡಿಸಲಿಕ್ಕೂ ಸಾಧ್ಯ. ಭ್ರಾತೃ ದ್ರೋಹಿ!

ಎದೆ ಒತ್ತಿಕೊಂಡ ಚಾಲಕ ವಿಧೇಯತೆಯಿಂದ ತಲೆ ತಗ್ಗಿಸಿದ.

"ಸೇತುವೆ ಹತ್ರ ಯಾರೊ ಓಡಾಡಿದ ಹಾಗಾಯ್ತು. ಬಾಬು, ನೋಡಿ ಬರೋದಿಕ್ಕೆ ಹೊರಟೆ."

"ಈ ಗಂಡಸು ಅದನ್ನ ನೋಡಿ ಬರ್‍ತಾನೆ. ನೀನು ಬಂಗಲೆ ಸೇರು!" ಗದರಿ ಹೇಳಿದ.

ಸರಸರ ನಡೆದ ಸಂತುರಾಮ. ಇನ್ನು ವಿಳಂಬ ಮಾಡುವಂತಿಲ್ಲ. ಎರಡು ಕಿವಿಗಳಲ್ಲೂ ಗುಂಗರಿಸಿತು ಎಚ್ಚರಿಕೆಯ ಶಬ್ದ....ಪದ್ಮಾವತಿ! ಪದ್ದು!

ಹೆಂಡತಿಗೆ ಸೂಚನೆ ನೀಡಿ ಬಂಗಲೆಯ ಹೊರ ಕೋಣೆ ಕಿಟಕಿಯ ಪರದೆ ಮೆಲ್ಲನೆ ಸರಿಸಿದ. ನಸುಗತ್ತಲೆಯಲ್ಲಿ ಕಾಣಿಸಿತು. ಮೀನಾಕ್ಷಿಯ ಪಕ್ಕದಲ್ಲಿ ಮಲಗಿದ ಪದ್ಮಾವತಿ. ಎದುರು ಮಂಚದ ಮೇಲೆ ಗೋಡೆಯ ದಿಕ್ಕಿಗೆ ತಲೆ ಹಾಕಿ ನಿದ್ರಿಸುವ ಕಮಲಹಾಸ.

ಸರೋಜ ಬಾಗಿಲಿಗೆ ಬೆರಳು ಬಡಿದಳು. ಎರಡನೆಯ ಬಡಿತಕ್ಕೆ ಬಾಗಿಲು ತೆರೆದು ಹೊರಬಂದ ಮೀನಾಕ್ಷಿಗೆ ಏನೊ ತಿಳಿಸಿದಳು. ಬೆದರಿದ ಮೀನಾಕ್ಷಿ ಅವಳೊಂದಿಗೆ ಬಂಗಲೆ ಹಿಂದಿನ ತೋಟದವರೆಗೆ ನಡೆದಳು... ಸಂತುರಾಮ ಕೋಣೆಯಲ್ಲಿ ಮೆದು ಹೆಜ್ಜೆ ಹಾಕಿ ಪದ್ಮಾವತಿಯನ್ನು ಎತ್ತಿಕೊಂಡು ವೇಗದ ಹೆಜ್ಜೆ ಹಾಕಿದ. ಪೆಟ್ಟಿಗೆ ಹಿಡಿದು ಬಂದ ಸರೋಜ ಅವನ ಜೊತೆಗೂಡಿದಳು.

ತುಂಬಿದ ನೀರು ಮಧ್ಯದ ಕಿರು ರಸ್ತೆಯ ಮೇಲೆ ಓಟ ಸಾಗಿತು... ಸರೋಜ ಒಮ್ಮೆಗೇ ಗಂಡನ ಕೈ ಹಿಂದಕ್ಕೆ ಜಗ್ಗಿ ನಿಂತಳು. ಕೈಲಿದ್ದ ಪೆಟ್ಟಿಗೆ ನೆಲಕ್ಕೆ ಬಿತ್ತು. ಏದುಸಿರಿನಲ್ಲಿ ಇಬ್ಬರೂ ಮೈಗೆ ಮೈ ಅಂಟಿಸಿ ಒತ್ತಾಗಿ ನಿಂತರು.

ಕೆದರಿದ ತಲೆಯ, ದಪ್ಪ ಮೀಸೆಯ, ಈಟಿ ಕಣ್ಣುಗಳ ಶತ್ರುಘ್ನ ಬಾಬು! ಸಿಮೆಂಟ್

ಕೂಪಗಳ ಭಾಗದಿಂದ ಏರಿಬಂದವನ ಕೈಲಿ ಸಿಮೆಂಟ್ ಬಳೆಗಳನ್ನು ಸರಿಸಲು ಬಳಸುವ ಕಬ್ಬಿಣದ ನೀಳ ಕವೆ!

"ಹಾಂ! ಧಣಿ ಇಲ್ಲ.. ಓಡಿ ಹೋಗೋದಿಕ್ಕೆ ಸರಿಯಾದ ಹೊತ್ತು... ಹೆಣದ ಪೆಟ್ಟಿಗೆ!... ಧಣಿಯ ಮಗಳು!!"

ಇಬ್ಬರ ಹೊರೆಗಳನ್ನೂ ಉರಿಗಣ್ಣಿನಿಂದ ಪರ್ಯಾಯವಾಗಿ ನೋಡಿದ. ಭುಸ್ಸನೆ ತುಟಿಗಳನ್ನು ಊದಿದ.

ಕಬ್ಬಿಣದ ಕವೆ ಸುಂಯ್ಯನೆ ಝಳಪಿತು.

"ಆಹ್!" ಎಂದು ಕೆನ್ನೆ ಸವರಿದ ಸಂತುರಾಮ.

ಕವೆಯ ತುದಿ ಕೆನ್ನೆಯನ್ನು ಅಳವಾಗಿ ಗೀರಿ ಚಿಲ್ಲನೆ ರಕ್ತ ಚಿಮ್ಮಿಸಿತ್ತು. ಸರೋಜ ಮೆಲ್ಲನೆ ಚೀತ್ಕರಿಸಿದಳು.

ಸಂತುರಾಮ ಕೈಲಿದ್ದ ಬಾಲೆಯನ್ನು ಅವಳ ಕೈಗಿತ್ತು. ಎದುರಾಳಿಯ ಮೇಲೆ ಮೀನಿನಂತೆ ಹಾರಿ ತಲೆಯಿಂದ ಘರ್ಷಿಸಿದ. ಶತ್ರುಘ್ನ ಕವೆ ಹಾರಿಸಿ ರಸ್ತೆಯ ಅಂಚಿನಿಂದ ತಗ್ಗಿಗೆ ಉರುಳಿ ಹೋದ. ಎದ್ದು ಮೈ ಕೊಡವಿ ಕೂಪದ ಪಕ್ಕದಲ್ಲಿ ಕಂಡ ಮತ್ತೊಂದು ಕವೆ ಎತ್ತಿಕೊಳ್ಳುವುದರಲ್ಲಿ ಸಂತುರಾಮ ಅವನ ಎದೆಗೆ ಮುಷ್ಟಿಯಿಂದ ಘಟ್ಟಿಸಿದ.

ಹೃದಯ ಕೂಗಿತು.... ಭ್ರಾತೃದ್ರೋಹಿ! ಮಿದುಳು ಹಿಮಗಟ್ಟಿತು.

ದ್ರೋಹಿಯನ್ನು ಗಂಟಿನಂತೆ ಎತ್ತಿ ಸಿಮೆಂಟ್ ಕೂಪದೊಳಕ್ಕೆ ಹಾಕಿದ. ನೆಲದಿಂದ ಆರು ಆಡಿಗಳ ಆಳದಲ್ಲಿದ್ದ. ಮುಕ್ಕಾಲು ಭಾಗದಷ್ಟು ನೀರಿನಿಂದ ತುಂಬಿದ ಕೂಪದಲ್ಲಿ ಶತ್ರುಘ್ನ ಪಚಪಚ ಕೈ ಬಡಿದು ಹೊರಳಾಡಿದ. ಎರಡು ಸಾರಿ ಕೈ ಎತ್ತಿ ಅಸ್ಪಷ್ಟ ಸ್ವರ ಹೊರಡಿಸಿ ಕುಸಿದ. ಪೂರ್ಣ ಮುಳುಗಿದವನು ನಿಶ್ಚೇಷ್ಟಿತನಾದ...

ಸಂತುರಾಮ ಥರಗುಟ್ಟುತ್ತಾ ನಿಂತ. ಮಿದುಳಿನ ಮಂಪರು ಹರಿದಿತ್ತು. ಕುರುಡು ರೋಷದಲ್ಲಿ ತಾನು ನಡೆಸಿದುದೇನು? ಹತಾಶನ ಬುದ್ಧಿಗೇಡಿತನದ ಪರಾಕಾಷ್ಠೆ! ಧಣಿಯ ತಮ್ಮನ ಕೊಲೆ!

ಕೈಗಳು ಆ ಹಂತದವರೆಗೆ ಚಾಚುತ್ತವೆ ಎಂಬುದರ ಅರಿವಾಗುವ ಮೊದಲೇ ಕೃತ್ಯ ಮಿಂಚಿಹೋಗಿತ್ತು.

ಧಾರಾಕಾರವಾಗಿ ಕೆನ್ನೆಯಿಂದ ಷರಟಿಗೆ ಹರಿದ ರಕ್ತವನ್ನು ಬೆರಳಿನಿಂದ ಉಜ್ಜಿದ. ವ್ಯಾನ್ ನಿಂತಿದ್ದ ಹೆಬ್ಬಾಗಿಲ ದಿಕ್ಕಿಗೆ ಓಡುತ್ತಾ ಒಮ್ಮೆ ನಿಂತು ಹಿಂದಕ್ಕೆ ನೋಡಿದ. ಸಿಮೆಂಟ್ ಕೂಪಗಳ ಪ್ರದೇಶದಲ್ಲಿ ಓಡುತ್ತಿದ್ದ ಮೀನಾಕ್ಷಿ ನಸು ಬೆಳಕಿನಲ್ಲಿ ಕಾಣಿಸಿದಳು. ಅತ್ತ ತನ್ನನ್ನು ಹುಡುಕುತ್ತಲಿದ್ದವಳ ಬಿರುಡು ಓಟ ಅದು.

ಸಂತುರಾಮ ಹುಚ್ಚು ವೇಗದಲ್ಲಿ ವ್ಯಾನ್ ಚಲಾಯಿಸಿದ. ಈ ವಲಯದಿಂದ ಪದ್ಮಾವತಿಯನ್ನು ಬಹು ದೂರಕ್ಕೆ ಸಾಗಿಸುವುದೊಂದೇ ಅವನಿಗಿದ್ದ ಗುರಿ....

* * *

ನಸುಕು ಹುಟ್ಟುವ ಕುರುಹುಗಳು ಮೆಲ್ಲನೆ ದಿಗಂತದ ಮೇಲೆ ಕಲೆತವು. ಇನ್ನೆರಡು ತಾಸುಗಳಲ್ಲಿ ಸಿಕಂದರಾಬಾದ್ ಸೇರಲಿದ್ದ ರೈಲಿನ ವೇಗ ಮೊದಲಿಗಿಂತಲೂ ಹೆಚ್ಚಿತ್ತು.

ಬರ್ನಾರ್ಡ್ ತನ್ನ ಪಾಲಿನ ಕಥೆಗೆ ಹೊರಳುವ ಮೊದಲು ಭಾರವಾದ ಸ್ವರ ಎತ್ತಿದ.

"ಸಂತುರಾಮ ಒಡಹುಟ್ಟಿದವನಿಗಿಂತ ಹೆಚ್ಚಾದ ಬಂಧು. ದೈವಕ್ಕೆ ಹೆದರಿದ ಧರ್ಮ ಭೀರು. ಹೆಣ್ಣು ಕರುಳಿನ ಅಜಾನುಬಾಹು. ಪರಿಸ್ಥಿತಿಯಿಂದಾಗಿ ರಾಕ್ಷಸೀ ಕೃತ್ಯ ನಡೆಸಿಬಿಟ್ಟ. ಚಂದ್ರಬಾಬುವಿನ ಮರಣದಲ್ಲಿ ತಮ್ಮ ಕೈವಾಡ ಇತ್ತೋ. ಇಲ್ಲವೊ ತಿಳಿಯದು. ಧಣಿಯ ಋಣ ತೀರಿಸುವ ತರಾತುರಿಯಲ್ಲಿ ಧಣಿಯ ತಮ್ಮನ ಕೊಲೆ ಮಾಡಿಬಿಟ್ಟ... ಸಂತುರಾಮ ಆ ಕೊಲೆ ನಡೆಸಿದ ಕಾಲದಲ್ಲೇ ಸತ್ತ! ಮುಖ ಮರೆಸಿಕೊಂಡು ಭಯದಲ್ಲಿ ಬೇಯೋನು ಬದುಕಿದ್ದರೂ ಸತ್ತ ಹಾಗೆ ಅಲ್ಲವೆ? ಬೇಗಂಚೆರ್ಲಾದಿಂದ ಬೆಂಗಳೂರಿಗೆ ಓಡಿಬಂದು, ನನ್ನ ಆಶ್ರಯ ಪಡೆದು ಪದ್ಮಾವತೀನ ನನಗೆ ಒಪ್ಪಿಸೋವರೆಗೆ ಅವನು ಜೀವಶವ. ಆಮೇಲೆ ಸಂತುರಾಮ, ಅವನ ಹೆಂಡತಿ ಸರೋಜ ಆತ್ಮಹತ್ಯೆ ಮಾಡ್ಕೊಂಡ್ರು ಅಂತ ತಿಳೀತು. ನನ್ನ ಬಂಧು ಪೊಲೀಸರಿಗೆ ಬೇಕಾದ ವ್ಯಕ್ತಿಯಾಗಿಯೇ ಉಳಿದು ಕಣ್ಮರೆ ಆಗಿ ಹೋದ."

ಕಾರ್ತೀಕ ಅವನ ಕಥನವನ್ನು ಬರಹಗಾರನ ದೃಷ್ಟಿಯಿಂದಲೇ ಗ್ರಹಿಸಿ ಹೇಳಿದ.

"ಬರ್ನಾರ್ಡ್, ಇದು ನನ್ನ 'ಮಣ್ಣಿನ ದೋಣಿ' ಕಾದಂಬರಿಯ ಗಂಭೀರ ಕಥೆಗೆ ಸ್ವಾರಸ್ಯವಾದ ಫ್ಲಾಷ್‌ಬ್ಯಾಕ್. ಇದರ ಸಸ್ಪೆನ್ಸ್ ಮೊದಲೇ ತೆರೆಯಬೇಕು ಅನ್ನೊದಾದ್ರೆ ನಾನು ಇಷ್ಟು ಹೇಳ್ತೀನಿ.... ಸಂತುರಾಮ ನಿರ್ಭೀತ, ಸ್ವಾಮಿನಿಷ್ಠ. ಅವನು ಆತ್ಮಹತ್ಯೆ ಮಾಡಿಕೊಳ್ಳುವಷ್ಟು ದುರ್ಬಲ ವ್ಯಕ್ತಿಯಾಗಿರಲಾರ.... ನೀನೇ ಅವನ್ನ ಕೊಲೆ ಮಾಡ್ದೆ! ಅವನು ನಿನ್ನ ಆಶ್ರಯ ಪಡೆದು ಪದ್ಮಾವತಿಯನ್ನ ನಿನಗೆ ಒಪ್ಪಿಸಿ ಕಥೆ ಹೇಳಿದ ಮೇಲೆ ನಿನಗೆ ಮಿದುಳಿನಲ್ಲಿ ಅಲೆ ಎದ್ದಿದೆ. ಬೇಗಂಚೆರ್ಲಾದ ಆಸ್ತಿಯ ಕಾಲು ಭಾಗಕ್ಕೆ ಬಾಧ್ಯನಾಗೋದು ಯಾರಿಗೆ ಬೇಡ? ಧನದಾಹ ಬುದ್ಧಿಗೆ ಗ್ರಹಣ ಹಿಡಿಸೋದು ಸ್ವಾಭಾವಿಕ. ನೀನು ಸಂತುರಾಮನ್ನ, ಅವನ ಹೆಂಡತಿನ ಪೂರೈಸಿಬಿಟ್ಟೆ! ಅದೇ ನಿನ್ನ ಹೆಂಡತಿಗೆ ಮನೋರೋಗ ತಂದಿದ್ದು."

ಸೊರ್ರನೆ ಉಸಿರೆಳೆದುಕೊಂಡ ಬರ್ನಾರ್ಡ್ ಕಿಟಕಿಯ ಮೂಲಕ ದೂರಕ್ಕೆ ದೃಷ್ಟಿ ಹಾಕಿದ.

"ನೀನು ಯಾಕೆ ಹೀಗೆ ಹೇಳ್ದೆ ಅಂತ ಬಲ್ಲೆ. ಕೊಲೆ ಮಾಡೋದು ನನಗೆ ಹೊಸದಲ್ಲ ಅಂತ ಆಗಾಗ್ಗೆ ನಾನು ಹೇಳ್ತಿದ್ದೆ. ಅದೇ ನನ್ನ ಮೇಲಿನ ಸಂಶಯಕ್ಕೆ ಕಾರಣ. ಆದರೆ ಸಂತುರಾಮ ಆತ್ಮಹತ್ಯೆ ಮಾಡ್ಕೊಂಡಿದ್ದು ಸತ್ಯ."

"ಮುಂದಿನ ಕಥೆ ಸರಾಗವಾಗಿ ಹೇಳಬೋದು. ನೀನು ಬೆಂಗಳೂರಲ್ಲಿ ಯಾವುದೊ ಫ್ಯಾಕ್ಟರಿಯಲ್ಲಿದ್ದೆ ಅಥವಾ ಯಾರಲ್ಲೊ ಟ್ರಕ್ ಡ್ರೈವರ್ ಆಗಿರಬೋದು. ನಿನಗೆ ವಿಪರೀತ ದುಃಖ, ಬೇಸರ ಹುಟ್ಟಿಸೊ ಪ್ರಸಂಗ ಅಲ್ಲಿ ಜರುಗಿದೆ..."

"ನಿಜ, ನನ್ನ ಮಗ ಜಯಶೀಲ ಎರಡೇ ದಿನಗಳ ಜ್ವರದಿಂದ ಸತ್ತುಹೋದ. ನನಗೆ ಯಾರೊ ಕುಡಿತ ಕಲಿಸಿಬಿಟ್ರು. ಜಯಶೀಲ ಕಣ್ಣು ಮುಚ್ಚಿದಾಗ ನಾನು ಊರಲ್ಲೇ ಇರಲಿಲ್ಲ. ನನ್ನ ವರ್ತನೆ ಹೆಂಡತಿಗೆ ರೋಗ ತಂದುಬಿಡ್ತು. ಬಡತನ, ಹೊಣೆಗಾರಿಕೆ, ದುಃಖ, ಚಿಂತೆ ಎಲ್ಲಾ ಸೇರಿ ನನಗೆ ಹಾರಂಗಿ ಅಣೆಕಟ್ಟಿನ ದಿಕ್ಕು ತೋರ್ಸಿದ್ವು..."

"ಅಲ್ಲಿ ನನ್ನ ಕಾದಂಬರಿಗೆ ನಿನ್ನ ಕಥೆಯ ಬೆಸುಗೆ ಬಿತ್ತು. ಗಂಡ, ಹೆಂಡತಿಗೆ ಬೆಸುಗೆ ಇಲ್ಲದ ಕಥೆಯ ಗತಿ ನೀರಸವಾಯ್ತು. ದಿಢೀರ್ ಮದುವೆಯಿಂದ ಇಬ್ಬರ ಮಧ್ಯೆ ಕಂದರ. ಅದರ ಮೇಲೊಂದು ಸೇತುವೆ ಹಾಕುವಷ್ಟರಲ್ಲಿ, ಪ್ರಯತ್ನಕ್ಕೆ ಸಿಡಿಮದ್ದು! ಒಂದು ಕಡೆಯಿಂದ ಶರ್ಮಿಳಾ. ಮತ್ತೊಂದು ಕಡೆಯಿಂದ ಸುಧಾಕರ. ಸಮಸ್ಯೆ ಬಗೆಹರಿಯೊ ಹೊತ್ತಿಗೆ ಹೊಸ ಸಮಸ್ಯೆಯ ಉದಯ...ಓಹ್, ನಿನ್ನ ಮಾತಿನ ನಡುವೆ ನನ್ನ ವಿಷಯ ಏರಿಬಿಡ್ತು. ಬರ್ನಾರ್ಡ್, ಬೇಗಂಚೆರ್ಲಾದಲ್ಲಿ ನಿನ್ನ ಚರಿತ್ರೆ ಬಹಳ ಹುಷಾರಿನಿಂದ ಹೇಳಬೇಕಾಗುತ್ತೆ. ನೀನು ಸಂತುರಾಮನ ಹೆಸರೇ ಎತ್ತೊ ಹಾಗಿಲ್ಲ. ಸಂತುರಾಮ ಕಾನೂನಿನ ವಶಕ್ಕೆ ಬೇಕಾಗಿರೊ ಅಪರಾಧಿ. ಅವನಿಗೆ ಆಶ್ರಯ ಕೊಟ್ಟ ನೀನೂ ಅಪರಾಧಿ ಅನ್ನೋದು ಮರೆಯಬೇಡ."

"ನಿನಗೆ ಅಷ್ಟೊಂದು ಬೇಡಿಕೆ ಸಲ್ಲಿಸಿ ಅಲ್ಲಿಗೆ ಒಯ್ತಾ ಇರೋದು ಅದೇ ಕಾರಣಕ್ಕೆ. ಅಲ್ಲಿಯೋರು ನನ್ನ ಕಥೆಯಲ್ಲಿ ವಿಶ್ವಾಸ ಇಟ್ರು, ಸೌಭಾಗ್ಯಳ ಹಕ್ಕು ಸ್ಥಿರವಾಗೋದಿಕ್ಕೆ ನೀನೇ ಆಧಾರ. ಉಯಿಲಿನ ಪ್ರಕಾರನ ನನಗೆ ಕಾಲು ಭಾಗದ ಆಸ್ತಿ ತೊಡಕಿಲ್ಲದೆ ಸಿಗೋದಿಕ್ಕೆ ನಿನ್ನದೇ ಬೆಂಬಲ."

ಕಾದಂಬರಿಕಾರನ ಹುಬ್ಬೇರಿತು. ಪೋಷಕ ಪಾತ್ರಗಳಲ್ಲಿನ ಸ್ವಭಾವ ವೈಚಿತ್ರ್ಯಗಳ ವಿಶ್ಲೇಷಣೆಗಾಗಿ ಕಥಾನಾಯಕ ಧನದಾಹಿಯಾದರೆ, ಅವನ ಬೆಂಬಲಕ್ಕೆ ನಿಂತಿರುವ ಮತ್ತೊಬ್ಬ ಧನ ಪಿಪಾಸು!

"ನಿನಗೆ ಭಾಗ್ಯ ತರೊ ಹುಡುಗಿಗೆ ಸೌಭಾಗ್ಯ ಅಂತ ಹೆಸರು ಕೊಟ್ಟು ಐಶ್ವರ್ಯದ ನಿರಂತರ ಕನಸು ಕಾಣ್ತಾ ಹೋದೆ. ನನಗೆ ಮದುವೆ ಉರುಲು ಹಾಕ್ದೆ."

"ಉರುಲು ಹಾಕೊ ಆತುರದಲ್ಲೂ ನೀನು ಅವಳಿಗೆ ಸರಿಯಾದ ಗಂಡ ಅಂತ

ಆತ್ಮಸಾಕ್ಷಿಯಾಗಿ ಒಪ್ಪಿದ್ದೆ."

"ನೀನು ಅರ್ಥವಾಗದ ಮನುಷ್ಯ. ನಿನ್ನ ಮಾತು, ಸಿಡಿ ಸ್ವಭಾವ, ಚರ್ಯೆ ನಿನಗೆ ಮೋಸ ಮಾಡ್ತಿವೆ. ಅದರಿಂದಲೇ ನಾನು ಗೊತ್ತು ಮಾಡಿಕೊಂಡಿದ್ದು ನೀನು ಸೌಭಾಗ್ಯಳ ತಂದೆ ಅಲ್ಲಾಂತ. ನಿನ್ನಲ್ಲಿ ಇನ್ನೂ ಮುಚ್ಚುಮರೆ ಇದೆ ಅಂತ ಭಾವಿಸ್ತೀನಿ... ಈ ಸೌಭಾಗ್ಯ ಬೇಗಂಚೆರ್ಲಾದ ಪದ್ಮಾವತಿಯೇ ಅಲ್ಲಾಂದ್ರೆ ಏನು ಹೇಳ್ತೀಯ?...."

ಬರ್ನಾರ್ಡ್ ಚಕ್ಕನೆ ಒರಟು ಹಸ್ತದಿಂದ ಅವನಬಾಯಿ ಮುಚ್ಚಿದ.

"ಶ್! ನಿನ್ನ ಮಾತು ಕೇಳಿಸಿಕೊಂಡು ಮೇಲೆ ಮಲಗಿರೊ ಹುಡುಗಿಯ ಮಿದುಳು ತೊಳೆದು ಹೋದೀತು. ಬುದ್ಧಿ ಚಿಗರ್ತಾ ಇರೋಳು ಬುದ್ಧಿಹೀನೆ ಆಗಿಬಿಟ್ಟಾಳು. ಹನ್ನೊಂದು ವರ್ಷ ಪಟ್ಟ ಶ್ರಮ ನನಗೆ ನಷ್ಟ ತಟ್ಟಿಸಿದ್ರೆ ಚಿಂತೆ ಇಲ್ಲ. ಅವಳ ಗತಿ? ಸೌಭಾಗ್ಯ ಪದ್ಮಾವತಿಯೊ, ಅಲ್ಲವೊ ಅನ್ನೋ ಸಂದೇಹ ಬರೋದು ಬೇಡ."

"ಅವಳ ಯಾರೇ ಆಗಿರಲಿ, ನನ್ನ ಹೆಂಡತಿ."

ತೀರ್ಪು ಕೊಡುವಂತೆ ನುಡಿದು ಅವನಿಗೆ ನೆಮ್ಮದಿ ಕಾಣಿಸಿದ.

"ನಿನ್ನ ಹೆಂಡತಿಯನ್ನು ಸಾಕಿದ ನನಗೂ ಕಡೇವರೆಗೆ ಅವಳ ಹಿತ ಬೇಕು."

ಕಾರ್ತೀಕ ಕಣ್ಣುಗಳನ್ನು ಬೆರಳಿನಿಂದ ಒತ್ತಿದ.

"ಸೌಭಾಗ್ಯ ಚಂದ್ರಬಾಬು ಮಗಳು....ಅವಳನ್ನ ಮದುವೆ ಆದ ವ್ಯಕ್ತಿ ನಾನು.. ಅವಳ ರಕ್ಷಣೆ, ಪೋಷಣೆ, ಮದುವೆ ಪೂರೈಸಿರೊ ನೀನು ಕಾಲು ಭಾಗದ ಆಸ್ತಿಗೆ ಹಕ್ಕುದಾರ... ಈ ಮೂರು ಅಂಶಗಳೂ ಸತ್ಯ. ಒಂದಕ್ಕೂ ರುಜುವಾತು ಪತ್ರ ಇಲ್ಲ. ದೊಡ್ಡ ಪ್ರಯೋಗದಲ್ಲಿ ನಾನು ಯಜ್ಞಪಶು ಆಗಿದೀನಿ. ನಿನ್ನ ಮಾತಿಗೆ ತಲೆ ಆಡಿಸಿ ಬರ್ತಿದೀನಿ. ನಿನ್ನ ಉದ್ದೇಶ ಏನೇ ಇರಲಿ, ಆಶ್ವಾಸನೆ ಕೊಡ್ತೀನಿ. ಸೌಭಾಗ್ಯ ನನ್ನ ಹೆಂಡತಿ ಅನ್ನೋದನ್ನ ಅವಳೇ ಅಲ್ಲಿ ಹೇಳೋವರೆಗೆ ನಾನು ಬಾಯಿ ಬಿಡೋದಿಲ್ಲ. ನನ್ನ ಕಾದಂಬರಿಗೆ ನಾನೇ ಕಥಾನಾಯಕ. ಬದುಕಿನ ಕತೆಗೆ ತಿರುವು ಎಂತಾದ್ದು ಸಿಗುತ್ತೇಂತ ಆಸಕ್ತಿ ಕೆರಳಿಸಿಕೊಂಡಿದೀನಿ. ಇಂತಾ ಹುಚ್ಚು ಯಾರಿಗೆ?"

"ಇದು ಹುಚ್ಚಲ್ಲ. ವಾಸ್ತವ ವಿಷಯಗಳನ್ನು ವಾಸ್ತವ ಅನ್ನಿಸೋದಿಕ್ಕೆ ನೀನು ತೋರಿಸ್ತಾ ಇರೊ ಸಹಕಾರ. 'ಮಣ್ಣಿನ ದೋಣಿಯ' ಸ್ವಾರಸ್ಯವಾದ ಭಾಗ."

"ಪ್ರಣಯ ದೋಣಿ ಗತಿ ತಪ್ಪಿ ಮಣ್ಣು ದೋಣಿ ಆದ ದಿನವೇ ಅದು ದಡವಿಲ್ಲದ ಹೊಳೆಯಲ್ಲಿ ನಿಲ್ತು. ಹೇಳಿ ಕೇಳಿ ಅದು ಮಣ್ಣಿನ ದೋಣಿ, ಅದು ದಡ ಕಾಣದೆ ನೀರಿನಲ್ಲಿ ಎಷ್ಟು ಕಾಲ ಉಳಿದೀತು? ಓದುಗನಿಗೆ ನಿರೀಕ್ಷಿತ ಅಂತ್ಯ."

ಭಾವುಕ ಶಬ್ದಗಳನ್ನು ಅರಗಿಸಿಕೊಂಡ ದೃಢದೇಹಿ.

"ಆದರೆ ಸುಖಾಂತಕ್ಕೆ ನನ್ನಿಂದ ಏನು ಅಪೇಕ್ಷಿಸ್ತೀಯ?"

ಪ್ರಶ್ನೆ ವಿನೋದದ ಧಾಟಿಯಲ್ಲಿ ಬಂದರೂ ಕಾರ್ತೀಕನ ಎದೆ ಇರಿಯಿತು. ಉತ್ತರ ನೀಡಲಿಲ್ಲ

* * *

ಪ್ರವಾಸಿಗಳ ವಾಹನದಂತೆ ಟ್ಯಾಕ್ಸಿ ನಿಧಾನವಾಗಿ ಚಲಿಸಿತು. ರಾಣಿಗುಡದಿಂದ ಸಾವಿರ ಆಡಿಗಳ ಎತ್ತರಕ್ಕೆ ಹಂತ ಹಂತಗಳಲ್ಲಿ ಏರಿದ ಗುಡ್ಡ ಪ್ರದೇಶ ಮೇಲುಗಡೆ ಎರಡು ಮೈಲಿಗಳ ಚದರದ ವಿಸ್ತಾರದಲ್ಲಿ ಸಮ ಮಟ್ಟ ಹೊಂದಿತ್ತು.

ಕಾರ್ತೀಕ ಕಣ್ಣು ತುಂಬಿಕೊಳ್ಳುತ್ತಿದ್ದ. ಬರ್ನಾರ್ಡ್ ಹೇಳಿದಂತೆ ಫಲವತ್ತಿನ, ಹಸಿರು ಸಿರಿಯ ಬಂಗಾರದ ಬಟ್ಟಲು. ಆಷಾಢದ ಕಡೆಯ ಕಂತಿನ ರಸಭರಿತ ದ್ರಾಕ್ಷಿಗೊಂಚಲು ಹೊತ್ತ ಹಸಿರು, ಹಳದಿ ಬಳ್ಳಿ ಹೊರೆಗಳ ಪಂಕ್ತಿಗಳು. ಪಕ್ಕಕ್ಕೆ ಆಲೂಗಡ್ಡೆ ಬೆಳೆಯ ಜಮಖಾನೆ... ಮುಂದಕ್ಕೆ ಒಂದು ವಾಹನ ಸಾಗುವಷ್ಟು ಮಾತ್ರದ ಕಿರು ರಸ್ತೆ. ಎರಡು ಪಕ್ಕಗಳಲ್ಲೂ ತುಂಬಿ ನಿಂತ ನೀರು. ರಸ್ತೆಯೇ ನೀರಿನಲ್ಲಿ ಪಟ್ಟೆಯಂತೆ ತೇಲುವ ನೋಟ. ಯಾವುದೊ ತೊರೆಯಿಂದ ಹಾಯಿಸಿದ ನೀರಿನ ಮೇಲೆ ಚಿಕ್ಕ ಸೇತುವೆ. ಎಡಕ್ಕೆ ಹದಿನೈದು ಅಡಿಗಳ ತಳದಲ್ಲಿ ವಿಶಾಲ ವಲಯದಲ್ಲಿ ಸಿಮೆಂಟ್ ಕಾಮಗಾರಿ. ಸಿಮೆಂಟ್ ಅಚ್ಚಿನ ವಸ್ತುಗಳನ್ನು ದೃಢಗೊಳಿಸಲು ಸಾಧಕವಾದ ವರ್ತುಳಾಕಾರದ ನೆಲ ಮಟ್ಟದ ಬಾವಿಗಳು. ಚೌಕನೆಯ ಹೊಂಡಗಳು. ಮಧ್ಯೆ ಕೆಲಸಗಾರರ ಹರಿದಾಟ.

"ಇಲ್ಲಿ ಮೀನು ಸಾಕಣೆ ನಡೆಸಿರಬೇಕು."

ಕಾರ್ತೀಕ ಕಪ್ಪನೆಯ ಜಲಕೂಪಗಳನ್ನು ನೋಡುತ್ತಾ ಹೇಳಿದ.

"ಅಲ್ಲ, ಸಿಮೆಂಟ್ ವಸ್ತುಗಳ ಕೆಲಸ ನಡೆದಿರಬೇಕು."

ಅಗಸೆ ಮರಗಳ ನಡುವೆ ಜೋಡಿಸಿದ ತೊಲೆ, ತೊಟ್ಟಿಗಳನ್ನು ತೋರಿದ ಬರ್ನಾರ್ಡ್.

ಬಲಪಕ್ಕದ ಬಂಗಲೆಯ ಮುಂದೆ ಟ್ಯಾಕ್ಸಿ ನಿಂತಿತು.

"ಪಪ್ಪ, ಆ ಮನೆ ನೋಡು...!"

ಬಂಗಲೆಯ ಪಕ್ಕದಲ್ಲಿದ್ದ ನಕ್ಷತ್ರ ಗುರುತಿನ, ಬಳ್ಳಿ ಹಬ್ಬಿಸಿದ ಚಿಕ್ಕ ಮನೆಯ ಕಡೆ ಬೆರಗಾಗಿ ಬೆರಳು ತೋರಿದಳು ಸೌಭಾಗ್ಯ.

ಮನೆಯ ಗೋಡೆಗೆ ತೂಗಿಸಿದ್ದ, ನಂತರ ಮೀನಾಕ್ಷಿಯ ಆಲ್ಬಮ್‌ನಲ್ಲಿ ಕಂಡ ಚಿತ್ರ ಅದು.

"ಹೌದು, ಅದೇ ಮನೆಯ ಚಿತ್ರ ನಮ್ಮಲ್ಲಿ ಇದ್ದದ್ದು."

ಮುಂದೇನೂ ಹೇಳದಂತೆ ಅವನಲ್ಲಿ ಕಂಪನ ಹುಟ್ಟಿತ್ತು.

ಬಂಗಲೆಯ ಆಳು ಕಾರಿನ ಬಳಿಗೆ ಬಂದ.

ಹೆಬ್ಬಾಗಿಲು ದಾಟಿ ಮೂವರೂ ಪ್ರವೇಶದ ಭಾಗಕ್ಕೆ ಬಂದರು.

ಹನ್ನೊಂದು ವರ್ಷಗಳ ಹಿಂದೆ ಅಸ್ತವ್ಯಸ್ತ ಪರಿಸ್ಥಿತಿಯಲ್ಲಿ ತಾನು ತ್ಯಜಿಸಿದ ಮನೆ ಇದು ಎಂಬ ಅರಿವಿನ ತುಣುಕೂ ಸೌಭಾಗ್ಯಳಿಗೆ ಹತ್ತದು. ತಲೆ ಎತ್ತಿದಾಗ ಕಂಡುದು ಆಲ್ಬಮ್‌ನಲ್ಲಿ ನೋಡಿದ ಚಿತ್ರಗಳ ದೊಡ್ಡ ಪ್ರಮಾಣದ ಎರಡು ಫೋಟೋಗಳು.

ಚಂದ್ರಬಾಬು...ಶತ್ರುಘ್ನಬಾಬು

ಬಯಸದಿದ್ದರೂ ಅತೀವ ದೊಡ್ಡ ಸಮಸ್ಯೆಯಲ್ಲಿ ಸೇರಿದ ಬರ್ನಾರ್ಡ್ ಹಿಂದು ಮುಂದು ನೋಡಿದ. ಕಾರ್ತೀಕ ಮುಂದಕ್ಕೆ ಹೆಜ್ಜೆ ಸರಿಸುವುದರಲ್ಲಿ ಮೊಗಸಾಲೆಯ ತಿರುವಿನಿಂದ ಸರಕ್ಕನೆ ಬಂದವರಿಬ್ಬರೂ ಎದುರಾಗಿ ಕಾಣಿಸಿಕೊಂಡರು.

ಅಲಂಕೃತ ಮೀನಾಕ್ಷಿ! ಸೂಟುಧಾರಿ ಕಮಲಹಾಸ!

ಮೂವರನ್ನೂ ವಿಸ್ಮಯಗೊಳಿಸಿದರು ಗಂಭೀರ ಮುಖಗಳ ಜೋಡಿ.

ಮೀನಾಕ್ಷಿ ಹಸನ್ಮುಖದಲ್ಲಿ ಕೈ ಚಾಚಿದಳು. ಸೌಭಾಗ್ಯ ಸಿರಿ ಕಂಡವಳಂತೆ ಅದೇ ಪ್ರತಿಕ್ರಿಯೆ ತೋರಿ ಅವಳ ಕೈ ಹಿಡಿದಳು.

"ನಮ್ಮ ಎಸ್ಟೇಟಿಗೆ ಸ್ವಾಗತ, ಸೌಭಾಗ್ಯ.... ಸೌಭಾಗ್ಯವೇ ಬಂದ ಹಾಗಾಯ್ತು. ಇಲ್ಲಿಗೆ ಕರಕೊಂಡು ಬರಬೇಕೂಂತ ನಾವು ಪ್ರಯತ್ನವಾಡಿದ್ವಿ. ನೀವೇ ಅನಾಯಾಸವಾಗಿ ಕಾಣಿಸಿಕೊಂಡ್ರಿ...."

ಸೌಭಾಗ್ಯ ಅವಳ ಬಹುವಚನ ಸಂಬೋಧನೆಯಿಂದ ಚಕಿತಗೊಂಡಳು.

ಮೀನಾಕ್ಷಿ ಹುರುಪಿನಿಂದ ಮುಂದುವರಿಸಿದಳು.

"ನೀವು ಮಿಸ್ಟರ್ ಬರ್ನಾರ್ಡ್ ಅಂತ ತಿಳಿತೀನಿ... ನಿಮಗೂ ಸ್ವಾಗತ. ನಿಮ್ಮನ್ನ ಕಾಣೋದಿಕ್ಕೆ, ಅಲ್ಲ ಸೌಭಾಗ್ಯ ನಿಮ್ಮನ್ನ ತೋರಿಸೋದಿಕ್ಕೆ ಮೂರು ಸಾರಿ ಪ್ರಯತ್ನ ಮಾಡಿದ್ರು. ಸಾಧ್ಯ ಆಗ್ಲಿಲ್ಲ. ಈಗ ತಾಸುಗಟ್ಟಲೆ ಮಾತಾಡುವಷ್ಟು ವಿರಾಮವಾಗಿ ನೀವು ದೊರೆತಿರೋದು ನಮ್ಮ ಅದೃಷ್ಟ."

ಛಟಿ ಏಟಿನಂತಿತ್ತು ಸ್ವಾಗತ. ಆಕರ್ಷಕ ನಾಗರ ಕಣ್ಣುಗಳ ಮುಂದೆ ನಿಂತ ಹೇಡಿ! ಕಾರ್ಯಾರಂಭದ ಸೋಲು? ಮೀನಾಕ್ಷಿಯನ್ನು ತಪ್ಪಿಸಿ ಸೌಭಾಗ್ಯಳನ್ನು ಕರೆತರುವುದರಲ್ಲಿ ಸಮರ್ಥನಾದರೂ, ಮೀನಾಕ್ಷಿಯಿಂದಲೇ ತನಗೆ ಸ್ವಾಗತ!

ಕಮಲಹಾಸ ಕಾರ್ತೀಕನತ್ತ ನಮ್ರವಾಗಿ ಮಾತು ಹರಿಸಿದ್ದ.

"ಚಮೇಲಿ ಗಾರ್ಡನ್ಸ್‌ನಲ್ಲಿ ಕಾಣಿಸ್ಕೊಂಡು ಮಾಯವಾಗಿಬಿಟ್ರಿ, ಮಿಸ್ಟರ್ ಕಾರ್ತೀಕ.

ಮತ್ತೆ ಭೇಟಿಯೇ ಆಗ್ಲಿಲ್ಲ. ಈಗ ನಮಗೆ ಹೇಳದೆ ನೀವೆಲ್ಲಿಗೂ ಹೋಗೋ ಹಾಗಿಲ್ಲ. ಮಿಸ್ಟರ್ ಬರ್ನಾರ್ಡ್, ನಿಮಗಿಂತ ಮೊದಲೇ ನಾವು ಇಲ್ಲಿಗೆ ಬಂದಿರೋದು ಆಶ್ಚರ್ಯ ಆಗಿರಬೇಕಲ್ಲ? ಆದರೆ ಬರಲೇಬೇಕಾದ ತುರ್ತುಪ್ರಸಂಗ."

ಇನ್ನೂ ಪ್ರತಿಕ್ರಿಯೆ ತೋರದೆ ನಿಂತ ಬರ್ನಾರ್ಡ್‌ನ ಕೈ ಕುಲುಕಿದ. ಕಾರ್ತೀಕ ತುಸು ನಿಧಾನವಾಗಿ ತನ್ನ ಕೈ ಚಾಚಿದ.

"ಮಿಸ್ಟರ್ ಕಮಲಹಾಸ, ಇದು ಕೇವಲ ಎಸ್ಟೇಟ್ ಅಲ್ಲ. ನಾನು ಭಾವಿಸಿದ್ದ ಹಾಗೆಯೇ ಸ್ಫೂರ್ತಿ ತರೋ ಪುಟ್ಟ ಪ್ರಪಂಚ."

"ಹೌದೌದು. ಇಲ್ಲಿ ನಿಮ್ಮ ಪೆನ್ ಹರಿತಕ್ಕೆ, ಕಾಗದದ ಸವೆತಕ್ಕೆ ನಿಲುಗಡೆಯೇ ಇಲ್ಲ. ಬುಲ್ ಬುಲ್ ತರಂಗದ ತಂತಿ ಹರಿಯೊವರೆಗೂ ಸರಿ... ಸ್ಫೂರ್ತಿ ವಿಪರೀತವಾದೀತು."

ತುಸು ಗಟ್ಟಿಯಾಗಿ ನಕ್ಕು ಮೀನಾಕ್ಷಿಯನ್ನು ನೋಡಿದ. ಅವಳೂ ಮಾತಿನ ಚುರುಕು ತಪ್ಪಿಸಲಿಲ್ಲ.

"ನೀವು ಪ್ರೊಫೆಸರ್ ತರ ಕಾಣ್ತೀರಿ, ಮಿಸ್ಟರ್ ಬರ್ನಾರ್ಡ್. ನಿಮಗೆ ಗಲಭೆ ಇಲ್ಲದ ಜಾಗ ನೋಡ್ತೀನಿ."

ಅವದ ದಟ್ಟ ಮುಖವನ್ನು ಆಳವಾಗಿ ನಿರುಕಿಸಿ ವಿನಯದ ಸ್ವರಕ್ಕೆ ಇಳಿದಳು.

"ದೂರದ ಪ್ರಯಾಣ ಮಾಡಿ ಬಂದಿದೀರಿ. ಮೊದಲು ವಿಶ್ರಾಂತಿ ತೊಗೊಳಿ. ಆಮೇಲೆ ಬೇಕಾದಷ್ಟು ಮಾತಾಡುವ. ನಿಮ್ಮ ಕೋಣೆಗಳು ಸಿದ್ಧ ಆಗಿವೆ."

"ನಾವು ಬರೋದು ಮೊದಲೇ ಕನಸು ಬಿದ್ದ ಹಾಗಿದೆ."

ಕಾರ್ತೀಕನ ಬೆನ್ನು ಚಪ್ಪರಿಸಿದ ಕಮಲಹಾಸ.

"ಹಾಗೇ ಇರ್ಬೇಕು... ಸೌಭಾಗ್ಯ ಇದೇ ಬಂಗಲೆಯಲ್ಲಿ ಇರ್ತಾರೆ. ಕಾದಂಬರಿಕಾರರಿಗೆ ದ್ರಾಕ್ಷಿ ತೋಟದ ಮನೆಯ ಬಿಡಾರ.... ಮಿಸ್ಟರ್ ಬರ್ನಾರ್ಡ್, ನಿಮಗೆ ಸೇತುವೆ ಹತ್ತಿರ ಇರೊ ಸಿಮೆಂಟ್ ಮನೆಯ ಕೋಣೆ."

ನಗೆ ಮುಖದಲ್ಲಿ ಕೈ ಆಡಿಸಿ ಮೀನಾಕ್ಷಿಯೊಂದಿಗೆ ಸರಸರ ಹೊರಬಿದ್ದ ಕಮಲಹಾಸ ಪೂರ್ಣ ವ್ಯವಹಾರಸ್ಥನಾಗಿ ಕಾಣಿಸಿದ.

ಬರ್ನಾರ್ಡ್‌ನ ಭಾವನೆಗಳು ವಿಕೃತಗೊಳ್ಳುವ ಮೊದಲೇ ಆಳುಗಳು ಟ್ಯಾಕ್ಸಿಯ ಕಡೆಗೆ ನಡೆದಿದ್ದರು.

ಒಟ್ಟಾಗಿ ಬಂದ ಮೂವರಿಗೆ ಮೂರು ಪ್ರತ್ಯೇಕ ಭಾಗದ ಕೋಣೆಗಳು? ಸಂಚು!

ಪೆಟ್ಟಿಗೆ ಹಿಡಿದ ಆಳಿನೊಂದಿಗೆ ಕಿರು ರಸ್ತೆಗೆ ಕಾಲಿಟ್ಟಾಗ ನಕ್ಷತ್ರ ಗುರುತಿನ ಮನೆಯ ಮೇಲೆ ನಡುನೋಟ ಹೂಡಿ. ಬಹು ಹೊತ್ತಿನಿಂದ ಸಾಧಿಸಿದ ಮೌನ

ಭಂಗಿಸಿದ.

"ಆ ಮನೆಯಲ್ಲಿ ಈಗ ಯಾರಿದಾರೆ?"

ಭಾರವಾಗಿತ್ತು ಧ್ವನಿ. ಬಲಾಢ್ಯನಲ್ಲಿ ಅತ್ಯಂತ ಆಸಕ್ತನಾದ ಆಳು ವಿನಯವತ್ತಾಗಿ ಉತ್ತರಿಸಿದ.

"ದ್ರಾಕ್ಷಿ ತೋಟದ ಮ್ಯಾನೇಜರ್ ದೇಶಪಾಂಡೆ ಇದಾರೆ.... ಚಂದ್ರಬಾಬು ಡ್ರೈವರ್‌ಗೆ ಅದನ್ನ ಕೊಟ್ಟಿದ್ದರಂತೆ. ಈಗಲೂ ಅದಕ್ಕೆ ಸಂತುಮನೆ ಅಂತ ಹೇಳ್ತಾರೆ, ಬಾಬು."

ಜಲ ಪದರಗಳ ಮಧ್ಯದ ರಸ್ತೆ ಕಳೆದು, ಸೇತುವೆಯ ಎಡ ಪಕ್ಕದ ತಗ್ಗಿಗೆ ನಿಧಾನವಾಗಿ ಇಳಿದ ಬರ್ನಾರ್ಡ್ ಸುತ್ತಲೂ ನೋಡಿದ. ಹೆಜ್ಜೆಗಳ ಸರಿತ ಸ್ಥಗಿತವಾಯಿತು. ಆಳು ಅವನ ವೀಕ್ಷಣೆಗೆ ಭಂಗ ತರಲು ಇಚ್ಛಿಸದೆ ಕೋಣೆಯಲ್ಲಿ ಪೆಟ್ಟಿಗೆ ಇರಿಸಿ ಹಿಂತಿರುಗಿ, ಬೀಗದಕೈ ನೀಡಿ ಹೊರಟ.

ಬರ್ನಾರ್ಡ್ ಕಣ್ಣುಗಳು ಹೊರಳಾಟ ನಿಲ್ಲಿಸಲಿಲ್ಲ.

ನೀರು ತುಂಬಿದ ನೆಲಮಟ್ಟದ, ವರ್ತುಳ ಕೂಪಗಳು. ಚೌಕನೆಯ ಹೊಂಡಗಳು. ಪಕ್ಕದಲ್ಲಿ ಚೊರ್ರನೆ ಪೊರೆಯುವ ತೊರೆ. ಸಿಮೆಂಟ್ ವಸ್ತುಗಳನ್ನು ಹೊಂದಿಸಿಡಲು ಬಳಸುವ ದಿಂಡು ಕಲ್ಲುಗಳ ರಾಶಿ. ವಿವಿಧ ಅಳತೆಗಳ ಕಬ್ಬಿಣದ ಮೀಟು ಕವೆಗಳು.

ಉಬ್ಬುತ್ತಿದ್ದ ಎದೆಯನ್ನು ಒತ್ತಿ ಹೆಜ್ಜೆ ಹೊರಳಿಸಿದ. ಹೆಜ್ಜೆ ಸರಿಯದು! ಕಣ್ಣು ಹೊಸಕಿದ.

ಕಾಣುವ ವಸ್ತುಗಳ ಮೇಲೆಲ್ಲ ರಕ್ತ ಲೇಪನ! ಮೆದುವಾಗಿ ತೂರಿ ಬರುವ ರುದ್ರ ರಾಗ!..... ಮತ್ತೆ ನಿಶ್ಯಬ್ದ.

ಭುಜಗಳ ಮೇಲಿನ ಆಗಾಧ ಹೊರೆಯಿಂದ ಜಗ್ಗಿದ. ಹೆಗಲೇರಿದ್ದ ಸಂತುರಾಮ!

"ಸಂತುರಾಮ!.... ಇಳಿ.. ಆಹ್! ಕಬ್ಬಿಣದ ಹೊರೆ...."

ಶಕ್ತಿಶಾಲಿ ಕತ್ತು ಹೊರಳಿಸಿದ. ಹೊರೆ ಜಗ್ಗದು.

ಸಂತುರಾಮ ಕರ್ಕಶ ನಗೆ ಹಾಕಿದ. ಬರ್ನಾಡ್ ಗಾಬರಿಯಿಂದ ಕಾರ್ಮಿಕರ ದಿಕ್ಕಿಗೆ ನೋಡಿದ.

"ನಗಬೇಡ. ಆ ಜನ ಬರ್ತಾರೆ.... ನೀನು ಕೊಲೆಗಾರ! ಇಳಿದು ಓಡು..."

ಉಬ್ಬಸದ ಬೇಡಿಕೆಯಲ್ಲಿ ಒತ್ತಾಯಿಸಿದ. ನಗೆ ನಿಲ್ಲದು.

"ಇಳಿಯೋದಿಲ್ಲ, ಬರ್ನಾರ್ಡ್.... ನನ್ನ ಕಥೆ ಕಾರ್ತೀಕನಿಗೆ ಹೇಳ್ದೆ, ಸೌಭಾಗ್ಯಳಿಗೆ ಯಾಕೆ ಹೇಳ್ಲಿಲ್ಲ? ಸ್ವಾರ್ಥಿ! ಇನ್ನು ನನ್ನ ರಹಸ್ಯ ಉಳಿದಿದ್ದೇನು?... ಸ್ವಲ್ಪ ಹಿಂದಕ್ಕೆ ತಿರುಗು... ಹಾಗೇ ಬಲಕ್ಕೆ ನೋಡು. ಹನ್ನೊಂದು ವರ್ಷದ ಹಿಂದೆ ನಾನು ಈ ಉಕ್ಕಿನ ತೋಳು, ಹೆಪ್ಪುಗಟ್ಟಿದ ತಲೆ ಬಳಸಿದ್ದು ಅಲ್ಲೇ..."

ಮೆಲ್ಲನೆ ಹಿಂದಕ್ಕೆ ತಿರುಗಿ ಬಲಕ್ಕೆ ನೋಡಿದ ಬರ್ನಾರ್ಡ್.

ಬಾಯಿ ತೆರೆದ ಕೂಪ! ನೀರಿನ 'ಪಚ್ ಪಚ್' ಬಡಿತದ ಸಪ್ಪಳ!... ಕುಸಿದು ನಿಶ್ಚೇಷ್ಟಿತನಾದ ಶತ್ರುಘ್ನಬಾಬು!!

ಕೂಪ ಬಳ್ಳನೆ ತುಂಬಿ ಸುತ್ತಲೂ ಕೋಡಿ ಹರಿಸಿತು. ನೀರಲ್ಲ.. ರಕ್ತದ ಹರಿತ! ರೊಂಯ್ ಗುಡುವ ಭೀಕರ ಮೊರೆತ!

"ನೀನು ಮಾಡಿದ ಕೊಲೆ ದೃಶ್ಯ ನನಗೆ ಯಾಕೆ ತೋರಿಸ್ತಿ? ನೀನು ಸತ್ತರೂ ಬೆನ್ನು ಬಿಡದ ನೆರಳು!" ತೊದಲಿದ.

ದೂರದಲ್ಲಿ ಸಿಮೆಂಟ್ ಕಂಬ ನೆಲಕ್ಕೆ ಬಿದ್ದ ಶಬ್ದ ಕೇಳಿತು, ಬರ್ನಾರ್ಡ್ ಮೈ ಬಿಗಿಸಿ ತಿರುಗಿದ. ಹೆಗಲು ಏಕಾಏಕಿ ಹಗುರವಾಯಿತು. ಭಾರವಾಗಿ ಅವಚಿ ಸವಾರಿ ಕುಳಿತಿದ್ದ ಸಂತುರಾಮ ಮಾಯವಾಗಿದ್ದ. ಕೆಲಸದಲ್ಲಿ ತೊಡಗಿದವರು ಸ್ವಲ್ಪವೂ ವಿಚಲಿತರಾಗಿರಲಿಲ್ಲ.

ಕೂಪದ ಮೇಲೆ ನೀರವತೆ ಹರಡಿತ್ತು. ಎದೆ ಇರಿಯುವ ರಾಗ ನಿಂತಿತ್ತು.

"ಆಹ್...!" ಕಣ್ಣು ಮುಚ್ಚಿ ಕತ್ತು ಸವರಿ ಸಮಾಧಾನದಿಂದ ಶರೀರದ ಉಸಿರನ್ನೆಲ್ಲ ಒಂದೇ ಸಾರಿಗೆ ಹೊರ ಹಾಕಿದ.

ಭ್ರಮೆ! ಕಣ್ಣಿನ, ಮಸ್ತಿಷ್ಕದ ಮಂಪರು ಹರಿದುಹೋಗಿತ್ತು.

ಸಿಮೆಂಟ್ ಬಣ್ಣ ಹಚ್ಚಿದ ಮನೆಯ ಕೋಣೆ ಅಚ್ಚುಕಟ್ಟಾಗಿತ್ತು. ಬರ್ನಾರ್ಡ್ ಷರಟು ಕಳಚಿ ರೋಮಭರಿತ ವಿಶಾಲ ಎದೆಯನ್ನು ಉಜ್ಜಿದ. ಮೇಜಿನ ನಿಲುವು ಕನ್ನಡಿಯಲ್ಲಿ ನೋಡಿಕೊಂಡು ಪೊದೆ ಗಡ್ಡ, ಮೀಸೆಗಳಲ್ಲಿ ಆಳವಾಗಿ ಬೆರಳುಗಳನ್ನು ಹರಿದಾಡಿಸಿದ.

ಕನ್ನಡಿಯಲ್ಲಿನ ಪ್ರತಿಬಿಂಬ ತನ್ನ ಮುಖಭಾವ ಬದಲಿಸುವ ಮೊದಲೇ ಕಣ್ಣುಗಳು ಮೊನಚಾದವು. ಸರಕ್ಕನೆ ಹಿಂದಕ್ಕೆ ತಿರುಗಿದ.

ವಿಶಾಲ ಕಪ್ಪು ನಾಗರ ಕಣ್ಣುಗಳೊಂದಿಗೆ ದೃಷ್ಟಿ ಘರ್ಷಿಸಿತು.

ಮೀನಾಕ್ಷಿ!

ಮೀನಾಕ್ಷಿಯ ತುಟಿಗಳು ಅರಳಿದವು. ರೆಪ್ಪೆಗಳು ಪಕಪಕ ಆಡಿದವು.

"ಆ ವಿಶಾಲ ಎದೆಗೆ ಸಾಟಿ ಇಲ್ಲ.... ಸೊಂಪಾಗಿ ಬೆಳೆಸಿದ ಆ ಗಡ್ಡ ಮೀಸೆಗಳ ಮರೆಯಲ್ಲಿ ಅಡಗಿರೊ ಕಥೆ ಅಗಾಧ."

ಇರಿತದಲ್ಲಿ ಧ್ವನಿಸಿದಳು.

ದೇಹದ ನಾಳಗಳಲ್ಲಿ ಹಿಮ ಹರಿದಾಡಿತು. ಬಾಹುಗಳನ್ನು ಚಾಚಿದ.

"ಮೀನಾಕ್ಷಿ! ಬರ್ನಾರ್ಡ್ ಎದುರಿಗೆ ಇಂತಾ ಮಾತಾಡೋರಿಗೆ..." ಅವನ

ಮಾತು ಅಲ್ಲಿಗೇ ಕತ್ತರಿಸಿ ತನ್ನ ಮಾತು ತೀಕ್ಷ್ಣವಾಗಿ ಬೆಸೆದಳು.

"ಮಾತಾಡೋರಿಗೆ ಎಂಟೆದೆ ಇರಬೇಕು, ನಿಜ. ನಿನ್ನ ಗಾಜಿನ ಬೆಂಕಿ ಕಣ್ಣು, ಕಲ್ಲು ಚಪ್ಪಡಿ ಎದೆ, ಉಕ್ಕಿನ ತೋಳು ಇವೆಲ್ಲ ನನ್ನ ಹದ್ದು ಕಣ್ಣುಗಳಿಗೆ ಹಳೆಯ ನೋಟಗಳು, ಬರ್ನಾರ್ಡ್ ಅನ್ನೊ ಒಂದು ಬದಲಿ ಹೆಸರು. ಮುಖದಲ್ಲಿ ಬೆಳೆಸಿರೊ ರೋಮದ ಕಾಡು ನನಗೆ ಖಂಡಿತ ಮೋಸ ಮಾಡೋದಿಕ್ಕೆ ಸಾಧ್ಯವಿಲ್ಲ, ಸಂತುರಾಮ..."

"ಸಂತುರಾಮ!"

ಕಣ್ಣು ಮುಚ್ಚಿ, ತೋಳು ಬಿಗಿಸಿ ನೀಳವಾಗಿ ಉದ್ಗರಿಸಿದ ಭೀಮಕಾಯ.

"ಹೌದು, ಸಂತುರಾಮ... ಹನ್ನೊಂದು ವರ್ಷಗಳ ಅಂತರ ದೊಡ್ಡದೇ ಆಗಿದ್ರೂ ತನ್ನ ಕಣ್ಣಿಗೆ, ಮಿದುಳಿಗೆ ಮೋಸದ ಹೊದಿಕೆ ಹೊದಿಸೋದಿಕ್ಕೆ ಪ್ರಯತ್ನಪಡೋರಿಗೆ ಎಂಟು ಮಿದುಳು ಇರ್ಬೇಕು."

ಬರ್ನಾರ್ಡ್ ಸತ್ತಿದ್ದ! ಸಂತುರಾಮ ಪುನರ್ಜನ್ಮ ಪಡೆದಿದ್ದ।

ಸೋಲಿನ ಹೂಂಕಾರ, ಕ್ರೋಧದ ಅಬ್ಬರ ಎರಡೂ ಕೂಡಿದ ಭೀಕರ ಕೂಗಿನೊಂದಿಗೆ ಸಂತುರಾಮ ಮುಷ್ಟಿ ಕೊಡವಿದ.

ಮೇಜಿನ ಸುಂದರ ನಿಲುವು ಕನ್ನಡಿ ಶತ ಚೂರುಗಳಲ್ಲಿ ಸಿಡಿದು ಬಿತ್ತು.

## ೧೨

ಐದು ಮಂದಿ ಕೆಲಸಗಾರರ ಗುಂಪೊಂದು ಓಡಿ ಬಂತು. ಅಬ್ಬರದ ಕೂಗು ಕೇಳಿಬಂದವರಿಗೆ ಕೋಣೆಯಲ್ಲಿ ಕಣ್ಣು ರಾಚುವಂತೆ ಕಂಡವನು ತಲೆ ತಗ್ಗಿಸಿ ನಿಂತ, ರೋಮಮಯ ವಕ್ಷಸ್ತಲದ, ಪೊದೆಮುಖದ ಮಧ್ಯ ವಯಸ್ಕ. ರಂಜನೆ ವೀಕ್ಷಿಸುವ ಪ್ರೇಕ್ಷಕಳಂತೆ ಗೋಡೆ ಒರಗಿದ್ದಳು ಮೀನಾಕ್ಷಿ. ನೆಲದ ಮೇಲೆ ಚೆಲ್ಲಾಪಿಲ್ಲಿಯಾಗಿ ಹರಡಿದ ಕನ್ನಡಿಯ ಮೊನಚು ಚೂರುಗಳು.

ಮೀನಾಕ್ಷಿ ಸ್ವಲ್ಪವೂ ವಿಚಲಿತಳಾಗದೆ ಮೇಲ್ವಿಚಾರಕಿಯ ಗಂಭೀರ ದನಿಯಲ್ಲಿ ಆಣತಿ ಕೊಟ್ಟಳು.

"ಅಬ್ಬಯ್ಯ, ಆ ಚೂರು ಆಯ್ದು ಹೊರಕ್ಕೆ ಹಾಕಿ ಹೊಸದೊಂದು ಕನ್ನಡಿ ತಂದಿಡು... ಓಡಾಡೋರ ಕೈಗೆ ತಾಕಿದರೆ ಬೀಳೊ ಹಾಗೆ ಮೇಜಿನ ತುದಿಗೆ ಕನ್ನಡಿ ಸ್ಟ್ಯಾಂಡ್ ಇಟ್ಟೋರು ಯಾರು?..... ಲಚ್ಚುಗೆ ಈ ತಿಂಗಳ ಸಂಬಳದಲ್ಲಿ ಕನ್ನಡಿ ಖರ್ಚು ಹಿಡಿತೀನಿ ಅಂತ ಹೇಳು... ನೋಡು, ಬಾತ್ ರೂಂನಲ್ಲಿ ಸೋಪು, ಟವೆಲ್ ಇಲ್ಲ."

ಅಬ್ಬಯ್ಯ ಚೂರುಗಳನ್ನು ಆಯ್ದು ಖಾಲಿಯಾದ ಕನ್ನಡಿ ಸ್ಟ್ಯಾಂಡ್ ಹಿಡಿದು ನಿಶ್ಯಬ್ದವಾಗಿ ಹೊರಬಂದ. ಸರಿದು ಹೋದ ಗುಂಪಿಗೆ ಅರ್ಥವಾಗದ ಸಂಗತಿಗಳು ಅವು... ಭೀಮಕಾಯ ಯಾರು? ಅಬ್ಬರದ ಕೂಗು ಏಕೆ ಬಂತು?

ಮೀನಾಕ್ಷಿಯ ನಗೆ ಮುಖ ಒಮ್ಮೆಗೇ ಬಿರುಸಾಯಿತು. ತನ್ನ ಹಿಂದೆ ಬಾಗಿಲು ಸರಿಸಿದಳು.

"ಸಂತುರಾಮ, ಕೊತ್ಕೊ. ಹುಲಿ ಊರಿನೊಳಕ್ಕೆ ನುಗ್ಗಿದ್ರೆ ಅದರ ಗತಿ? ಆಳಿಗೊಂದು ಕಲ್ಲೇಟು. ಹಿಂದೆ ರೋಷದ ಕೈಗೆ ಬುದ್ಧಿ ಕೊಟ್ಟು ಈ ಗತಿ ತಂದ್ಕೊಂಡೆ. ಇಷ್ಟಾದ ಮೇಲೂ, ಈ ವಯಸ್ಸಿನಲ್ಲಿ ಇಷ್ಟು ಕೋಪ ಇರೋದು ನೋಡಿ ನಿನ್ನ ಮೇಲೆ ಕನಿಕರ ಬರ್ತಿದೆ... ಎಲ್ಲಿ ನಿನ್ನ ಹೆಂಡತಿ ಸರೋಜ?"

ಅಧಿಕಾರವಾಣಿಯಲ್ಲಿ ಪ್ರಶ್ನೆ ಬಂತು.

"ಕರುಳು ಬೇನೆಯಿಂದ ತೀರಿ ಹೋದ್ಲು."

ದೊಡ್ಡ ಶರೀರದಿಂದ ಸೋಲು, ನೋವು ಬೆರೆತ ಉತ್ತರ ಬಂತು.

"ಹನ್ನೊಂದು ವರ್ಷದ ಹಿಂದೆ ಆ ರಾತ್ರಿ ನಡೆದಿದ್ದು ನನ್ನ ಕಣ್ಣ ಮುಂದೆ ಈಗ ನಡೆದ ಹಾಗೆ ನಿಂತಿದೆ. ಮಾಮ ಆಕ್ಸಿಡೆಂಟ್‌ನಲ್ಲಿ ಸತ್ತು ಒಂದು ದಿನವಷ್ಟೇ ಕಳೆದಿತ್ತು. ನೀನು, ನಿನ್ನ ಹೆಂಡತಿ ನನಗೆ ಮೋಸ ಮಾಡಿ ಪದ್ಮಾವತಿನ ಒಯ್ದುಬಿಟ್ರಿ. ನಿನ್ನ ಹಿಡಿಯೋದಿಕ್ಕೆ ಓಡಿ ಬಂದೆ. ಶತ್ರುಘ್ನಬಾಬುನ ನೀರಿನ ತೊಟ್ಟಿಯಲ್ಲಿ ಮುಳುಗಿಸಿ ಓಡ್ತಿದ್ದೆ ನೀನು. ಅವನು ಸತ್ತಿದ್ದ! ದಾರಿ ಉದ್ದಕ್ಕೂ ರಕ್ತದ ತೊಟ್ಟುಗಳು. ನಿನ್ನ ಕೆನ್ನೆಗೆ ಪೆಟ್ಟು ಬಿದ್ದಿರಬೇಕು. ಅದನ್ನ ಮರೆ ಮಾಡೋದಿಕ್ಕೆ ಈ ಗಡ್ಡ, ಮೀಸೆ ಬೆಳೆಸಿರೋದು.... ನೀನು ಚಿಕ್ಕ ಮಾವನ್ನ ಕೊಲೆಮಾಡಿ ಪದ್ಮಾವತೀನ ಕದ್ದೊಯ್ದಿದ್ರಿಂದ ಏನು ಪ್ರಯೋಜನ ಆಯ್ತೂಂತ ನನಗೆ ಅರ್ಥ ಆಗ್ಲಿಲ್ಲ...."

ಉತ್ತರಕ್ಕೆ ಕಾದಳು. ಮೌನಿಯನ್ನು ಒತ್ತಾಯಿಸದೆ ಮುಂದೆ ಹೇಳಿದಳು.

"ವಕೀಲ ಪಿತಾಪುರಂ ಭಾವಿಸಿದ್ದು ನೀನು ಪದ್ಮಾವತಿನ ಬಳಸ್ಕೊಂಡು ಬ್ಲಾಕ್ ಮೇಲ್ ಮಾಡ್ತಿಯಾಂತ. ವರ್ಷಗಳು ಕಳೆದ್ರೂ ನೀನು ಹಣಕ್ಕೆ ಬೆದರಿಕೆ ಹಾಕ್ಲಿಲ್ಲ. ಹುಡುಗೀನ ತಂದುಬಿಡ್ಲಿಲ್ಲ. ನಾನು, ಕಮಲಹಾಸ ಎಷ್ಟೋ ಊರು ಸುತ್ತಿದ್ದಾಯ್ತು. ನಿಮ್ಮ ಸುಳಿವು ಸಿಗ್ಲಿಲ್ಲ. ಈಚೆಗೆ ಮೂರು ತಿಂಗಳ ಹಿಂದೆ ಬೆಂಗಳೂರಿನಲ್ಲಿ ಆಕಸ್ಮಿಕವಾಗಿ ತುಂಬು ತಲೆಗೂದಲು ಹುಡುಗಿನ ಸಂಗೀತ ಶಾಲೆಯಲ್ಲಿ ನೋಡ್ದೆ. ಆಸಕ್ತಿ ಕೆರಳ್ತು. ನಾನೂ ಸಂಗೀತ ಕಲಿಯೊ ನೆಪದಲ್ಲಿ ಶಾಲೆ ಸೇರ್ದೆ. ಬರ್ನಾರ್ಡ್ ಹೆಸರು ಕೇಳಿ ಕ್ರಿಶ್ಚಿಯನ್ ಅಂತ ನಿರಾಶೆ ಆಯ್ತು. ಹೆಸರಾಂತ ಲೇಖಕ ಕಾರ್ತೀಕನ ಸಾಕು ಹುಡುಗಿ ಅಂದಮೇಲೆ ಸಂಶಯ ದೂರ ಆಯ್ತು. ಹಾರಂಗಿಯಲ್ಲಿ ವಿವರ ಸಿಗಲಿಲ್ಲ. ನಮ್ಮಲ್ಲಿ ಇದ್ದ ಹಳೇ ಫೋಟೋಗಳನ್ನ ತೋರಿಸ್ದಾಗ ಸೌಭಾಗ್ಯ

ಒಂದರಗುರುತೂ ಹಿಡಿಲಿಲ್ಲ. ನೀನು ಮೂರು ಸಾರಿ ಮಿಂಚಿ ಹೋದೆ. ಆಗ ಸಂಶಯ, ಆಸಕ್ತಿ ಏರ್ತು. ಕಡೆಗೆ ರೋಸಿ ಹೋಗಿ ಏನು ತೀರ್ಮಾನಕ್ಕೆ ಬಂದಿದ್ದಾಯ್ತು ಗೊತ್ತೆ?.... ಸೌಭಾಗ್ಯನ್ನ ಬೇಗಂಚೆರ್ಲಾಗೆ ತಂದು ಇವಳೇ ಪದ್ಮಾವತಿ ಅಂತ ಸಾಧಿಸಿಬಿಡೋಣ ಅನ್ನೊ ನಿರ್ಧಾರ! ನಿನ್ನ ಗುರುತು ಹತ್ತಿದ ಮೇಲೆ ನಿಜವಾದ ಪದ್ಮಾವತಿಯೇ ಬಂದಿರೋದು ಖಚಿತವಾಗಿ ನಮ್ಮ ಕೆಲಸ ಸುಸೂತ್ರವಾಯ್ತು ಸಂತು, ಆ ಹುಡುಗಿ ಪದ್ಮಾವತಿ ತಾನೆ?"

ಇನ್ನೂ ಕ್ಷಯಿಸಿದ ಶಂಕೆಯಲ್ಲಿ ಅವನ ಮುಖದ ಹತ್ತಿರ ಬಂದು ಕುಟುಕುವಂತೆ ಹೇಳಿದಳು.

ಅವನು ಮುಖ ಎತ್ತಿದ. ಮೊದಲಿನ ಭೀಷಣತೆ ಇರಲಿಲ್ಲ.

"ಸಂಶಯ ಯಾಕೆ ಬಂತು? ಶ್ರಮ, ರಹಸ್ಯದ ಕಥೆ ಹೇಳೊ ಈ ಮುಖ ಅದನ್ನ ಖಚಿತಪಡಿಸೋದಿಲ್ಲವೆ? ಈ ಸೌಭಾಗ್ಯ ಚಂದ್ರಬಾಬು ಮಗಳೇ, ಮೀನಾಕ್ಷಿ. ನೀನು ನನ್ನ ಗುರುತು ಹಿಡಿದು ಪದ್ಮಾವತೀನ ಕಾಣೋದ್ರಲ್ಲಿ ಗೆಲುವು ಸಾಧಿಸಿರಬೋದು. ಆದರೆ ನೀನು ಹುಡುಗಿಗೆ ರಕ್ಷಣೆ, ಪೋಷಣೆ ಕೊಡಲಿಲ್ಲ. ಅವಳನ್ನ ಈ ತನಕ ನಾನು ಕಾಪಾಡಿರೋದಿಕ್ಕೆ ಸಾಕ್ಷಿ ರುಜುವಾತು ಇವೆ, ಅವೆಲ್ಲಕ್ಕೂ ಹೆಚ್ಚಾಗಿ ನಾನು ಸೌಭಾಗ್ಯಳಿಗೆ....."

ಅಧಿಕಾರಯುತ ಬಿರುಸಿನ ಉತ್ಸಾಹದಲ್ಲಿ ಹೊರಗಡೆಹಲಿದ್ದ ಮಾತನ್ನು. ಸಕಾಲದಲ್ಲಿ ತಡೆದುಕೊಂಡು. ಸೌಭಾಗ್ಯಳಿಗೆ ಕಾರ್ತೀಕನೊಂದಿಗೆ ಮದುವೆ ಮಾಡಿಸಿದ ವಿಷಯ ತಿಳಿಸಲು ಇದು ಸಕಾಲವಲ್ಲ. ರಹಸ್ಯ ಕಾಪಾಡಲು ತಾನೇ ಕಾರ್ತೀಕನಿಗೆ ಹೇಳಿರುವ ಮಹತ್ತರ ಸಂಗತಿ. ಮೀನಾಕ್ಷಿಯ ಪ್ರಚಂಡ ಮಿದುಳಿನಲ್ಲಿ ಹೊರಳಾಡುವ ವ್ಯೂಹ ತಿಳಿಯಲಾಗದು.

"ಹುಂ, ಏನು ಸೌಭಾಗ್ಯಳಿಗೆ?"

"ಏನೂ ಇಲ್ಲ, ಅವಳನ್ನ ಈವರೆಗೆ ಪೋಷಿಸಿದೋನು ನಾನು ಅನ್ನೊ ವಿಷಯಕ್ಕೆ ನೀನೂ ಬೆಂಬಲ ಕೊಡಬೇಕು.

ಅವಳಲ್ಲಿ ತುಣುಕು ಬದಲಾವಣೆಯೂ ಕಾಣಲಿಲ್ಲ. ಅದೇ ಹಸನ್ಮುಖ.

"ವಕೀಲರ ಮುಂದೆ ನಾನೇ ಅದನ್ನ ಸಂತೋಷದಿಂದ, ಮನಸಾರೆ ಹೇಳ್ತೀನಿ. ಅವಳನ್ನ ಮಗಳಿಗಿಂತ ಹೆಚ್ಚಿನ ಆಸ್ಥೆಯಿಂದ ಕಾಪಾಡಿದೀಯ. ನೀನು ಈವರೆಗೆ ಬ್ಲಾಕ್‌ಮೇಲ್ ಮಾಡದೆ ಇರೋದೆ ಅದನ್ನ ಖಚಿತಪಡಿಸುತ್ತೆ. ನೀನು, ಕಾರ್ತೀಕ ಸಲ್ಲಿಸಿರೊ ಸೇವೆಗೆ ಎಷ್ಟೇಟು ಪ್ರತಿಫಲ ಕೊಡುತ್ತೆ. ಹಾಂ, ಒಂದು ವಿಷಯ. ಆ ಹುಡುಗಿಗೆ ತಾನು ಚಂದ್ರಬಾಬು ಮಗಳು ಅನ್ನೋದು ಗೊತ್ತಾಗಿದೆಯೆ?"

"ಇಲ್ಲ"

"ಸದ್ಯಕ್ಕೆ ಗೊತ್ತಾಗೋದು ಬೇಡ... ಸಂತುರಾಮ, ಹೊರಗೆ ಹೋಗೋಣ. ಕೆಲಸ ಮಾಡ್ತಾ ಇರೊ ಜನಕ್ಕೆ ನಮ್ಮ ವ್ಯವಹಾರ ಏನೂಂತ ತಲೆ ಕೆಡೋಡು ಬೇಡ."

ಸಂತುರಾಮ ಷರಟು ಏರಿಸಿ ಮೇಲೆ ಸರಿಪಡಿಸಿಕೊಂಡ. ಮೀನಾಕ್ಷಿ ಅವನನ್ನು ಸಿಮೆಂಟ್ ಕಾಮಗಾರಿ ನಡೆಯುತ್ತಿದ್ದ ಭಾಗಗಳ ಕಡೆ ಕರೆದೊಯ್ಯುತ್ತಾ ಹೇಳಿದಳು.

"ಸಂತುರಾಮ ಅನ್ನೋದು ಈ ಭಾಗದಲ್ಲಿ ಸತ್ತು ಹೋಗಿರೊ ಪದ ನಿನ್ನ ಬರ್ನಾರ್ಡ್ ಅಂತಲೇ ಕೂಗಬೇಕು. ಕಮಲಹಾಸ ನಿನ್ನ ಗುರ್ತಿಸಿಲ್ಲ. ಹೆದರ್ಬೇಡ, ನಿನ್ನ ರಹಸ್ಯ ನಾನು ಕಾಪಾಡ್ತೀನಿ. ಬರ್ನಾರ್ಡ್. ಈಗ ಇಲ್ಲಿ ಬಹಳ ಬದಲಾವಣೆ ಕಾಣ್ತಿವೆ. ಹಳೆ ಕೆಲಸಗಾರರು ಒಬ್ಬರೂ ಇಲ್ಲ. ನೆಲ ಬಾವಿಗಳು ವಿಸ್ತಾರ ಆಗಿವೆ, ಹಳೆ ನೀರು ಹೊರ ಹಾಕೋದಿಕ್ಕೆ ಕವಾಟ ಜೋಡ್ಸಿದಾರೆ, ಹಿಂದೆ ಸಿಮೆಂಟ್ ಬಳೆಗಳು, ವೆಂಟಿಲೇಟರ್‌ಗಳು ತಯಾರಿಸ್ತಿದ್ರು. ಈಗ ಆಂಧ್ರ ಸರ್ಕಾರಕ್ಕೆ ಕಂಬಗಳು, ಒಳ ಚರಂಡಿ ಕೊಳವೆ, ಟ್ಯಾಂಕುಗಳು ತಯಾರಿಸಿಕೊಡೊ ಕಾಂಟ್ರಾಕ್ಟ್ ತೊಗೊಂಡಿದೀವಿ. ಎಲ್ಲಾ ಕೆಲಸಕ್ಕೂ ಬೇರೆ ಬೇರೆ ಮ್ಯಾನೇಜರ್ ಇದಾರೆ. ಒಟ್ಟಿನ ಉಸ್ತುವಾರಿ ನೋಡಿಕೊಳ್ಳೋರು ನಾನು, ಕಮಲಹಾಸ...."

ಅವಳು ಹೆಮ್ಮೆಯಿಂದ ಆ ವಿವರಣೆ ಕೊಡುತ್ತಿರುವುದೇಕೆಂದು ತಿಳಿಯದು. ಬಹುಶಃ ಅವಳ ಅಧಿಕಾರ, ಹೆಚ್ಚಳಿಕೆಯ ಪ್ರದರ್ಶನ ಎನಿಸಿತು.

"ಎಸ್ಟೇಟು ತುಂಬ ದಕ್ಷತೆಯ ಕೈವಾಡ ಕಾಣ್ತಿದೆ"

ಹೊಗಳಿಕೆಯ ಮಾತು ಎಂದೂ ಆಡದವ ತಾನು ಒಪ್ಪಿಸಿದ ಮಾತಿನಿಂದ ತನ್ನ ಮೇಲೇ ಬೇಸರಗೊಂಡ. ಪರಾಧೀನ! ಮೀನಾಕ್ಷಿ ತನ್ನ ಬದುಕಿನ ರಹಸ್ಯ ತಿಳಿದಿದ್ದು, ತಾನು ಅವಳ ಸೂತ್ರದ ಬೊಂಬೆ ಎನಿಸಿದಾಗ ಎದೆಯಲ್ಲಿ ಸೂಜಿ ಆಡಿತು.

"ವರ್ಷಕ್ಕೆರಡು ಸಾರಿ ವಕೀಲ ಪಿತಾಪುರಂ ಇಲ್ಲಿನ ವಹಿವಾಟುಗಳ ಮೇಲೆ ಕಣ್ಣು ಆಡಿಸಿ ಹೋಗ್ತಾರೆ. ನಿಮಿಷದ ಬಿಡುವಿಲ್ಲದೋರು ಅವರು."

ಚಿಂತಿತ ಆಕಾಶಕ್ಕೆ ತಲೆ ಎತ್ತಿದ... ತೊಡಕು?"

"ಪಿತಾಪುರಂ ಕೈವಾಡ ಯಾಕೆ ಉಳಿದಿದೆ ಇಲ್ಲಿ?"

"ಚಂದ್ರಬಾಬುಗೆ ಕುಟುಂಬ ಮಿತ್ರ, ಸಲಹೆಗಾರ ಇದ್ದೋರು ಅವರೊಬ್ಬರೇ. ಬಾಬುಗಾರು ಇದ್ದಕ್ಕಿದ್ದ ಹಾಗೆ ಸತ್ತಿದ್ದು ಅವರಿಗೆ ತಬ್ಬಿಬ್ಬಾಯ್ತು. ಎಸ್ಟೇಟಿನ ಹಕ್ಕುದಾರಿಕೆ ಸ್ಥಾಪಿತವಾಗೊವರೆಗೆ ಹೀಗಿರಲಿ ಅಂತ ಸಲಹೆ ಕೊಟ್ಟೋರು ಅವರೇ. ನಾನು ಮ್ಯಾನೇಜರ್ ಸಹಕಾರದಿಂದ ವ್ಯವಹಾರ ನೋಡಿಕೊಳ್ಳೋದು. ನಮ್ಮ ಕಡಿವಾಣ ವಕೀಲರು ಹಿಡಿದುಕೊಳ್ಳೋದು."

ತಲೆಯಲ್ಲಿ ಭ್ರಮಣ ಸಾಗಿತು. ಚಂದ್ರಬಾಬುವಿನ ಉಯಿಲು ಪಿತಾಪುರಂ ವಶದಲ್ಲಿದೆ! ಆಸ್ತಿಯ ವಿಷಯದಲ್ಲಿ ಅವನದು ಅತಿ ಮುಖ್ಯ ಪಾತ್ರ.

"ಪದ್ಮಾವತಿನ ಪತ್ತೆ ಮಾಡೋದಿಕ್ಕೆ ವಕೀಲರು ಯಾಕೆ ಪ್ರಯತ್ನ ಮಾಡ್ಲಿಲ್ಲ?"

"ಪೋಲೀಸ್ ಕಂಪ್ಲೇಂಟ್ ಕೊಟ್ರು. ಪದ್ಮಾವತಿಯ ಪ್ರಾಣಕ್ಕೆ ಅಪಾಯ ಅಂತ ಹೆಚ್ಚಿನ ಒತ್ತಡ ಹಾಕ್ಲಿಲ್ಲ. ವಕೀಲಬಾಬುಗೆ ವಿರಾಮವೂ ಇರಲಿಲ್ಲ."

ವಿಷಯದ ಬದಲಾವಣೆ ಕಂಠ ಇಳಿಸಿದಳು.

"ಸಂತುಮಾಮ, ನಿನ್ನ ಮೇಲೆ ನನಗೆ ತುಂಬಾ ಗೌರವ, ಅಭಿಮಾನ. ನಿನಗೆ ಜ್ಞಾಪಕ ಮಾಡ್ತಿದೀನಿ... ನಾನು ಬೆಜವಾಡದಿಂದ ಪರೀಕ್ಷೆ ಮುಗಿಸಿ ಬಂದಿದ್ದೆ. ಕಾಮುಕ ಶತ್ರುಘ್ನಬಾಬು ನನ್ನ ಹಿಂದೆ ಸುತ್ತಾಡಿದ್ದ. ಕೆಣಕ್ತಿದ್ದ. ಗಿಡಗನ ಕಣ್ಣು! ಅವನನ್ನ ಮದುವೆ ಆಗ್ತೀಯಾಂತ ಚಂದ್ರಬಾಬು ತಮಾಷೆಗೆ ಕೇಳ್ತಿದ್ರು. ಒಂದು ಸಾರಿ ಶತ್ರುಘ್ನ ಸೇತುವೆ ಹತ್ರ ನನ್ನ ಹಿಡ್ಕೊಂಡಾಗ ನೀನು ಎಲ್ಲಿಂದಲೋ ಒಂದು ಅವನ್ನ ತಳ್ಳಿಬಿಟ್ಟೆ. ಶತ್ರು ಉರುಳಿ ನೀರಿನ ತೊಟ್ಟಿಯೊಳಕ್ಕೆ ಬಿದ್ದಿದ್ದ.... ಆದರೆ ನಿನ್ನ ಕೈಗೇ ಸಿಕ್ಕಿ ನೀರಿನ ತೊಟ್ಟಿಯಲ್ಲೇ ನಿಜವಾಗಿ ಮುಳುಗಿ ಸಾಯ್ತಾನೆ ಅಂತ ಯಾರಿಗೆ ಗೊತ್ತಿತ್ತು?"

ಮೆದು ನಗೆಯಾಗಿ ಹರಿಯಿತು ವ್ಯಂಗ್ಯ.

"ಕರ್ಮ! ಹಾಗಾಗತ್ತೇಂತ ಕಲ್ಪನೆಗೂ ಬಂದಿರಲಿಲ್ಲ."

ಪಶ್ಚಾತ್ತಾಪ ಧ್ವನಿಸಿತು.

"ಪದ್ಮಾವತಿಗೆ ಮದುವೆ ಮಾಡೊ ಯೋಚನೆ ಯಾಕೆ ಬರ್ಲಿಲ್ಲ?"

ಪ್ರಶ್ನೆ ನಯವಾಗಿ ಹರಿದಿತ್ತು. ಯಾವುದೊ ಮೂಲ ಶೋಧಿಸುವ ಕುಹುಕತನದ ವಾಸನೆ ಅದರಲ್ಲಿ ಕಂಡಿತು. ಎದೆ ಅದುರಿತು.

ಸರಿದು ಹೋಗದ ಚಿತ್ರಗಳು. ಬಡತನ, ಆತುರ, ಕನಸುಗಳಿಂದ ಸೃಜಿತವಾದ ಮದುವೆ.... ಬೆದರಿಕೆಗೆ ಮಣಿದ ಕಾರ್ತೀಕ... ವಿಧೇಯತೆಯಿಂದ ತಲೆ ತಗ್ಗಿಸಿದ ಸೌಭಾಗ್ಯ.

ಹೃದಯ ಹಿಂಡಿ ಎಚ್ಚರಿಕೆಯಿಂದ ಉತ್ತರಿಸಿದ.

"ಹದಿನಾರು ಮುಟ್ಟುತ್ಲೇ ಹೊಳಗೆ ಹಾಕಿದ ಹಾಗೆ! ಮದುವೆ ಯೋಚನೆ ಹಚ್ಕೊಳ್ಲಿಲ್ಲ... ಒಂದಲ್ಲ ಒಂದು ದಿನ ಅವಳ್ನ ತಂದೆ ಮನೆಗೆ ಸೇರಿಸೋದು ಇದ್ದೇ ಇತ್ತು. ಆಮೇಲೆ ಅವಳಿಗೆ ಶ್ರೀಮಂತ ವಿವಾಹ ಇದ್ದೇ ಇದೆ."

ಅವನ ಮುಖ ನೋಡಿದವಳು ಮೋಡಗಳತ್ತ ಕಣ್ಣು ಹರಿಸಿದಳು. ನಿಲುಗಡೆ ಕಾಣದ ಅತೃಪ್ತ ದೃಷ್ಟಿ!

"ತಂದೆ ಮನೆಗೆ ಅವಳನ್ನ ಏಕಾಏಕಿ ಈಗ ಕರೆತಂದದ್ದು ಯಾಕೆ?"

ಮತ್ತೆ ಶೋಧನೆಯ ಪ್ರಶ್ನೆ! ಹೊಗೆ ತುಂಬಿದ ಮುಚ್ಚು ಕೋಣೆಯಿಂದ ಮುಕ್ತಿ? ರಹಸ್ಯದ ರಕ್ಷಣೆಗೆ ಸುಳ್ಳು, ಮುಚ್ಚುಮರೆ, ಮುಖವಾಡ, ರಕ್ಷಣೆಯ ಆಳ ದಿನಂಪ್ರತಿ ಹೆಚ್ಚಿ ಅದರಲ್ಲೇ ತನ್ನ ಮುಳುಗಡೆ.

ಉತ್ತರ ಅದಾಗಿ ಬಂದು ರಕ್ಷಿಸಿತು.

"ಸೌಭಾಗ್ಯಳಿಗೆ ಯಾವುದೋ ಹುಡುಗನ ಸ್ನೇಹ ಅಂತ ಗೊತ್ತಾಯ್ತು. ಪಿಯಾನೊ ಬಾರಿಸೊ ಹೃದ! ಸ್ನೇಹ ವಿಪರೀತಕ್ಕೆ ಹೋಗೋ ಮೊದಲು ನನ್ನ ಕರ್ತವ್ಯ ಪೂರೈಸಬೇಕು ಅನ್ನಿಸ್ತು."

ನಡುವಿಗೆ ಕೈಯಿಟ್ಟು ನಿಂತಳು. ಪಿಯಾನೊ ವಾದಕ? ತಾನೇ ಸೌಭಾಗ್ಯಳಿಗೆ ಜೊತೆಗೂಡಿಸಿದ ಸುಧಾಕರ.

"ಅವಳ ಸ್ನೇಹಿತ ಯಾರೂಂತ ಕಾರ್ತೀಕನಿಗೆ ಗೊತ್ತಿತ್ತು."

"ಹೌದು, ಕಾರ್ತೀಕನಷ್ಟು ತಣ್ಣನೆ ರಕ್ತ ನನ್ನ ಮೈಯಲ್ಲಿಲ್ಲ."

ಅವಳ ಮೈ ರಕ್ತದ ಕಾವು ಏರಿತು.

"ನೀನು ಆ ಹುಡುಗನನ್ನ ನೋಡಿಲ್ಲವೆ?"

"ನೋಡ್ದೆ. ನೋಡೋದಿಕ್ಕೆ ಲಕ್ಷಣವಾಗಿದ್ದಾನೆ. ಜವಾಬ್ದಾರಿ ಹೊರೋ ಲಕ್ಷಣ ಕಾಣ್ಲಿಲ್ಲ.... ಕಾರು ಕಲಿಸೊ ನೆಪದಲ್ಲಿ ಸ್ನೇಹಿತೆ ಮೇಲೆ ಕಾಮ ಚೇಷ್ಟೆ ಪ್ರಾರಂಭಿಸಿದ್ದ. ಒಂದು ಚುರುಕು ಮುಟ್ಸಿದೀನಿ."

ರೂಪ ಸರ್ಪಿಣಿಯ ಮುಖ ಬಿರುಸಾಯಿತು.

"ಮಿದುಳು ಮಂಕಾದ್ರೆ ಕೈ ಮುಂದು! ಕೊಲೆಗಾರ ಅನ್ನೋದು ಯಾಕೆ ಮರೆತು ಹೋಗತ್ತೆ? ಪೊಲೀಸ್‌ಗೆ ಬೇಕಾಗಿರೊ ಮನುಷ್ಯ ಇರಬೇಕಾದ ರೀತಿಯೇ ಇದು?... ನಾನು ಹೇಳಿದ ಹಾಗೆ ಕೇಳಿಕೊಂಡು ಇರೋದಾದ್ರೆ ನಿನ್ನ ರಹಸ್ಯ ಕಾಪಾಡ್ತೀನಿ. ಇಲ್ಲದಿದ್ರೆ ನಿನ್ನ ದಾರಿ ನಿನಗೆ."

ಚೆಲುವಿನ ಮರೆಯಿಂದ ಸೆಟೆದು ನಿಂತ ಭೀಷಣತೆ ಅವನನ್ನು ತಬ್ಬಿಬ್ಬಾಗಿಸಿತು. ಹೆಡೆ ಎತ್ತಿ ಬುಸುಗುಟ್ಟಿದ ಸ್ವಾಭಿಮಾನವನ್ನು ಅತಿ ಕಷ್ಟದಿಂದ ತಟ್ಟಿ ಮಲಗಿಸಿದ.

ತಗ್ಗಿನ ಗಾಳಿಯಲ್ಲಿ 'ಚಿಣಿ ಚಿಣಿ' ನಾದ ತೇಲಿ ಹೋಗುತ್ತಿತ್ತು. ದ್ರಾಕ್ಷಿ ತೋಟದ ಹುಲ್ಲು ಹಾಸಿನ ಮೇಲೆ ಸೀಳು ಕಲ್ಲು ಒರಗಿ ಕಾರ್ತೀಕ ಬುಲ್ ಬುಲ್ ತರಂಗ್ ನುಡಿಸುವುದರಲ್ಲಿ ತಲ್ಲೀನನಾಗಿದ್ದ.

ಚುರುಕು ಬೆರಳುಗಳ ಸರಿದಾಟ ನಿಂತಿತು. ಸಾವರಿಸಿ ಕುಳಿತು ಎದುರು ನಿಂತವನ ಮುಡಿಯವರೆಗೆ ದೃಷ್ಟಿ ಏರಿಸಿ ಕುಳಿತುಕೊಳ್ಳಲು ಸೌಮ್ಯವಾಗಿ ಸೂಚಿಸಿದ.

"ಎರಡು ಸಾರಿ ಸದ್ದು ಮಾಡ್ದೆ, ಕಾರ್ತೀಕ. ಇದು ಹುಚ್ಚು ಹಿಡಿಸೋ ವಾದ್ಯ ಅಂತ ಗೊತ್ತಿರಲಿಲ್ಲ."

ಸಂತುರಾಮ ಕೈಲಿದ್ದ ಬೆತ್ತದ ಕಡ್ಡಿಯಿಂದ ವಾದ್ಯವನ್ನು ಮೆಲ್ಲನೆ ತಟ್ಟಿ ಸೀಳು ಕಲ್ಲು ಒರಗಿ ನಿಂತ.

"ಇದು ಪೋಲಿಗಳ ವಾದ್ಯ ಅಂತ ನಮ್ಮಮ್ಮನ ಹಾಗೆ ನೀನೂ ಹೇಳಿದ್ದೆ. ಅಭಿಪ್ರಾಯ ಬದಲಾಯಿಸಿದ್ದಕ್ಕೆ ವಂದನೆಗಳು. ಅಮಲು ಹತ್ತಿಸೋ ವಾದ್ಯ. ಸದ್ಯಕ್ಕೆ ಬೇಸರ ಬಿಡಲಿ ಅಂತ ಕೈ ಹಾಕಿದ್ದೆ... ಬರ್ನಾರ್ಡ್, ಇದು ಸ್ಫೂರ್ತಿಯ ತಾಣ ಅಲ್ಲ. ಉಸಿರು ಕಟ್ಟಿಸೊ ವಾತಾವರಣ, ಹಣದ ವಾಸನೆ! ದಿಗ್ಬಂಧನದಲ್ಲಿ ರಾಜಾತಿಥ್ಯ. ನನ್ನ ಎಚ್ಚರಿಕೆಯಿಂದ ಗಮನಿಸ್ತಾ ಇದಾರೆ ಇಲ್ಲಿ. ನಾನು ಪಂಜರದ ಗಿಣಿ."

"ನನ್ನ ಹಂಚಿಕೆ ಏರುಪೇರಾಗಿದೆ. ಹೇಳಲಾಗದ ಹಿಡಿತಕ್ಕೆ ಸಿಕ್ಕಿರೋ ಸೂತ್ರದ ಬೊಂಬೆ. ಹಲ್ಲು ಮುರಿದ ಹಾವು."

"ಗಿಣಿಗೆ ಸ್ವಾತಂತ್ರ್ಯ ಬೇಕಾದ್ರೆ, ಹಾವಿಗೆ ಮತ್ತೆ ಹಲ್ಲು ಹುಟ್ಟ ಬೇಕೂಂದ್ರೆ ಈ ಪ್ರದೇಶದಿಂದ ಮೊದಲು ಹೊರಟುಬಿಡಬೇಕು."

"ಓಹ್, ನನಗಿರೊ ತಾಳ್ಮೆ ನಿನಗಿಲ್ಲ, ಕಾರ್ತೀಕ, ಇಷ್ಟು ವರ್ಷ ಶ್ರಮಪಟ್ಟಿರೋದೆಲ್ಲ ನಿಮಿಷದಲ್ಲಿ ತೊಳೆದುಹೋಗುತ್ತೆ. ನನ್ನಿಂದ ಇಂಥಾ ಮಾತು ಆಡಿಸೊ ಚಪಲವೆ ನಿನಗೆ?"

"ಬರ್ನಾರ್ಡ್, ಮಗುಗೆ ಆಸೆಯ ಚಂದ್ರ ತೋರಿಸೊ ಹಾಗೆ ನನಗೆ ಆಮಿಷ ಒಡ್ಡಬೇಡ. ನಿನ್ನ ಮಾತಿಗೆ ಪ್ರತಿ ಆಡದೆ, ಕಾದಂಬರಿಗೆ ಒಂದು ತಿರುವು ಕೊಡೊ ಹುಚ್ಚಿನಲ್ಲಿ, ಪರಿಣಾಮ ತಿಳಿಯದೆ ಬಂದಾಯ್ತು... ನಾನು ಸೌಭಾಗ್ಯಳ ಗಂಡ ಅನ್ನೋದು ಗೊತ್ತಾದ್ರೆ ಈ ಸರಹದ್ದಿನಲ್ಲಿ ಏರುಪೇರು, ತುಸು ಕಲ್ಲೋಲ ಆಗಬೋದು. ಇಲ್ಲಿಯ ಮಂದಿಯಲ್ಲಿ ಮಿಶ್ರ ಪ್ರತಿಕ್ರಿಯೆ! ಆಶ್ಚರ್ಯ, ನೋವು, ನಿರಾಶೆ, ಜಿಗುಪ್ಸೆ ಎಲ್ಲದರ ಪ್ರದರ್ಶನ. ಸೌಭಾಗ್ಯಳಿಗೂ ತಾನು ಚಂದ್ರಬಾಬು ಮಗಳು ಅನ್ನೋದು ಗೊತ್ತಾದರೆ ಆಘಾತ ತಟ್ಟಬೋದು. ಈ ಎಲ್ಲಾ ಹಗರಣಗಳನ್ನ ನೋಡಬೇಕೆ? ಯಾವುದೊ ನಿಶ್ಶಕ್ತ ಗಳಿಗೆಯ ಭಾವನೆ, ಕಲ್ಪನೆಯಿಂದ ಅವಳ ಮುಂದೆ 'ಬಿಡುಗಡೆ' ಪದ ಬಳಸಿದ್ದು ತಪ್ಪಾಯ್ತು, ಈಗ ಜಿಜ್ಞಾಸೆ ಇಲ್ಲ, ಸೌಭಾಗ್ಯ ನನ್ನ ಹೆಂಡತಿ ಅಂತ ಮನಃಪೂರ್ವಕವಾಗಿ ಒಪ್ಪಿಕೊಂಡಿದೀನಿ. ಅವಳು ಇಲ್ಲಿನ ಆಸ್ತಿಗೆ ಬಾಧ್ಯಸ್ಥೆ ಅನ್ನೋದು ತಿಳಿಯದೆ ಇರೋದ್ರಲ್ಲಿ ಅವಳ ಸುಖ ಇದೆ... ನಾನು ಸಂನ್ಯಾಸಿ ಅಲ್ಲ. ಆದರೂ ಈ ಆಸ್ತಿ ಬೇಡ ಅನ್ನಿಸುತ್ತೆ. ಸ್ವಲ್ಪ ದೊಡ್ಡ ಮನಸ್ಸು ಮಾಡು, ಬರ್ನಾರ್ಡ್. ನಾವು ಇಲ್ಲಿಂದ ಪ್ರವಾಸಿಗಳ ರೀತಿಯಲ್ಲೇ ಹೊರಟುಬಿಡೋಣ."

ಮೂಕನಾದ ಸಂತುರಾಮ. ಇಂತಹ ವಿರಕ್ತತೆ ಅನಿರೀಕ್ಷಿತ ಹಾಗೂ ಅತಿ

ನಿರಾಶಾದಾಯಕ. ಅವನ ಎದುರಿನಲ್ಲಿ ಭಾರವಾಗಿ ಕುಳಿತ. ಹಿಡಿಯಲ್ಲಿನ ದ್ರಾಕ್ಷಿಗೊಂಚಲು ಜೊಳ್ಳನೆ ದ್ರವವಾಗಿ ಸುರಿದು ಮನದ ಸಮರವನ್ನು ಚಿತ್ರಿಸಿತು.

"ನನಗೂ ಆಸ್ತಿಯ ಆಸೆ ಇಲ್ಲ, ಕಾರ್ತೀಕ. ಆದರೆ ಸೌಭಾಗ್ಯ ಚಂದ್ರಬಾಬುವಿನ ಮಗಳು ಅನ್ನೋದು ಮೀನಾಕ್ಷಿಗೆ ಗೊತ್ತಾಗಿದೆ."

"ಹೇಗೆ ಗೊತ್ತಾಯ್ತು?"

ಚಕಿತನಾಗಿ ಕೇಳಿ ಕ್ಷಣದಲ್ಲಿ ಸಾವರಿಸಿಕೊಂಡ ವಿರಕ್ತ.

"ನಾನು ಹೇಳಲಾರೆ" ಸತ್ಯದ ಕತ್ತು ಹಿಸುಕಿದ.

"ಅದರಿಂದ ಮೀನಾಕ್ಷಿಗೇನು ನಷ್ಟ?"

"ಅಪಾರ ನಷ್ಟ...ಮೀನಾಕ್ಷಿ, ಕಮಲಹಾಸ ಎಸ್ಟೇಟು ಬಿಡಬೇಕಾಗತ್ತೆ, ಅವರ ಅಧಿಕಾರ ಮುಗೀತು. ಹೋಗುವಾಗ ಬರಿಕೈಲಿ ಹೋಗೋದಿಲ್ಲ ಅವರು... ಮೀನಾಕ್ಷಿ, ಅವಳ ಅಣ್ಣ ಎಸ್ಟೇಟಿನ ಉಪ ಜೀವಿಗಳು. ಚಂದ್ರಬಾಬುಗೆ ಮೀನಾಕ್ಷಿನ ಕಂಡ್ರೆ ಆಗ್ತಾ ಇರ್ಲಿಲ್ಲ. ಅಂಥಾ ಕುಡುಕ ತಮ್ಮನಿಗೂ ಅವಳನ್ನ ಮದುವೆ ಆಗೋಕೆ ಅವಕಾಶ ಕೊಟ್ಟಿರಲಿಲ್ಲ."

"ಇವೆಲ್ಲಾ ಹೇಗೆ ಗೊತ್ತು ನಿನಗೆ?"

ಸೊಲ್ಲಡಗಿಸಿ ತಲೆ ಒದರಿದ. ತಾನು ಸಂತುರಾಮ ಅಲ್ಲ!

"ಸಂತುರಾಮ ಹೇಳಿದ್ದ... ಪರಿಣಾಮ ತಿಳಿದೂ ಚಂದ್ರಬಾಬು ಆತ್ಮಕ್ಕೆ ಶಾಂತಿ ಇಲ್ಲದ ಹಾಗೆ ಮಾಡಲೆ? ಅವರ ಮಗಳಿಗೆ ಅನ್ಯಾಯ ಆಗೋದು ನೋಡ್ತಾ ಸುಮ್ಮನೆ ಕೂಡಲೆ? ಇದು ಸೌಭಾಗ್ಯಳ ಹಕ್ಕುದಾರಿಕೆ ಪ್ರಶ್ನೆ ಒಂದೇ ಅಲ್ಲ. ಅವಳ ರಕ್ಷಣೆ ವಿಷಯ ಕೂಡ.. ಕಾರ್ತೀಕ. ನನಗೆ ಎರಡು ದಿನಗಳ ಅವಕಾಶ ಕೊಡು. ಕೇವಲ ಎರಡೇ ದಿನಗಳು ! ವಕೀಲರು ಬರುತ್ಲೇ ವಿಷಯ ಇತ್ಯರ್ಥಗೊಳಿಸಿಬಿಡ್ತೀನಿ."

ಸಮಸ್ಯೆಗಳ ಪರಿಹಾರಕ್ಕೆ ಬವಣೆಪಡುತ್ತಿರುವ ನೊಂದ ಜೀವಿಯ ಮುಖವನ್ನು ಕನಿಕರದಿಂದ ನೋಡಿದ.

"ನಿನ್ನ ಮುಖದಲ್ಲಿ ಹೃದಯ ಕಾಣ್ತಿದೆ. ಒಂದು ಕಾಲದಲ್ಲಿ ನಿನಗೆ ಸೌಭಾಗ್ಯಳ ಮೂಲಕ ಆಸ್ತಿಯ ಭಾಗ ಪಡೆಯೊ ಆಸೆ ಇದ್ದಿರಬಹುದು. ಈಗ ಆಸೆ ಇಳಿದಿದೆ. ಸೌಭಾಗ್ಯಳ ಸಲುವಾಗಿ ಹೋರಾಟ ನಡೆಸ್ತಾ ಇದೀಯ. ನನ್ನ ಸಹಕಾರ ಕೊಡ್ತೀನಿ."

ಸಂತುರಾಮ ಏನೂ ಹೇಳದೆ ತೃಪ್ತಿಯಿಂದ ಎದ್ದು ಹೋದ.

ಅಂದು ರಾತ್ರಿ ಕಾರ್ತೀಕ 'ಮಣ್ಣಿನ ದೋಣಿ'ಯ ಪುಟದ ಮೇಲೆ ಪೆನ್ ಹರಿಸಿದ.

"...........ತಂದೆಯ ಎಸ್ಟೇಟ್ ಸೇರಿದ ಸೌಭಾಗ್ಯಳಿಗೆ ತಾನು ಚಂದ್ರಬಾಬುವಿನ

ಮಗಳೆಂದು ತಿಳಿಯದು. ಎಸ್ಟೇಟಿನ ಪರಾವಲಂಬಿ ಮೀನಾಕ್ಷಿಗೆ ಅದು ಗೊತ್ತಿದೆ! ಅಧಿಕಾರದಿಂದ ಸರಿಯಲಿರುವ ಹೆಣ್ಣು ಗಾಯಗೊಂಡ ಹುಲಿ!... ಸಮಸ್ಯೆಯ ಪರಿಹಾರಕ್ಕೆ ಇಳಿದಿರುವ ಬರ್ನಾರ್ಡ್ ಯಾವ ಬೆಲೆ ತೆರಬೇಕೊ! ಗಂಭೀರ, ರಮ್ಯ ಬೇಗಂಚೆರ್ಲಾದಲ್ಲಿ, ಅದೊಂದು ವಿಚಿತ್ರ ಎಸ್ಟೇಟ್ ಎನಿಸಿದರೂ ಅಲ್ಲಿ ದೊಡ್ಡ ನಾಯಿ, ಬಂದೂಕು, ಪಿಸ್ತೂಲು ಯಾವುದೂ ಇಲ್ಲ. ಅಂದರೆ ಅದು ಶೀತಳ ಅತ್ಯಾಚಾರಗಳ ತಾಣವೆ?....

* * *

ತೇಲಾಡುವ ತುಣುಕು ಮೋಡಗಳ ಅಡಿಯಲ್ಲಿ ನೀಳ ಮರಗಳ ನಡುವೆ ತಗ್ಗಿನಲ್ಲಿ ಕಾಣುತ್ತಿದ್ದ ಹೆಂಚಿನ ಮನೆಗಳ ಗುಂಪಿಗೆ ಕೈ ತೋರಿದಳು ಸೌಭಾಗ್ಯ.

"ಯಾವ ಊರು ಅದು? ನಾವು ಬರೋವಾಗ ಬೋರ್ಡ್ ಯಾವುದೂ ಕಾಣಿಸಲಿಲ್ಲ."

"ರಾಣಿಗುಡ ಅಂತ. ನೈಜಾಂ ವಂಶಕ್ಕೆ ಸೇರಿದ ಯಾವನೊ ನವಾಬನಿಗೆ ಅಲ್ಲಿ ಇಪ್ಪತ್ತನೆಯ ಹೆಂಡತಿ ಇದ್ದಿರಬೇಕು. ಅದು ರಾಣಿಗುಡ ಆಯ್ತು. ಅವನ ಅಧಿಕೃತ ಹೆಂಡತಿಗೆ ನೆನಪಿಗೆ ನಮ್ಮ ಎಸ್ಟೇಟು ಇರೊ ಭಾಗ ಬೇಗಂಚೆರ್ಲಾ ಆಯ್ತು."

ಮೀನಾಕ್ಷಿ ಸಂಗೀತ ಶಾಲೆಯ ಸರಸಿ ಆಗಿದ್ದಳು. ಘಾಟಿನ ಇಳಿಜಾರಿನಲ್ಲಿ ಎಚ್ಚರಿಕೆಯಿಂದ ಮೆಲ್ಲನೆ ಕಾರು ನಡೆಸಿದ್ದಳು ಸೌಭಾಗ್ಯ.

"ಮೀನಾಕ್ಷಿ, ನೀವು ಹೀಗೆ ಮಾತಾಡಿದ್ರೇ ಚೆಂದ. ಅದು ಬಿಟ್ಟು ನನಗೆ ಇಲ್ಲದ ಮರ್ಯಾದೆ ಕೊಟ್ಟು 'ನೀವು' ಅಂತ ಗಂಭೀರವಾಗಿ ಕರೆದಾಗ ನನಗೆ ನಾಚಿಕೆ, ಇರಲಿ ಗಾಬರಿಯೂ ಆಯ್ತು.""

"ಗಾಬರಿ ಯಾಕೆ? ಆಗ ನೀವು ಸ್ನೇಹಿತೆ ಆಗಿದ್ರಿ. ಈಗ ನಿಮ್ಮ ಸ್ಥಾನ ಏರಿದೆ. ಗೌರವದ ಸಂಬೋಧನೆ ನಿಮಗೆ ಬೇಡ ಅಂದ್ರೂ ನಮ್ಮ ಸುತ್ತಲೂ ಇರೊ ಜನರ ತೃಪ್ತಿಗೋಸ್ಕರವಾದರೂ ಇರಲೇಬೇಕು."

"ನೀವು ನನ್ನಲ್ಲಿ ವಿಶ್ವಾಸ ಕಳಕೊಳ್ತಾ ಇದೀರೇನೊ ಅನ್ನಿಸ್ತು... ಏನು ಮಾಡ್ಲಿ? ನನ್ನ ಪಪ್ಪ, ಕಾರ್ತೀಕ ಒಂದಾಗಿ ಹೀಗೆ ನನ್ನ ಕರಕೊಂಡು ಬರ್ತಾರೆ ಅಂತ ಗೊತ್ತಾಗ್ಲಿಲ್ಲ."

ಹಿರಿಯ ಗೆಳೆಯ ಮುಖದಲ್ಲಿ ಮತ್ತೆ ಗಂಭೀರತೆ ನೆಲೆಸಿತು.

"ನಿಮ್ಮನ್ನ ಸ್ವಾಗತಿಸೋದಿಕ್ಕೆ ನಿಮಗೂ ಮೊದಲು ಬಂದುಬಿಟ್ಟೆ. ಊಹಿಸಿಕೊಳ್ತಾ ಇದೀನಿ... ನೀವು ಲಕ್ಷ ಲಕ್ಷಗಳ ಆಸ್ತಿಗೆ ಒಡತಿ ಆದ್ರೆ ಹೇಗೆ ಕಾಣ್ತೀರಿ ಅಂತ."

"ಊಹಿಸಿಕೊಳ್ಳಬೇಡಿ, ನಾನೇ ಹೇಳ್ತೀನಿ. ಕಾಗದದ ಮೇಲೆ ದೊಡ್ಡದಾಗಿ

ಒಂದು ಲಕ್ಷ ಬರೆಯೋದಿಕ್ಕೆ ಪೆನ್ ಇಟ್ಟಾಗ ಒಂದರ ಪಕ್ಕದಲ್ಲಿ ಎಷ್ಟು ಸೊನ್ನೆ ಇರುತ್ವೇಂತ ಗೊತ್ತಿಲ್ಲದೆ ಸಿಕ್ಕಿದೋರನ್ನೆಲ್ಲ ಕೇಳಿ ಪರದಾಡ್ತೀನಿ. ಅವರೆಲ್ಲಾ ಪಕಪಕ ನಗ್ತಾರೆ. ನಾನು ಬೆಪ್ಪಾಗಿ ಮಂಚದಿಂದ ಬಿದ್ದಿರ್ತೀನಿ... ಅಲ್ಲಿಗೆ ಕನಸು ಹರಿಯುತ್ತೆ."

ಬೆಪ್ಪಾದಳು ಮೀನಾಕ್ಷಿ.

"ಕನಸಲ್ಲ, ಸೌಭಾಗ್ಯ... ನಿಜವಾಗಿ ನೀವು ಅಷ್ಟೊಂದು ಆಸ್ತಿ ಪಡೆದ್ರೆ ನನಗೆ ಯಾವ ಸ್ಥಾನ ಕೊಡ್ತೀರಿ?"

"ಕಾರು ಸ್ವಲ್ಪ ನಿಲ್ಲಿಸ್ತೀನಿ"

ವಾಹನ ನಿಲ್ಲಿಸಿ ಅವಳತ್ತ ತಿರುಗಿದಳು.

"ಮೀನಾಕ್ಷಿ, ನೀವು ಈಗ ಒಡತಿ ಸ್ಥಾನದಲ್ಲಿದ್ದೀರಿ."

"ಇಲ್ಲ, ಇಲ್ಲ... ವಹಿವಾಟುಗಳ ಮೇಲ್ವಿಚಾರಕಿ. ವಕೀಲರು ಬಂದು ಬೆರಳೆತ್ತಿದ ಕೂಡಲೇ ಆ ಕೆಲಸವನ್ನೂ ಬಿಟ್ಟು ಕೊಡಬೇಕಾಗುತ್ತೆ. "ಗಾಬರಿಯ ಕಂಠ ಬಂತು.

"ನನಗೆ ಲಕ್ಷ ಲಕ್ಷಗಳ ಆಸ್ತಿ ಬಂದ್ರೆ, ನನ್ನ ಏನೂ ಕೇಳದೆ ಆಡಳಿತ ನಡೆಸೊ ಅಧಿಕಾರ ಕೊಡ್ತೀನಿ. ಹಣದ ಚೀಲ ನಿಮ್ಮ ಕೈಗೇ."

ಪಕಪಕ ನಕ್ಕಳು.

"ಅದರಿಂದ ನಿಮಗೆ ಸಂತೋಷವೇ?" ತಲ್ಲಣ ಕುಗ್ಗಿರಲಿಲ್ಲ.

"ಖಂಡಿತ ಸಂತೋಷ.....ಹುಂ, ಲಕ್ಷಗಳ ಮಧ್ಯೆ ತಳ್ಳಿ ನನ್ನ ಮೊದಲು."

ಹಾಸ್ಯದ ಮಾತು ಒಗೆದು ಮೆದು ರಾಗ ತೆಗೆದಳು.

"ನನಗೆ ಅಂತ ಅಧಿಕಾರ ಸಿಗೋ ಹಾಗೆ ನೀವು ಆಸ್ತಿವಂತೆ ಆಗಬೇಕಾದರೆ ನೀವು ಮದುವೆ ಆಗಬೇಕು."

ಕಳಕಳಿಯ ಬೇಡಿಕೆ ಆಸ್ತಿವಂತೆಯ ಸೊಲ್ಲಡಗಿಸಿತು. ಕಾರ್ತೀಕ ಬೆರಳೆತ್ತಿ ಪ್ರಶ್ನಾರ್ಥಕ ದೃಷ್ಟಿ ಹಾಕಿದ್ದ.

"ಇದೇ ಆಸೆಯಿಂದ ಸುಧಾಕರನ್ನ ನಾನು ಮದುವೆ ಆಗೋದಿಕ್ಕೆ ಸೂಚನೆ, ಒತ್ತಡ ಕೊಡ್ತಾ ಇದ್ರಾ?"

"ಹೌದು" ಕಾತರದಿಂದ ಉಸಿರೇರಿತು.

"ಮೀನಾಕ್ಷಿ, ಹದಿನಾರು ತುಂಬಿದೋಳ ಮದುವೆ ವಿಷಯದಲ್ಲಿ ಆಸ್ಥೆವಹಿಸಿದೀರಿ, ಸಂತೋಷ. ಮೂವತ್ತೊಂದು ವರ್ಷ ಕಳೆದ್ರೂ ನಿಮ್ಮ ಮದುವೆ ಚಿಂತೆ ಯಾಕೆ ಹಚ್ಕೊಳ್ಳಿಲ್ಲ?"

ಅವಳಲ್ಲಿ ವ್ಯಗ್ರತೆ ತೋರಲಿಲ್ಲ.

"ಮದುವೆ ಆಗಬಾರದೂಂತ ಕಾಲೇಜಿನಲ್ಲಿ ಓದ್ತಾ ಇದ್ದಾಗಲೇ ನಿರ್ಧಾರ ತೊಗೊಂಡುಬಿಟ್ಟೆ... ಮದುವೆಯಿಂದ ಪಾಡು ಪಟ್ಟ ನನ್ನ ಟೀಚರ್ ಅದಕ್ಕೆ ಕಾರಣ."

"ಮದುವೆ ಆದ ಮೇಲೆ ನನ್ನ ಗಂಡ ನಿಮಗೆ ಸ್ಥಾನ ಕೊಡದೆ ಓಡಿಸಿಬಿಟ್ರೆ?"

"ನಿಮ್ಮ ಗಂಡನ್ನ ಒಪ್ಪಿಸಿ ನನ್ನ ಉಳಿಸಿಕೊಳ್ತೀರಿ ಅಂತ ಬಲ್ಲೆ... ನನಗೂ ಸ್ವಲ್ಪ ಆಸ್ತಿ ಬರುತ್ತೆ. ನಾನು, ಅಣ್ಣ ಎಸ್ಟೇಟ್‌ನಲ್ಲಿ ಬೆಳೆದೋರು. ಇಲ್ಲೇ ನಮ್ಮ ಜೀವ. ನಿಮ್ಮಿಂದ ನಾವು ಇಲ್ಲಿ ಇರೊ ಹಾಗೆ ಆಗ್ಬೇಕು."

ಸೌಭಾಗ್ಯ ಅರೆ ನಿಮಿಷ ಕಣ್ಣು ಮುಚ್ಚಿದಳು.

ಪಾಪ್ ಸಂಗೀತ ಕಲಿಯುವ ನೆಪದಲ್ಲಿ ತನ್ನ ಪೂರ್ವೋತ್ತರದ ಶೋಧನೆಯಲ್ಲಿ ನಿಮಿಷದ ಬಿಡುವಿನಲ್ಲಿ ಹರಿದಾಡಿದ ಆ ಚುರುಕಿನ ಮೀನಾಕ್ಷಿ!....... ತನ್ನ ಮುಂದೆ ಕಳಕಳಿಯ ಬೇಡಿಕೆ ಸಲ್ಲಿಸುತ್ತಿರುವ ತನ್ನ ಅಧೀನಕ್ಕೆ ಬರುವ ಈ ದೈನ್ಯ ಮುಖ್ಯದ ಮೀನಾಕ್ಷಿ!

ನೀಳವಾಗಿ ಉಸಿರೆಳೆದು ಅವಳ ಮೇಲೆ ದಯಾರ್ದ್ರ ನೋಟ ಹಾಕಿದಳು.

"ಅಕ್ಕನ ಹಾಗೆ ಎಷ್ಟೊ ದೊಡ್ಡ ಮಾತು, ಅರ್ಥವಾಗದ ಮಾತು ಹೇಳ್ತಿದ್ರಿ ನನಗೆ. ಅದರಿಂದ ನಾನು ಏನೇನು ಗ್ರಹಿಸಿದೆನೊ ಗೊತ್ತಿಲ್ಲ.  ಒಟ್ಟಿನಲ್ಲಿ ನಾನು ಪಡೆದ ಅನುಭವಕ್ಕೆ ನೀವೂ ಕಾರಣ...ಹೀಗೆ ಹೇಳ್ತೀನಿ ಅಂತ ಮುಖ ಚಿಕ್ಕದು ಮಾಡ್ಕೋಬೇಡಿ. ಮೀನಾಕ್ಷಿ, ನೀವು ಬಣ್ಣದ ಛತ್ರಿ ಹಿಡಿದು ತನ್ನ ಗೇಲಿ ಮಾಡ್ತಾ ಓಡಾಡಬೇಕು. ನಿಮ್ಮ ಪಕ್ಕದಲ್ಲಿ ನಾನು ಸಂಗೀತದ ಪುಸ್ತಕ ಹಿಡಿದು ನಿಮ್ಮ ಕಡೆ ಬೆಪ್ಪಾಗಿ ನೋಡ್ತಾ, ನಾಚಿಕೊಂಡು, ಗಾಬರಿಪಟ್ಟು ನಡೆದು ಬರ್ಬೇಕು. ಅದರಲ್ಲೇ ನಮ್ಮಿಬ್ಬರಿಗೂ ಸಂತೋಷ ಸಿಗೋದು... ಗಂಭೀರ ಕನಸು, ಕಲ್ಪನೆ ಇವೆಲ್ಲಾ ಯಾಕೆ?"

ಮೀನಾಕ್ಷಿಗೆ ರೋಷ, ಅಳು ಒಟ್ಟಾಗಿ ಬಂತು. ಆಗ ಅಪ್ರಬುದ್ಧ ಬರ್ನಾರ್ಡ್ ಬಚ್ಚಿ! ಈಗ ಶ್ರೀಮಂತೆಯಾಗಿ ತನ್ನನ್ನು ಆಡಿಸುತ್ತಿದ್ದಾಳೆ!

ತಲೆ ಕೊಡವಿದಳು.

"ನಾನು ಬಹಳ ಸೀರಿಯಸ್ಸಾಗಿ ಹೇಳ್ತಿದೀನಿ."

"ಹೇಳಿ"

"ಹೇಳಿದ್ನಲ್ಲಾ, ನೀವು ದೊಡ್ಡ ಆಸ್ತಿವಂತೆ ಆಗ್ತೀರಿ."

"ಸಂತೋಷ, ಹಾಗೆ ಆಗೊ ಮಟ್ಟಕ್ಕೆ ಎರಡೇ ಮೆಟ್ಟಿಲು ಕೆಳಗೆ ನಿಂತಿದೀನಿ."

ಮೀನಾಕ್ಷಿಗೆ ಅಚ್ಚರಿ ಭಿಮ್ಮನೆ ತಟ್ಟಿತು. ನಿರಾಶೆ ಅದರೊಂದಿಗೆ ಘರ್ಷಿಸಿತು.

"ಯಾರು ಹೇಳಿದ್ರು?" ಪ್ರಶ್ನೆ ಆಕ್ರಮಣದಂತೆ ಬಂತು.

"ನನ್ನ ಈಗ್ಲೂ ಮಗು ಅಂತ ತಿಳಿದಿದೀರಾ? ಸುಮಾರು ಒಂದು ತಿಂಗಳಿಂದ ನನ್ನ ಪೋಷಕ ಕಾರ್ತೀಕ, ನನ್ನ ಪಪ್ಪ ಬರ್ನಾರ್ಡ್ ನನಗೊಂದೂ ಹೇಳದೆ ನನ್ನ ಮೂಲಕ ಹುನ್ನಾರು ನಡೆಸಿದಾರೆ. ಅಕದ್ಕೆ ನಿಮ್ಮದೂ ಸಹಕಾರ ಇದೆ ಅಂದ್ರೆ ಆಶ್ಚರ್ಯ ಇಲ್ಲ... ನಾನು ಯಾರಿಗೊ ಬಹಳವಾಗಿ ಬೇಕಾಗಿರೊ ವ್ಯಕ್ತಿ ಅನ್ನೋದು ಗ್ರಹಿಸಿದೀನಿ. ನೀವು ಏಕ್‌ದಂ ನನಗೆ 'ನೀವು' ಅಂತ ಮರ್ಯಾದೆ ಬೇರೆ ಕೊಟ್ಟು ತಲೆ ಕೆಡಿಸಿದೀರಿ.. ಕಥೆ ಪುಸ್ತಕದಲ್ಲಿ ಓದಿದ್ದೆ. ಈಗ ನನ್ನ ಮೂಲಕವೇ ನೋಡ್ತಾ ಇದೀನಿ... ಬೇಗಂಚೆರ್ಲಾ ಎಸ್ಟೇಟ್ ಒಡೆಯನಿಗೆ ತುಂಬು ತಲೆದೂದಲಿನ ಒಬ್ಬ ಮಗಳು. ಒಡೆಯ, ಒಡತಿ ಸತ್ತ ಮೇಲೆ ತಲೆ ಹುಡುಗಿಯೂ ಕಾಣೆ ಆಗ್ತಾಳೆ. ಉಯಿಲಿನ ಪ್ರಕಾರ ಹುಡುಗಿಗೆ ಮದುವೆ ಆದ್ರೆ ಹಕ್ಕುದಾರಿಕೆ.. ಹನ್ನೊಂದು ವರ್ಷ ಆದ ಮೇಲೆ ಅವಳ ಹೋಲಿಕೆಯ ಮೇಲೆ ತುಂಬ ಕೂದಲು ಇರೊ ನನ್ನ ಹಿಡಿದು ಧನದಾಹಿಗಳು ಎಸ್ಟೇಟಿನ ಮುಂದೆ ಇಡ್ತಾ ಇದಾರೆ. ನನ್ನ ಇಲ್ಲಿಗೆ ಒಪ್ಪಿಸಿ ಅವರಿಬ್ರೂ ಒಂದೊಂದು ಹಣದ ಚೀಲ ಹಿಡಿದು ಹೋಗ್ತಾರೆ... ಮೀನಾಕ್ಷಿ. ನೀವೂ ಅವರಿಬ್ಬರ ಹಾಗೆ ಚೀಲ ಹೊರಬೇಕೆ? ಅದಕ್ಕೋಸ್ಕೋರ ನಾನು ಮದುವೆ ಆಗಬೇಕೆ?"

"ಹಾಗಲ್ಲ, ಪದ್ಮಾವತಿ... ಅಲ್ಲ ಸೌಭಾಗ್ಯ."

ಬೆವರು ಒರೆಸಿದಳು. ಸೌಭಾಗ್ಯಳ ಕಣ್ಣು ಮೊನಚಾಯಿತು.

"ಅಂದ್ರೆ ನಾನು ಪದ್ಮಾವತಿಯ ಬದಲಿ ಬೊಂಬೆಯೆ?"

"ನೀವು ಪದ್ಮಾವತಿಯೇ ಆಗಿರಲಿಕ್ಕೂ ಸಾಧ್ಯ."

ಸತ್ಯವನ್ನು ದಿಟ್ಟತನದಿಂದ ಹೇಳಲಾಗದ ಸ್ಥಿತಿ ಅವಳಿಗೆ.

ಮಾತಿನ ಏರುಪೇರು ತನ್ನ ಪಾಲಿನ ಆಸ್ತಿಗೆ ಸಂಚಕಾರ ತರಲಿಕ್ಕೂ ಸಾಧ್ಯ.

"ಅಂದ್ರೆ ನನ್ನ ಮದುವೆ ನಡೆಯಲೇ ಬೇಕು."

"ಹೌದು, ನೀವು ತಿಳಿದಿರೊ ಹಾಗೆ ಅದು ಉಯಿಲಿನ ನಿಬಂಧನೆ... ನಾನು ಸಂಚುಗಾತಿ ಅಲ್ಲ. ಉಯಿಲೇ ಹಣದ ಚೀಲ ನನ್ನ ಮೇಲೆ ಹೊರಿಸ್ತಾ ಇದೆ."

"ಸ್ವಲ್ಪ ವಿವರವಾಗಿ ಹೇಳಿ"

"ಉಯಿಲು ಬರೋವರೆಗೆ ಬಾಯಿ ಕಟ್ಟಿದೆ."

"ಉಯಿಲು? ಅದು ಉರುಲು... ಮೀನಾಕ್ಷಿ, ಒಂದು ಕಾದಂಬರಿಯಲ್ಲಿ ಮದುವೆ ಅಗತ್ಯ ಇರೋ ಉಯಿಲಿನ ಪ್ರಸಂಗ ಬರತ್ತೆ...."

"ಬದುಕಿನಲ್ಲಿ ನಡಿಯೋದೆಲ್ಲಾ ಕಾದಂಬರಿಗಳಲ್ಲಿ ಕಂಡುಬಿಟ್ಟಿದ್ದೀರಿ."

"ಅಲ್ಲ, ಕಾದಂಬರಿಗಳಲ್ಲಿ ಓದಿದ್ದೆಲ್ಲಾ ಬದುಕಿನಲ್ಲಿ ಅಡ್ಡಾ ದಿಡ್ಡಿಯಾಗಿ ಇರೋದು

ಕಾಣ್ತಾ ಇದೀನಿ. ಉಯಿಲಿನ ಪ್ರಸಂಗ ಹೇಳ್ತಾ ಇದ್ದೆ.... ಅವಳಿಗೆ ಮದುವೆ ಆದರೆ ಮಾತ್ರ ಆಸ್ತಿ ಬರೋ ನಿಬಂಧನೆ, ಅವನು ವಿಪರೀತ ದುರಾಶೆಯಲ್ಲಿ ಅವಳನ್ನ ಮದುವೆ ಆಗು ಅಂತ ಒತ್ತಾಯ ಮಾಡ್ತಾನೆ... ಅವಳು ಒಪ್ಪೋದಿಲ್ಲ...ಬಲವಂತವಾಗಿ ಅವಳ ಮೇಲೆ ಅತ್ಯಾಚಾರ ನಡೆಸಿಬಿಡ್ತಾನೆ! ಅವಳು ನಿರ್ವಾಹವಿಲ್ಲದೆ ಅದನ್ನ ಮದುವೆ ಆಗ್ತಾಳೆ. ಅದು ಹಣ ಹದ್ದಿನ ಕಥೆ... ಈಗಿನ ಕಥೆ? ಯಾರದೋ ಆಸ್ತಿಗೆ ಯಾರನ್ನೋ ಪ್ರತಿರೂಪದ ಬೊಂಬೆ ಮಾಡ್ಸಿ, ನಿಲ್ಲಿಸಿ ಅದರಿಂದ ಪಾಲು ಪಡೆಯೋ ಹುನ್ನಾರು. ಛೇ, ಎಂತಾ ಜನ!"

ಮೀನಾಕ್ಷಿ ಪ್ರತಿಕ್ರಿಯೆ ತೋರಲಾರದೆ ಮೇಲಕ್ಕೆ ನೋಡಿದಳು. ಅತ್ತಲಿಂದ ಸೂಚನೆ ಕೊಡಲಾಗದ ಬಂಜೆ ಮೋಡಗಳು.

"ನಾನು ಆಸ್ತಿಗೆ ಹುನ್ನಾರು ನಡೆಸಿಲ್ಲ. ಸೌಭಾಗ್ಯ. ಉಯಿಲು ಮಾಡ್ತಿರೊ ದಾನ."

"ನಾವಿಬ್ರೂ ಹೀಗೆ ಇದ್ದುಬಿಡೋಣ. ಕಾರು ಚಲಾಯಿಸ್ತೀನಿ. ಅಡ್ಡಾದಿಡ್ಡಿಯಾದ್ರೆ ಸ್ವಲ್ಪ ತಿದ್ದಿ.

"ಹುಂ"

ಅವಳ ಸೂಚನೆ ಅಗತ್ಯವಿಲ್ಲದೆ ಸರಾಗವಾಗಿ ಇಳಿಯಿತು ಕಾರು. ರಾಣಿಗುಡ ಮುಟ್ಟಿದಾಗ ಪರಿಚಿತ ಅಂಗಡಿಯವ ಎರಡು ತಂಪು ಪಾನೀಯಗಳ ಲೋಟ ಹಿಡಿದು ಕಾರಿನ ಬಳಿಗೆ ಬಂದ.

"ಹೊಸ ಅಮ್ಮಾಯಿ ಯಾರು?"

ಸೌಭಾಗ್ಯ ಕಡೆ ಕಣ್ಣು ಮಾಡಿ ಕೇಳಿದ.

"ಎಸ್ಟೇಟ್ ಒಡತಿ"

ಮೀನಾಕ್ಷಿಯ ಹುಡುಗಾಟಿಕೆಯ ಮಾತುಗಳನ್ನೆ ಸದಾ ಕೇಳುತ್ತಿದ್ದ ಅಂಗಡಿಯವನಿಗೆ ಅದೂ ಹಾಸ್ಯದ ಮಾತಾಗಿತ್ತು.

"ಹಾಗೆ ಯಾಕೆ ಹೇಳಿದ್ರಿ?" ನಸುಗೋಪ ತೋರಿದಳು.

"ಹಾಗೆ ಹೇಳೂಂತ ಹೃದಯದಿಂದ ಅಪ್ಪಣೆ ಬಂತು."

ಪ್ರಶ್ನೆಗೊಂದು ಉತ್ತರ ಎಂಬಂತೆ ನಿರಾತಂಕವಾಗಿ ನುಡಿದಳು.

ಸೌಭಾಗ್ಯಳ ಬೇಸರದ ಮುಖ ಪಕ್ಕಕ್ಕೆ ತಿರುಗಿತು. ಸುಕ್ಕುಗಳು ಮಾಯವಾಗಿ ಚಕಿತತೆಯಲ್ಲಿ ಹುಬ್ಬೇರಿತು.

ಉಬ್ಬಿದ ಚರ್ಮದ ಚೀಲ ಹೆಗಲಿಗೆ ತೂಗು ಹಾಕಿ ನಿಂತಿದ್ದ ಸುಧಾಕರ! ಬಸ್‌ನಿಂದ ಇಳಿದು ತಮ್ಮ ವಾಹನಕ್ಕೇ ಕಾಯುತ್ತಾ ನಿಂತುದು ಸ್ಪಷ್ಟವಾಗಿತ್ತು. ಹೆಜ್ಜೆ

ಸರಿಸದೆ ಕೈ ಎತ್ತಿದ.

"ಇಲ್ಲಿಗೆ ಯಾಕೆ ಬಂದಿರೋದು ಸುಧಾಕರ?"

ಅಂಬಿನಂತೆ ಕೋಪದ ಪ್ರಶ್ನೆ ಬಂತು. ಕಸಿವಿಸಿಗೊಂಡ ಅಂಗಡಿಯವ ಅವಳು ನೀಡಿದ ಲೋಟ ತೆಗೆದುಕೊಂಡು ಹಿಂದಕ್ಕೆ ಸರಿದ.

ಮೀನಾಕ್ಷಿ ಹಿಡಿದ ಗಾಜಿನ ಲೋಟ ಬಳೆಗಳೊಂದಿಗೆ ಗಲಗಲ ಕಂಪಿಸಿತು.

"ಬೇಗಂಚೆರ್ಲಾ ಎಸ್ಟೇಟ್‌ಗೆ ಅತಿಥಿ... ಬಹಳ ದಿನಗಳಿಂದ ಕರೆ ಕೊಡ್ತಿದ್ದೆ. ಈಗ ಬಂದಿದಾನೆ."

"ನಾನು ಬಂದಿರೊ ಕಾಲದಲ್ಲೇ ಇವನೂ ಬಂದಿದಾನೆ. ಸಂಚಿಗೆ ಇನ್ನೊಂದು ಸಹಕಾರದ ಕೈ?"

"ಅಂತಾದ್ದೇನೂ ಇಲ್ಲ. ನೀವಿಬ್ರೂ ಬರೋದು ಬಂದಾಗಿದೆ, ಅಷ್ಟೆ."

"ಇಲ್ಲ, ಈ ಕಾಲಕ್ಕೇ ಅವನ್ನ ಕರೆಸಿದೀರಿ. ಅವನ್ನ ಇಲ್ಲಿಂದ ಒಯ್ಯೋದಿಕ್ಕೆ ನೀವು ಕಾರು ತಂದಿರೋದು. ನನ್ನ ಕೈಲಿ ಡ್ರೈವ್ ಮಾಡಿಸೋದು ಒಂದು ನೆಪ."

ಮುಖ ರಾಚುವಂತೆ ನುಡಿದರೂ ಮೀನಾಕ್ಷಿಯ ಮೇಲೆ ಪರಿಣಾಮ ಕಾಣಲಿಲ್ಲ.

"ತಪ್ಪಾಯ್ತು. ಹಿಂದೆ ಕೊಟ್ಟಿದ್ದ ಆಹ್ವಾನಕ್ಕೆ ಬೇಡವಾದ ಸಮಯದಲ್ಲಿ ಬಂದಿದಾನೆ. ಬಂದಿರೊ ತಪ್ಪಿಗೆ ಎರಡು ದಿನ ಇದ್ದು ಹೋಗ್ತಾನೆ."

ಮೀನಾಕ್ಷಿ ವೀಲ್ ಹಿಡಿದು ಅವನಿಗೆ ಕೈ ಆಡಿಸಿದಳು. ಆ ಕರೆಗೆ ಕಾಯುತ್ತಿದ್ದ ಸುಧಾಕರ ಓಡಿ ಬಂದ.

* * *

ಕಬ್ಬಿಣದ ಕವೆಯಿಂದ ನಿರಾಯಾಸವಾಗಿ ಸಿಮೆಂಟ್ ಬಳೆಯನ್ನು ಒಂದೇ ಸಾರಿಗೆ ಮೀಟಿ ಎತ್ತಿದ ಶಕ್ತಿಶಾಲಿಯನ್ನು ಅಗಸೆ ಮರಗಳ ಗುಂಪಿನಿಂದ ನೋಡುತ್ತಿದ್ದ ಕಮಲಹಾಸ ಸಿಗರೇಟ್ ಎಸೆದು ಮೆಚ್ಚಿಗೆಯಲ್ಲಿ ತಲೆ ತೂಗಿದ.

"ರಾಕ್ಷಸ...........!"

ಮೀನಾಕ್ಷಿ ಕವೆ ಹಿಡಿದವನತ್ತ ದೃಷ್ಟಿ ನಾಟಿದ್ದಳು.

"ರಾಕ್ಷಸನ ಸೂತ್ರ ಈ ಕೈಲಿದೆ."

ದಂತದ ಬಣ್ಣದ ಮೆದು ಹಸ್ತ ಅವನ ಮುಖದ ಮುಂದೆ ಹಿಡಿದು ಬಳೆ ಝುಣಗುಟ್ಟಿಸಿದಳು. ಅವಳ ಕೈ ಸರಿಸಿದ ಕಮಲಹಾಸ ದಿಣ್ಣೆಯ ದಿಕ್ಕಿಗೆ ಕೂಗಿದ.

"ಮಿಸ್ಟರ್ ಬರ್ನಾರ್ಡ್, ಬನ್ನಿ ಇಲ್ಲಿ."

ಅವನ ಮೆಚ್ಚಿನ ರಾಕ್ಷಸ ಹಿಂದಕ್ಕೆ ನೋಡಿ. ಕೈಲಿದ್ದ ಕವೆ ನೆಲಕ್ಕೆ ಹಾಕಿ ದಾಪುಗಾಲು ಹೊರಳಿಸಿದ. ಅವನ ಬಳಿ ನಿಂತಿದ್ದ ಮೂವರು ಕಾರ್ಮಿಕರು ಚದುರಿದರು.

"ಏನು ಮಾಡ್ತಾ ಇರೋದು, ಮಿಸ್ಟರ್ ಬರ್ನಾರ್ಡ್? ನೀವು ಆ ಕೆಲಸ ಮಾಡಿದ್ರೆ ಕೆಲಸಗಾರ್ರು ನಮ್ಮ ವಿಷಯದಲ್ಲಿ ಏನು ತಿಳಿದಾರು? ನೀವು ನಮ್ಮ ಅತಿಥಿ."

ಅತಿಥಿ? ತಾನು ಎಸ್ಟೇಟ್ ಬೆಳೆಸಿದ ಮೇಲೆ ಬಂದು ಸೇರಿದ ಪರಾವಲಂಬಿ ತನಗೆ ಆತಿಥೇಯ! ಉದ್ವೇಗ ತಡೆದು ಅವನ ಮೇಲೆ ಕಣ್ಣು ತೇಲಿಸಿದ.

ನಲವತ್ತು ದಾಟಿದರೂ ಇಪ್ಪತ್ತೈದರೆ ಯುವಕರನ್ನು ನಾಚಿಸುವ ಹೊಳಪು, ಚುರುಕಿನ ಮುಖದ ನೀಳ ದೇಹಿ. ಎಸ್ಟೇಟಿನ ಪ್ರತಿ ವ್ಯವಹಾರದ ಮೇಲೆ ಹದ್ದಿನ ಕಣ್ಣಿಟ್ಟ. ದಕ್ಷ ಮೇಲ್ವಿಚಾರಕನೆಂದು ಸಾರುವ ಉಡುಗೆ, ನಿಲುವು, ನಡಿಗೆ ಹಾಗೂ ಚಕಮಕಿಯ ಮಾತುಗಳು.

"ಕುಳಿತು ಬೇಜಾರಾಯ್ತು. ಮೈ ಜಡ್ಡು ಹೋಗಲಿ ಅಂತ ಸುಮ್ಮನೆ ಕೈ ಆಡಿಸ್ದೆ."

"ಆದರೂ ನೀವು ಕೆಲಸಗಾರರ ಮಧ್ಯೆ ಕಾಣಿಸ್ಕೋಬಾರದು. ನಿಮ್ಮ ವಿಷಯದಲ್ಲಿ ನಮಗೆ ಅಪಾರ ಗೌರವ."

ಮೀನಾಕ್ಷಿ ತನ್ನ ಮಾತು ಸೇರಿಸಿದಳು.

ಕಮಲಹಾಸ ಅವನ ಮುಂದೆ ಸಿಗರೇಟ್ ಪ್ಯಾಕ್ ಚಾಚಿದ.

"ಮಿಸ್ಟರ್ ಬರ್ನಾರ್ಡ್, ನೀವು ಚಂದ್ರಬಾಬು ಮನೆತನಕ್ಕೆ ಸಲ್ಲಿಸಿರೋ ಸೇವೆಗೆ ಎಷ್ಟು ಪ್ರತಿಫಲ ಕೊಟ್ಟರೂ ಕಡಿಮೆಯೇ."

ಸಂತುರಾಮ ತುಟಿಗಿಟ್ಟ ಸಿಗರೇಟು ತೆಗೆದು ಮೀನಾಕ್ಷಿಯನ್ನು ನುಂಗುವಂತೆ ನೋಡಿದ... ದ್ರೋಹಿ!

ಮೀನಾಕ್ಷಿ ಆಚಾತುರ್ಯ ನಡೆದಿಲ್ಲವೆಂದು ಕಣ್ಣು, ತಲೆ ಅಲುಗಿಸಿ ಸನ್ನೆ ಮಾಡಿದಳು. ಅವಳು ಕಿರುಗಣ್ಣು ಮಿಂಚಿಸಿದ ಕಮಲಹಾಸ ಅವನ ಸಿಗರೇಟಿಗೆ ಬೆಂಕಿ ಸೋಕಿಸಿ ಮುಖಕ್ಕೆ ಸಮೀಪವಾಗಿ ಹೇಳಿದ.

"ನಿಮ್ಮ ವಿಷಯದಲ್ಲಿ ಗೌರವ ಮಾತ್ರ ಅಲ್ಲ, ಬಹಳ ವಿಶ್ವಾಸ ಇಟ್ಟಿದೀವಿ... ಸಿಕಂದರಾಬಾದ್‌ಗೆ ಫೋನ್ ಮಾಡಿ ಪಿತಾಪುರಂ ಜೊತೆ ಮಾತಾಡಿದೀನಿ. ಅವರು ಎರಡು ದಿನದಲ್ಲಿ ಉಯಿಲಿನೊಂದಿಗೆ ಬರ್ತಾರೆ.... ನಿಮಗೆ ಇಪ್ಪತ್ತೈದು ಸಾವಿರ ಕೊಡಲಿಕ್ಕೆ ಹೇಳ್ದೆ. ಚಕಾರ ಎತ್ತಲಿಲ್ಲ ವಕೀಲ ಬಾಬು ಕಾರ್ತೀಕನಿಗೂ ಹತ್ತು ಸಾವಿರ ಅಂದ್ರೆ ನಿಮ್ಮ ಆಕ್ಷೇಪಣೆ ಇಲ್ಲ ತಾನೆ.....?"

ಮುರುಟಿದ ಸಿಗರೇಟು ಬೆರಳಿನಿಂದ ಚಿಮ್ಮಿ ಹೋಯಿತು. ಆಕ್ಷೇಪಣೆಯ ಪರ್ವತವೇ ಸರಿದಂತೆ ಗಡ್ಡದ ಮುಖ ಎದ್ದಿತು. ಗಾಜಿನ ಬೆಂಕಿ ಕಣ್ಣುಗಳಿಂದ ತೂರಿದ ಉಗ್ರತೆ ಅಳೆಯಲಾಗದೆ ಅಚಲವಾಗಿ ನಿಂತ ಕಮಲಹಾಸ...

ಸೇತುವೆಯ ಕಿರು ರಸ್ತೆಯ ಮೇಲೆ ಟ್ರಕ್‌ನಿಂದ ದಿಂಡು ಕಲ್ಲುಗಳು ತಗ್ಗಿಗೆ ಬೀಳುತ್ತಿದ್ದವು. ಕಮಲಹಾಸ ಕಲ್ಲುಗಳ ಸಂಗ್ರಹಕ್ಕೆ ಬದಲಿ ಸ್ಥಳ ಸೂಚಿಸಲು ಎರಡು ಹೆಜ್ಜೆ ವೇಗವಾಗಿ ಹಾಕಿ ನಿಂತವನು.

"ಮಿಸ್ಟರ್ ಬರ್ನಾರ್ಡ್, ಹತ್ತು ನಿಮಿಷ...."

ಎಂದು ಹೊರಟುಹೋದ.

ಮೀನಾಕ್ಷಿ ಶಕ್ತಿಶಾಲಿಯ ಕೈ ತಟ್ಟಿ ಚೆಂದದ ಮುಖ ಓರೆಗೊಳಿಸಿದಳು.

"ಸಂತುರಾಮ, ಅಷ್ಟು ಹಣ ಸಾಕಲ್ಲ? ಅದಕ್ಕೆ ನಮ್ಮ ಹಣದಿಂದ ಇನ್ನೂ ಐದು ಸಾವಿರ ಸೇರಿಸಿ ಕೊಡ್ತೀವಿ."

ವಿಶಾಲ ಎದೆ ಉಬ್ಬಿತು... ಭಿಕ್ಷೆ?

"ಯಾವುದು ನಿಮ್ಮ ಹಣ?" ಬೆರಳೆತ್ತಿದ.

"ಉಯಿಲಿನ ಪ್ರಕಾರ ನಮಗೆ ಬರೋ ಹಣ... ಹತ್ತು ಲಕ್ಷ."

"ಹತ್ತು ಲಕ್ಷ!" ಗಡ್ಡ, ಮೀಸೆಗಳ ಮಧ್ಯದಿಂದ ಬುಸ್ಸನ ಎದ್ದಿತು ಉದ್ಗಾರ.

"ಹೌದು, ಹತ್ತು ಲಕ್ಷ... ಹನ್ನೊಂದು ವರ್ಷದ ಹಿಂದೆ ಇಲ್ಲಿನ ಆಸ್ತಿ ಬೆಲೆ ಇಪ್ಪತ್ತು ಲಕ್ಷ ಇತ್ತು. ಈಗ ಅದರ ಅಂದಾಜು ನಲವತ್ತು ಲಕ್ಷ ಆಗಿದೆ. ಅದರ ಕಾಲು ಭಾಗ ನಮಗೆ ಸೇರತ್ತೆ."

"ಮೀನಾಕ್ಷಿ..."

ಬೆದರು ಸ್ವರದ ಕರೆಯಲ್ಲಿ ದೇಹ ಕುಗ್ಗಿಸಿ ಮುಂದೆ ಬಂದೆ. ಅವಳ ಮುಖದ ಉತ್ಸಾಹ ಮಾಯವಾಗಿ ಹಿಂದಕ್ಕೆ ಸರಿದಳು.

"ಆಶ್ಚರ್ಯವೆ?.... ಸಂದೇಹವೆ, ಸಂತು ಮಾಮ?"

"ಸೌಭಾಗ್ಯಳಿಗೆ ನಾನು ಹನ್ನೊಂದು ವರ್ಷಗಳ ಕಾಲ ರಕ್ಷಣೆ, ಪೋಷಣೆ ಕೊಟ್ಟಿರೋದಿಕ್ಕೆ ನೂರು ಸಾಕ್ಷಿ, ಪುರಾವೆ ಒಪ್ಪಿಸ್ತೀನಿ ಅಂತ ಹೇಳಿದ್ದೆ."

"ಅದು ಸುಳ್ಳಲ್ಲ...ಈಗ ನಮಗೆ ಪದ್ಮಾವತಿಯ ರಕ್ಷಣೆ, ಪೋಷಣೆಯ ಪ್ರಶ್ನೆ ಅಗತ್ಯವಿಲ್ಲ. ಎಸ್ಟೇಟಿನ ಉಸ್ತುವಾರಿ, ಪದ್ಮಾವತಿಯ ಮದುವೆ ಇವೆರಡೇ ನಿರ್ಧಾರಕ ಅಂಶಗಳು."

"ಆ ಹುಡುಗ ಸುಧಾಕರನ್ನ ನೀನು ಕರೆಸಿರೋದು..."

"ಸರಿಯಾಗಿ ಊಹೆ ಮಾಡ್ದೆ, ಸಂತು. ಅವನೇ ಸೌಭಾಗ್ಯಳನ್ನ ಮದುವೆ ಆಗೋ ಹುಡುಗ, ಮುಂದಿನ ವಾರವೇ ವಾಲಗ ಊದಿಸಿಬಿಡ್ತೀನಿ."

"ಸೌಭಾಗ್ಯ ಅವನ್ನ ಒಪ್ಪದಿದ್ರೆ...?"

"ಒಪ್ಪಿಸೊ ನಯವಂತಿಕೆ, ಜಾಣ್ಮೆ ನಮಗಿದೆ."

ರೊಚ್ಚಿಗೆದ್ದು ಪೂತ್ಕರಿಸಿದ ಸಂತುರಾಮ ಕಂಬದ ಕಾಲು ಮುಂದಕ್ಕೆ ಹಾಕಿದ. ನಿಸ್ತೇಜಿ ಕಣ್ಣುಗಳ ಹೆಣ್ಣು ಹಿಂದಕ್ಕೆ ಸರಿದಳು... ಮತ್ತಷ್ಟು ಸರಿಯಲಾಗದಂತೆ ಅಗಸೆ ಮರಕ್ಕೆ ಬೆನ್ನು ತಾಕಿ ನಿಂತಳು.

ಬಲಿಷ್ಠ ಹಸ್ತಗಳೆರಡೂ ಅವಳ ಕುತ್ತಿಗೆ ಸಮೀಪಿಸಿದವು.

"ಬೇಡ, ಸಂತು ಮಾಮ... ನನ್ನ ಕೊಲ್ಬೇಡ!.... ನನ್ನ ತಪ್ಪಿಲ್ಲ... ನನ್ನ ಕೊಂದ್ರೆ ನಿನಗೆ ಲಾಭ ಇಲ್ಲ...." ತತ್ತರಿಸಿದಳು.

ತುಟಿ ಒರಟಾಗಿ ಉಜ್ಜಿದ ಸಂತುರಾಮ.

"ನಿನ್ನೆ ಕೊಂದ್ರೆ ವಿಪರೀತ ಲಾಭ. ಸೌಭಾಗ್ಯಳಿಗೆ ಬಲವಂತದ, ಕೆಟ್ಟ ಮದುವೆ ತಪ್ಪುತ್ತೆ. ನಾನು ಕೊಲೆಗಾರ ಅನ್ನೋ ರಹಸ್ಯ ನಿನ್ನೊಂದಿಗೆ ಅಡಗಿ ಹೋಗತ್ತೆ. ಆಮೇಲೆ ನನಗೆ ನಿಶ್ಚಿಂತೆ. ಹಾಯಾದ ನಿದ್ರೆ... ಚಂದ್ರಬಾಬು ಉಯಿಲು ಮಾಡೋದಿಕ್ಕೆ ಮೊದಲು ನನ್ನೊಂದಿಗೆ ಹೇಳಿದ್ರು. ಅವರ ಮಗಳ ರಕ್ಷಣೆ, ಪೋಷಣೆ ವಿಷಯ ಪ್ರಥಮವಾಗಿತ್ತು..."

"ಚಂದ್ರಬಾಬು ಸಾಯೋದಿಕ್ಕೆ ಎರಡು ದಿನಗಳಿಗೆ ಮೊದಲು ನನಗೂ ಉಯಿಲಿನ ವಿಷಯ ಹೇಳಿದ್ರು. ಅದು ಪಿತಾಪುರಂ ಹತ್ರ ಇದೆ... ಎಸ್ಟೇಟಿನ ವ್ಯವಹಾರಗಳಿಗೆ ನಷ್ಟವಾಗದ ಹಾಗೆ ನೋಡ್ಕೊಂಡು, ಪದ್ಮಾವತಿಯ ಮದುವೆ ಮಾಡಿದೋರಿಗೆ ಆಸ್ತಿಯ ಕಾಲು ಭಾಗ ಅಂತ ಮಾಡಿದ್ರು. ಎಸ್ಟೇಟಿಗೆ ನಷ್ಟವಾಗೋದಿರಲಿ, ಅದನ್ನ ಎರಡರಷ್ಟು ವೃದ್ಧಿ ಪಡಿಸಿದೀವಿ ನಾನು, ನಮ್ಮಣ್ಣ."

ರಕ್ಕಸ ಕೈಗಳು ಸೋತು, ಇಳಿದು ಒಂದನ್ನೊಂದು ಉಜ್ಜಿದವು.

"ಚಂದ್ರಬಾಬು ಮೋಸಗಾರ..!"

ಕಣ್ಣು ಮುಚ್ಚಿ ನೋವಿನ, ಕಂಪನದ ಗೊಗ್ಗರು ಸ್ವರ ಹಾಕಿದ.

ಹನ್ನೊಂದು ವರ್ಷಗಳ ಮನಃಕ್ಲೇಶ, ಅಲೆದಾಟ. ಬವಣೆಗಳ ಮಧ್ಯೆ ಲಕ್ಷಗಳ ಕನಸು ಕಂಡ ರಕ್ಕಸ ದೇಹದ ಮಾನವೀಯ ಹೃದಯಿ ಎದೆಗೆ ಕೈ ಹೆಚ್ಚಿ ನಿಧಾನವಾಗಿ ನೆಲಕ್ಕೆ ಕುಸಿದ, ದೊಡ್ಡ ದೇಹ ನೀಳವಾಗಿ ಚಾಚಿತು.

"ಸಂತು... ಬರ್ನಾರ್ಡ್!....."

ಮೀನಾಕ್ಷಿಯ ಭೀತಿ, ಆರ್ತ ಕರೆಗೆ ಹರಡಿಬಿದ್ದಿದ್ದ ದೇಹ ಕಿಂಚಿತ್ತೂ ಮಿಸುಕಲಿಲ್ಲ.

# ೧೩

ಬಿಳಿಯ ಪಾರಿವಾಳ ಕತ್ತು ಹೊರಳಿಸಿ ಮೆಲ್ಲನೆಯ ಗುಟುರಿನಲ್ಲಿ ಮಿಸುಕಾಡಿತು. ಕಾರ್ತೀಕ ಅದರ ಬೆನ್ನು ಮೃದುವಾಗಿ ಸವರಿ ಮೇಲಕ್ಕೆ ತೂರಿದ. ಪಟಪಟ ರೆಕ್ಕೆ ಬಡಿದು ಗಗನಕ್ಕೇರಿದ ಕಪೋತ ಮತ್ತೆ ಹಿಂದಕ್ಕೆ ಇಳಿದು ಓರೆಯಾಗಿ ತೇಲಾಡಿ ಎಸ್ಟೇಟು ಬಂಗಲೆಯ ಮೇಲಿನ ಮೂಲೆಗೆ ರೆಕ್ಕೆ ಮುದುರಿ ಕುಳಿತಿತು.

ಅಂದಿನ ಸಾರಕ್ಕಿಯ ಪಕ್ಷಿ ಪ್ರೇಮಿಗೆ ಎಷ್ಟೋ ವರ್ಷಗಳ ನಂತರ ವಿಹಂಗಮವೊಂದನ್ನು ಗಗನಕ್ಕೆ ಹಾರ್ದಿಕವಾಗಿ ತೂರಿ ಬಿಡುವ ಸಂತಸ ದೊರಕಿತ್ತು.

“ಬಿಳಿ ಪಾರಿವಾಳ ಹಾರಿಸೋದು ಶಾಂತಿ ಸೂಚಕ ಅಂತಾರೆ. ಸಂತುರಾಮನ ಆತ್ಮಕ್ಕೆ ಶಾಂತಿ ಸಿಗಲಿ ಅನ್ನೊ ಪ್ರಾರ್ಥನೆ ಹೀಗೆ ಸಲ್ಲಿಸ್ತಾ ಇದೀನಿ.

ಅವನ ಸಂತಾಪ ಸೂಚನೆ ಸೌಭಾಗ್ಯಳ ಕಿವಿ ಮುಟ್ಟಲಿಲ್ಲ.

ಕಾದಂಬರಿಕಾರ ಗಗನಕ್ಕೆ ತಲೆ ಎತ್ತಿದ. ಬರ್ನಾರ್ಡ್ ನಿಗೂಢ, ಸಮಸ್ಯಾತ್ಮಕ ವ್ಯಕ್ತಿ ಮಾತ್ರವಲ್ಲ, ಸೊಗಸಾದ ಕಥೆಗಾರ! ಸಂತುರಾಮ ತನ್ನ ಸೋದರನಾಗಿ ಹೆಚ್ಚಿನ ಬಂಧು ಎಂದು ಬರಹಗಾರನಿಗೆ ಕಥೆ ಹೇಳಿ, ತಾನೇ ಸಂತುರಾಮನಿಗೂ ಕಣ್ಮರೆಯಾದ ದೊಡ್ಡ ಸಸ್ಪೆನ್ಸ್ ಕಥೆಯ ಮಹಾ ಬರಹಗಾರ. ಅವನ ಬರಹದಲ್ಲಿ ತನ್ನದು ಜೊಳ್ಳು ಪಾತ್ರ!

ಡೊಂಕು ಅಂಚಿನ ವಲಯದಲ್ಲಿ ನಿಂತ ನೀರಿನ ಮೇಲೆ ನೆಟ್ಟಿತ್ತು ಸೌಭಾಗ್ಯಳ ಏಕ ದೃಷ್ಟಿ. ಬಂಗಲೆಯ ಹಿಂದಿನ ತೋಟದಲ್ಲಿ ಕುಸಿದ ಹುಲ್ಲು ಆವರಣದ ಹೊಂಡ, ಚಾಚಿದ ಹುಲ್ಲು ಎಳೆಗಳ ಮಧ್ಯೆ ಕಪ್ಪು ಬಣ್ಣದಲ್ಲಿ ಮಿನುಗುವ ಜಲ ಪದರ. ಅಂಚಿನಲ್ಲಿ ಬಾಯಿ ತೆರೆದು ತೇಲಿದ ಕಪ್ಪೆಗಳಿಗೆ ಕೀಟಗಳನ್ನು ಗಬಕ್ಕನೆ ನುಂಗುವ ಕಾತರ.

ಕಪ್ಪೆಯೊಂದು ನೀರಿನಡಿಗೆ ಸರಿದಾಗ ನೀರಿನ ಮೇಲೆ ತರಂಗಗಳ ಪ್ರವಹನ. ತೇಲಿ ಹೋಗುವ ಕೆಂಪು ಕಣಗಲೆ ಹೂ ದಳಗಳು...

ನಿನ್ನೆಯವರೆಗೆ ಪಪ್ಪ ಎನಿಸಿದ ಬರ್ನಾರ್ಡ್‌ನಿಗೆ ಪ್ರಿಯವಾದುದು ಕೆಂಪುಕಣಗಲೆ. ಕ್ರೌರ್ಯದ ಸಂಕೇತವಾದ ಕೆಂಪು ಹೂವಿನ ಮೇಲೆ ಅವನಿಗೆ ಎಲ್ಲಿಲ್ಲದ ಮಮತೆ. ಹಾರಂಗಿ ಕಾಲೋನಿ ಮನೆಯ ಅಂಗಳಕ್ಕೆ ಮೊದಲು ತಂದು ನೆಟ್ಟ ಗಿಡ ಅದು.

ಕೆಂಪು ಕಣಗಲೆಗಳ ತಟ್ಟೆ ಹಿಡಿದು ಸೌಭಾಗ್ಯ ಹಿಂದಿನ ದಿನ ಬಂಗಲೆಯ ಕೋಣೆ ಬಾಗಿಲು ನಿಶ್ಶಬ್ದವಾಗಿ ಸರಿಸಿ ಕಾಲಿಟ್ಟಾಗ ಸಂತುರಾಮ ವಿಶಾಲ ಹಾಸಿಗೆಯ ಮೇಲೆ ನಿಶ್ಚಲನಾಗಿ ಮಲಗಿದ್ದ, ಸೂರ್ಯ ನೆತ್ತಿಗೆ ಬಂದಿದ್ದ ನೆಟ್ಟ ನಡು ಹಗಲು. ಕಿಟಕಿಗಳು ವಿಶಾಲವಾಗಿ ತೆರೆದಿದ್ದರೂ ತುಂಬಿದ ಸೆಕೆ.

ಅವನ ಕಣ್ಣುಗಳು ಅರ್ಧ ತೆರೆದಿದ್ದವು. ಭುಜ ಸ್ಪರ್ಶಿಸಿದಾಗ ಉಸಿರಾಟ ಸಶಬ್ದಗೊಂಡಿತು. ಮುಖ ವಿವರ್ಣಗೊಂಡಿತ್ತು.

ಬಾಗಿಲು ತಳ್ಳಿಕೊಂಡು ಲಗುಬಗೆಯಿಂದ ಪ್ರವೇಶಿಸಿದ ವೈದ್ಯನ ಕೈಲಿ ದ್ರವ ಮದ್ದು ತುಂಬಿದ ಸೂಜಿ ಕೊಳವೆ. ಅವನ ಹಿಂದೆ ಮೀನಾಕ್ಷಿ, ಕಮಲಹಾಸ.

"ಅವರಿಗೆ ಷಾಕ್ ತಟ್ಟಿದೆ. ಕೋಣೆಯಿಂದ ಹೊರಬನ್ನಿ" ಎಂದ ವೈದ್ಯ ಮಲಗಿದವನ ಕಣ್ಣಾಲಿ ಹಿಗ್ಗಿಸಿದ.

ಅರ್ಧ ತಾಸು ಕಳೆದು ಸೌಭಾಗ್ಯ ಮತ್ತೆ ಕೋಣೆಗೆ ಬಂದಾಗ ಅವನು ಪೂರ್ತಿಯಾಗಿ ಕಣ್ಣು ತೆರೆದಿದ್ದ. ನೂರು ಹೇಳುವ ಕಾತುರ, ಆತುರ. ಒಂದು ಮಾತೂ ಹೊರ ಬೀಳದು.

"ಪಪ್ಪ...."

ಸಮೀಪದಿಂದ ಮೆಲ್ಲನೆ ಕರೆದಾಗ ಕಷ್ಟದಿಂದ ಮೇಲೆದ್ದ ಬೆರಳು ನಕಾರದಲ್ಲಿ ಆಡಿತು.

"ನಿನ್ನ ಪಪ್ಪ ಅಲ್ಲ, ನಿಜವಾದ ಪಪ್ಪನ ಆಳು."

ಹಾಗೆಂದು ಸೂಚಿಸಿತು ಬೆರಳು.

ಮೀನಾಕ್ಷಿಯ ಮುಖ ಮುಂದೆ ಬಂದಾಗ ಅವನ ಕಣ್ಣು ಭಿಮ್ಮನೆ ಮುಚ್ಚಿತು.

"ಚಂದ್ರಬಾಬುವಿನ ಉಯಿಲು! ಕಾಲು ಭಾಗದ ಆಸ್ತಿ ನನಗಿಲ್ಲವೆಂಬ ಚಿಂತೆ ಇಲ್ಲ. ಆತಂಕ ಹೆಚ್ಚಿದೆ, ಮೀನಾಕ್ಷಿಗೆ ಆ ಪಾಲು ಸೇರಿ, ಅವಳೊಂದಿಗೆ ವ್ಯವಹರಿಸುವ ಸೌಭಾಗ್ಯಳ ಗತಿ?"

ತುಟಿಗಳಿಂದ ಹೊರಬೀಳದ ಆ ಸುಪ್ತ, ಕುಪಿತ ಪದಗಳು ಮೀನಾಕ್ಷಿಯೊಬ್ಬಳಿಗೇ ಕೇಳಿದುದು.

ಸೌಭಾಗ್ಯ ಒಬ್ಬಳೇ ಆದಾಗ ತುಣುಕು ಶಬ್ದಗಳಲ್ಲಿ ಅವನಿಂದ ಹೊರಬಂದುದು ಮೂರು ಸಂಗತಿಗಳು.

ಸೌಭಾಗ್ಯ ಚಂದ್ರಬಾಬುವಿನ ಮಗಳು ಪದ್ಮಾವತಿ. ಬರ್ನಾರ್ಡ್ ಹೆಸರು ಹೊತ್ತ ತಾನು ಕೊಲೆಗಾರ ಸಂತುರಾಮ. ಸೌಭಾಗ್ಯ ಕಾರ್ತೀಕನ ಹೆಂಡತಿ.

ಕರ್ತವ್ಯ ಪೂರೈಸಿತು. ಧ್ವನಿ ಬದಲಿಸಿತು, ಉಸಿರಾಟ ಹಗುರವಾಗಿ ಕೆಂಪು ಕಣಗಲೆ ನಿಟ್ಟಿಸುತ್ತಿದ್ದ ಕಣ್ಣುಗಳಲ್ಲಿ ಹೊಳಪು ಕಾಣಿಸಿತು. ಅರೆಮುಚ್ಚಿದ್ದ ಆ ಕಣ್ಣುಗಳು ಎರಡು ಕ್ಷಣಗಳಲ್ಲಿ ಪೂರ್ಣವಾಗಿ ರೆಪ್ಪೆಗಳಾದವು. ನಂತರ ಸೌಭಾಗ್ಯಳ ಕಣ್ಣುಗಳ ಮುಂದೆ ನಿಂತುದು ಪಪ್ಪನನ್ನು ದಹಿಸಿದ ಬೆಂಕಿಯ ಕೆನ್ನಾಲಿಗೆಗಳು.

ಶ್ರೀಮಂತ ಚಂದ್ರಬಾಬುವಿನ ಮಗಳು ಎಂಬ ತಥ್ಯಾಂಶದಲ್ಲಿ ಈಗ ಸೊಗಡು

ತೋರದು. ಬರ್ನಾರ್ಡ್ ಪಪ್ಪನ ಅಬ್ಬರದ ಪರಿಸರದಲ್ಲಿ ಕೆಸು ಅಡಗಿತ್ತು. ಕಾಲೋನಿ ಮನೆಯ ಮಸಿ ಹಿಡಿದ ಗೋಡೆಗಳು, ವಾಹನದ ಬಿಡಿ ಭಾಗಗಳ ರಾಶಿಯ ಮಣಕು ಮೂಲೆ, ಹಳೆಯ ಕ್ಯಾಲೆಂಡರ್, ಕಣಗಲೆ ಪೊದೆಯ ಪಕ್ಕದ ಒಗೆಯುವ ಕಲ್ಲು, ಚರಂಡಿ ವಾಸನೆ, ಅಲ್ಯೂಮಿನಿಯಂ ಪಾತ್ರೆಗಳ ಸದ್ದು, ಗುಡುಗುಡುವ ಟ್ರಕ್ ಇವುಗಳ ಸಾಮೀಪ್ಯದ ಬದುಕಿನಲ್ಲೇ ಸಮರಸದ ಸ್ವಾರಸ್ಯ.

ತುಪ್ಪ ಬರ್ನಾರ್ಡ್ ತನ್ನ ತಂದೆ ಅಲ್ಲ! ತಂದೆಗೂ ಹೆಚ್ಚಾಗಿ ತನ್ನನ್ನು ಸಾಕಲು ಹನ್ನೊಂದು ವರ್ಷಗಳ ಅಜ್ಞಾತವಾಸದಲ್ಲಿ ಸಜೀವವಾಗಿ ಬೆಂದವನು, ತನ್ನ ಸಲುವಾಗಿಯೇ ಚಿಕ್ಕಪ್ಪ ಶತ್ರುಘ್ನಬಾಬುನನ್ನು ಕೊಲೆ ಮಾಡಿ, ರಕ್ಷಣೆಯ ಹೊಣೆಯೊಂದಿಗೆ ಚಿಂತೆ ಕಟ್ಟಿಕೊಂಡವನು. ಬವಣೆಯ ಬದುಕಿನಿಂದಾಗಿಯೇ ಅವನ ಮಗು ಜಯಶೀಲ ಹೆಂಡತಿ ಸರೋಜ ಮರಣ ಹೊಂದಿದ್ದು. ಎಲ್ಲಾ ತನ್ನ ಸಲುವಾಗಿ...!

ಸೌಭಾಗ್ಯಳ ನೇರ ದೃಷ್ಟಿ ಅಚಲವಾಗಿತ್ತು.

"ಸ್ವಲ್ಪ ದೂರ ಡ್ರೈವ್ ಹೋಗಿ ಬರೋದು ಸರಿ, ಸೌಭಾಗ್ಯ."

ಬುಲ್ ಬುಲ್ ತರಂಗ್ ಹಿಡಿದು ನಿಂತ ಕಾರ್ತೀಕ ಅವಳತ್ತ ಕೈ ಚಾಚಿದ. ಅವನ ಮೇಲೆ ಒಣ ದೃಷ್ಟಿ ಹರಿಸಿ ಎದ್ದು ನಿಂತಳು.

ಚಾಚಿದ ಕೈ ನಿಧಾನವಾಗಿ ಇಳಿಸಿದ. ಮಾತಿಲ್ಲದೆ ಅವನನ್ನು ಹಿಂಬಾಲಿಸಿದಳು. ವೀಲ್ ಹಿಡಿದು ಕುಳಿತಳು. ಕಾರು ಹೆಬ್ಬಾಗಿಲಿನ ವಿರುದ್ಧ ದಿಕ್ಕಿನಲ್ಲಿ ಕಿರು ರಸ್ತೆಯ ಮೇಲೆ ಸೇತುವೆ ದಾಟಿತು.

"ನಾನು ಡ್ರೈವ್ ಮಾಡ್ಲೆ?"

ಶ್ರೀಮಂತೆಯನ್ನು ವಿನಯಪೂರ್ವಕವಾಗಿ ಕೇಳಿದ. ಅವಳು ಮೌನ ಮುರಿಯಲಿಲ್ಲ. ನಿಮಿಷ ಕಳೆದು ಮತ್ತೆ ಗಂಭೀರ ಪ್ರಶ್ನೆ ಹಾಕಿದ.

"ಬರ್ನಾರ್ಡ್ ಯಾಕೆ ಇದ್ದಕ್ಕಿದ್ದ ಹಾಗೆ ತೀರಿಹೋಗಿದ್ದು?"

ಕಣ್ಣುಗಳ ಮುಂದೆ ಆರು ಅಡಿಗಳ ಎತ್ತರದ, ಉಕ್ಕಿನ ಕಾಯದ ವ್ಯಕ್ತಿ ಎದೆ ಉಬ್ಬಿಸಿ ನಿಂತಿದ್ದ. ಅವನಿಂದ ಹರಿದ ಕೊನೆಯ ದಿನಗಳ ವಿನಮ್ರ ಮಾತುಗಳು ಕೇಳಿದುವು. ಬಂಡೆಗಳ ಗರ್ಭದಿಂದ ಹೊರಬೀಳುವ ಇಂಪಾದ ಸಂಗೀತದಂತೆ!

"ಅದು ನಿಮಗೇ ಚೆನ್ನಾಗಿ ಗೊತ್ತಿರಬೇಕು."

ದೀರ್ಘ ಮೌನ ಮುರಿದವಳಿಂದ ಈಟಿಯಂತೆ ಬಂದಿತ್ತು ಉತ್ತರ. ದಟ್ಟ ಮೋಡದಿಂದ ಸೀಳಿ ಬಂದ ವರ್ಷಾಘಾತ! ಅವನ ಉಸಿರಾಟ ಕುಗ್ಗಿತು.

"ಈ ಉತ್ತರದಿಂದ ನನಗೆ ಆಶ್ಚರ್ಯ ಆಗ್ಲಿಲ್ಲ. ಸೌಭಾಗ್ಯ. ನಿನ್ನ ಈಚಿನ ವರ್ತನೆಗೆ

ನಾನು ಒಗ್ಗಿ ಹೋಗ್ತಾ ಇದೀನಿ. ಮಿತಭಾಷಿ ಅನ್ನಿಸಿ ಕೊಂಡೋನು ಮಾತುಗಾರ ಆಗಿದೀನಿ. ನನ್ನ ಮೇಲೆ ನಿನಗೆ ಸಂಶಯ! ನಾನು ಇಲ್ಲಿಂದ ಹೊರಟುಬಿಡ್ತಿದ್ದೆ. ಹೊರಟುಬಿಡೋಣ ಅಂತ ಬರ್ನಾರ್ಡ್‌ಗೂ ಹೇಳಿದ್ದೆ. ವಕೀಲ ಪಿತಾಪುರಂ ಬಂದುಬಿಡಲಿ ಅನ್ನೋದು ಅವನ ನಿರ್ಧಾರ. ಅವನ ನಿರ್ಧಾರ. ಅವನ ಮನಸ್ಸಿನಲ್ಲಿ ಏನಿತ್ತೊ ಹೇಳಲಾರೆ. ಅವನಿಗೆ ದಿಢೀರ್ ಸಾವು ಬರೋದು ನಾನು ಕಲ್ಪಿಸಿಕೊಂಡಿರಲಿಲ್ಲ. ಬರ್ನಾರ್ಡ್‌ಗೆ ಆಸ್ತಿ ವಿಷಯದಲ್ಲಿ ಯಾವುದೊ ಅನಿರೀಕ್ಷಿತ ಮನಸ್ಸು ಇರಿದಿರಬೇಕು. ಬರ್ನಾಡ್‌ನ ಪೂರ್ವಚರಿತ್ರೆ ಯಾರಿಗೊ ಗೊತ್ತಾಗಿದೆ. ಇದು ನನ್ನ ಊಹೆ."

ಕಾರು ಮೆಲ್ಲನೆ ಸಾಗಿತ್ತು.

"ಬರ್ನಾರ್ಡ್‌ನ ಹಿಂದಿನ ಕಥೆ ನಿಮಗೆ ಗೊತ್ತಿರಲಿಲ್ಲವೆ?" ಧ್ವನಿಯಲ್ಲಿ ಪರೀಕ್ಷಿಸುವ ಭಾವ ಸ್ವಲ್ಪವೂ ಇಳಿದಿರಲಿಲ್ಲ.

"ರೈಲಿನಲ್ಲಿ ಬರೋವಾಗ ಕಥೆ ಹೇಳಿದ್ದ. ಕೊಲೆಗಾರ ಸಂತುರಾಮ ತನ್ನ ಬಂಧು ಅಂತ ಹೇಳಿದ್ನೆ ಹೊರತು ತಾನೇ ಸಂತುರಾಮ ಅನ್ನೋದರ ಸುಳಿವೇ ಕೊಡಲಿಲ್ಲ. ಅದರಿಂದ ನನ್ನ 'ಮಣ್ಣಿನ ದೋಣಿ'....."

ಫಕ್ಕನೆ ಅವನ ಕಡೆ ತಿರುಗಿ ಮಾತು ನಿಲ್ಲಿಸಿದಳು.

"ಮಣ್ಣಿನ ದೋಣಿ ಅನ್ನೊ ಪದ ಮತ್ತೆ ಬಳಸಬೇಡಿ."

"ನನ್ನ ಕಾದಂಬರಿ ಜೀವಂತ ಕಥೆ. ಅದು ನಾಟಕ ಅಲ್ಲ. ನಾನು, ನೀನು ಸೇರಿರೊ ಕೃತಿ. ನಿನಗೆ ಅಷ್ಟೊಂದು ಬೇಸರ ತರೋದಾಗಿದ್ರೆ ಅದರ ಹೆಸರು ಎತ್ತೋದಿಲ್ಲ."

"ನಾನು ಚಂದ್ರಬಾಬು ಮಗಳು ಅನ್ನೋದು ನಿಮಗೆ ತಿಳಿದಿತ್ತು..."

"ಬರ್ನಾರ್ಡ್ ಹೇಳಿದ್ದ."

"ಎಷ್ಟೊಂದು ಮುಚ್ಚುಮರೆ! ನೀವು ಅದನ್ನ ನನಗೆ ಹೇಳಬಹುದಿತ್ತು."

"ಹೇಳಿದೆನಲ್ಲ, ವಕೀಲರು ಬರೋವರೆಗೆ ಯಾರಿಗೂ ಹೇಳಬಾರದೂಂತ ತಿಳಿಸಿದ್ದ. ಕೊಲೆಗಾರ ದಿಗ್ಬಂಧನಕ್ಕೆ ಸಿಕ್ಕಿದ್ದ. ಬಹುಶಃ ವಕೀಲರ ಎದುರಿನಲ್ಲಿ ಅವನು ಹೇಳೊ ರಹಸ್ಯಗಳನ್ನ ಉಳಿಸಿಕೊಂಡಿದ್ದ ಅಂತ ತಿಳಿತೀನಿ. ಸೌಭಾಗ್ಯ, ಈ ಪ್ರಶ್ನೆಗಳ ಅಗತ್ಯ ನಿನಗಿದೆಯೆ?"

ಅವನ ಮಾತಿಗೆ ಲಕ್ಷ್ಯ ನೀಡದೆ ಮುಂದುವರಿಸಿದಳು.

"ಇಲ್ಲಿಗೆ ಬರೊ ಮೊದಲು ಬರ್ನಾರ್ಡ್‌ಗೆ ಹಣದ ನಿಬಂಧನೆ ಹಾಕಿದ್ರಾ?"

ಕೋರ್ಟಿನ ಕಟಕಟೆಯಲ್ಲಿ ನಿಂತವನಂತಾಗಿದ್ದ ಕಾರ್ತೀಕ. ತಿರುಗು ಬಾಣ!

ತಾನೇ ಅವಳಿಗೆ ಸಾಧಿಸಿಕೊಟ್ಟ ಪ್ರಬುದ್ಧತೆಯ ಪರಿಣಾಮ. ಪ್ರಶ್ನೆ ಗಳ ಗಾಳ! ಸೌಭಾಗ್ಯಳಿಂದ ಪ್ರಶ್ನೆ ಹಾಕಿಸುತ್ತಿರುವ ವ್ಯಕ್ತಿ ಯಾರು?

"ಹಣದ ನಿಬಂಧನೆ ಅಂದ್ರೆ?" ರಸ್ತೆಯ ಕಡೆಗೆ ನೋಡಿದ.

"ಬೇಗಂಚೆರ್ಲಾಗೆ ಬಂದರೆ ಎಷ್ಟು ಹಣ ಕೊಡ್ತಿಯ ಅಂತ ಬರ್ನಾರ್ಡ್‌ಗೆ ಷರತ್ತು ಹಾಕಿದ್ದು."

ತುಟಿ ಕಚ್ಚಿದ ಬರಹಗಾರ. ಬರ್ನಾರ್ಡ್‌ನನ್ನು ಹಣದ ಬಗೆಗೆ ಹಾಗೆ ಕೇಳಿದ್ದುಂಟು. ಹಲವು ಲಕ್ಷ! ಬರ್ನಾರ್ಡ್ ಹಾಗೆಂದು ಹೇಳಿದ್ದ.

'ಮಣ್ಣಿನ ದೋಣಿ'ಯ ಕಥಾನಾಯಕ ಧನದಾಹಿ, ನಿಜ.

ಇದು ಕಾದಂಬರಿಗೆ ಹತ್ತಿದ ಹೊಸ ತಿರುವು ಎಂದು ಹೇಳಿದರೆ ಸೌಭಾಗ್ಯಳ ಮುಂದೆ ಅದು ನಾಟಕ. ತನ್ನಲ್ಲಿ ಅವಳಿಗೆ ವಿಶ್ವಾಸ ಕುಸಿಯುತ್ತಿದೆ!

"ಹೌದು, ಹಣದ ಷರತ್ತು ಹಾಕಿದ್ದೆ" ಉಗುಳು ನುಂಗಿದ.

"ಸರಿ, ಈಗ ಎಷ್ಟು ಹಣ ಬೇಕು?"

ಕಾರ್ತೀಕ ಹೌಹಾರಿದ. ನಲವತ್ತು ಲಕ್ಷಗಳ ಆಸ್ತಿಯ ಬಾಧ್ಯಸ್ಥೆಯಿಂದ ಗತ್ತಿನ ಪ್ರಶ್ನೆ! ತನ್ನಿಂದ ಪಡೆಯಲಿರುವ ಬಿಡುಗಡೆಗೆ ಹೇರಳವಾದ ಪರಿಹಾರ ಧನ? ಬರಹಗಾರನಿಗೆ ತಲೆ ಸುತ್ತಿ ಬಂತು.

"ನನಗೆ ಹಣ ಬೇಕಿಲ್ಲ, ಸೌಭಾಗ್ಯ.'

"ಮತ್ತೇನು ಬೇಕು?"

"ನಗೆ ಬೇಕಾದೋಳು ನೀನು"

ಸ್ವಾಭಿಮಾನಕ್ಕೆ ಬಿದ್ದ ಪೆಟ್ಟನ್ನು ತಾಳ್ಮೆಯಿಂದ ಸಹಿಸಿದ.

ಮೋಟಾರ್ ಸೈಕಲ್ ಶಬ್ದ ಕೇಳಿಸಿತು. ಹಿಂದಕ್ಕೆ ನೋಡಿ ಉಸಿರೆಳೆದುಕೊಂಡ. ಸುಧಾಕರ!

"ಸುಧಾಕರ ಹಿಂಬಾಲಿಸಿ ಬರ್‍ತಾ ಇದಾನೆ" ಬೇಸರ ತೋರಿದ.

"ಅದರಲ್ಲಿ ತಪ್ಪೇನಿದೆ?"

ಅಚ್ಚರಿಗೊಂಡವನು ಮರುಕ್ಷಣ ಪೆಚ್ಚಾದ.

"ತಪ್ಪು ಅಂತ ಹೇಳ್ಲಿಲ್ಲ. ಶೋಕದಲ್ಲಿರೊ ನಿನಗೆ ಯಾರಿಂದಲಾದರೂ ಸಾಂತ್ವನದ ಮಾತು ಬೇಕಿತ್ತು. ನನಗೆ ಬದಲು ಅವನೇ ಈ ಕಾರಿನಲ್ಲಿ ನಿನ್ನೊಂದಿಗೆ ಬರಬೋದಿತ್ತು. ಬೆನ್ನಿಗೆ ಬರೊ ಅಗತ್ಯ ಏನಿತ್ತು? ಅಲ್ಲಿ ನನ್ನ ಕೋಣೆ ಮೇಲೆ ಕಣ್ಣುಗಾವಲು. ಈಗ ಮಾತಿಗೊಂದು ಕಟ್ಟುಪಾಡು..."

"ಅದು ನಿಮ್ಮ ಕಲ್ಪನೆ"

ಅವನಿಗೆ ತಾನು ಸ್ಥಿಮಿತತೆಯಲ್ಲಿರುವೆನೆಂದು ತೋರುವ ಇಚ್ಛೆ. ಪರಿಸ್ಥಿತಿ ಬದಲಿಸಬೇಕೆನ್ನಿಸಿತು.

ಬುಲ್ ಬುಲ್ ತರಂಗದ ಮೇಲೆ ಬೆರಳು ಹೂಡಿ 'ಚಿಣ್' ಎನ್ನಿಸಿದ. ರಾಗ ಹರಿಯಿತು.

'ತಲೆಯಲ್ಲಿ ಒಯ್ದುಳು ಗುಲಾಬಿ ಹೂವ....'

ಸೌಭಾಗ್ಯ ಕಿಂಚಿತ್ತೂ ಇಷ್ಟಪಡದವಳಂತೆ ತಲೆ ಒದರಿ ಕೈ ಅಡ್ಡ ಬಂದಳು.

"ನೀವೇ ಸೇರಿಸಿದ ಸಂಗೀತ ಶಾಲೆಯಲ್ಲಿ ಅಷ್ಟು ಹಾಡು ಕಲಿತೆ. ನೀವು ಯಾವತ್ತೂ ನನ್ನಿಂದ ಹೇಳಿಸೋದು ಇದೊಂದೇ ಹಾಡು. ಅದೇ ಒಣಹಾಡು! ಪ್ರಪಂಚದಲ್ಲಿ ಇದೊಂದೇ ಇರೋದು ಅನ್ನೊ ಹಾಗೆ...."

ಅವಳಿಗೆ ಅಳು ಬಂದಿತ್ತು.

"ಆ ಒಣ ಹಾಡು ಮತ್ತೆ ಚಿಗುರಿದೆ. ಮೊದಲು ಅದರಲ್ಲಿ ಶರ್ಮಿಳಾ ಮುಖ ಕಾಣ್ತಿದ್ದೆ. ಈಗ ನಿನ್ನನ್ನೇ ಇದಕ್ಕೆ ಹೊಂದಿಸಿಕೊಳ್ತಾ ಇದೀನಿ. ಇಬ್ಬರ ಮಧ್ಯೆ ತೆರೆ ಇತ್ತು. ತಲೆಯಲ್ಲಿ ತುಂಬಿದ ಕೀಟಗಳನ್ನು ಹೊರಹಾಕಿ ತೆರೆ ಸರಿಸೋದಿಕ್ಕೆ ಪ್ರಯತ್ನ ಮಾಡ್ದೆ. ನಾನು ಸಮೀಪಕ್ಕೆ ಬರ್ತಾ ಇರೊ ಕಾಲದಲ್ಲಿ ನೀನು ದೂರಕ್ಕೆ ಸರಿದು ಹೋಗ್ತಾ ಇದೀಯ. ಇದು ನಿನ್ನ ಕಾಲ. ನಿನ್ನ ಪರಿಸರದಲ್ಲಿ ತುಂಬಿರೋದು ಹಣದ ವಾಸನೆ!"

ಅವಳಿಂದ ಕಟು ಪ್ರತಿಕ್ರಿಯೆ ನಿರೀಕ್ಷಿಸಿದ. ಉತ್ತರಿಸುವ ಬದಲು ಬ್ರೇಕಿನ ಮೇಲೆ ಪದೇ ಪದೇ ಕಾಲು ಒತ್ತಿದಳು.

"ಬ್ರೇಕ್ ಕೆಲಸ ಮಾಡ್ತಿಲ್ಲ..."

ತುಸು ಗಾಬರಿಯಿಂದ ಹೇಳಿದರೂ ಅವನಿಗಾಗಿ ಕುಗ್ಗುವ ಕುರುಹು ಮಾತಿನಲ್ಲಿ ಕಾಣದು.

ಕಾರು ನಿಧಾನವಾಗಿಯೇ ಚಲಿಸುತ್ತಿತ್ತು.

"ವೀಲ್ ಬಿಡು, ಬಾಗಿಲ ಕಡೆ ಜರುಗು...."

ವೀಲ್ ಒಂದು ಕೈಲಿ ಹಿಡಿದು ಬಲಗಾಲು ನೀಳವಾಗಿ ಚಾಚಿ ಇಕ್ಕಟ್ಟಿನಲ್ಲಿ ಬ್ರೇಕ್ ಒತ್ತಿದ. ಬ್ರೇಕ್ ಹಿಡಿಯಲಿಲ್ಲ. ಅವನೂ ಆತಂಕಗೊಂಡ. ಆತಂಕ ಮುಖದಲ್ಲಿ ತೋರಲಿಲ್ಲ. ಆ ಮುಖ ನೋಡಿದವಳು ಒಣ ನಗೆ ಹಾಕಿದಳು.

"ಹನ್ನೊಂದು ವರ್ಷದ ಹಿಂದೆ ನನ್ನ ತಂದೆ ಚಂದ್ರಬಾಬು, ನನ್ನ ತಾಯಿ ದೇವಕಿ ಇದೇ ಘಾಟಿನ ರಸ್ತೆಯಲ್ಲಿ ಬಂದಿದ್ರಂತೆ."

"ಇರಬೋದು.. ಆದರೆ ಅಂತಾ ಅಪಘಾತ ಈಗ ಆಗಲಿಕ್ಕಿಲ್ಲ."

"ಆಗ ನನ್ನ ಚಿಕ್ಕಪ್ಪ ಶತ್ರುಘ್ನಬಾಬುವಿನ ಕೈವಾಡ ಅದರಲ್ಲಿ ಇದ್ದಿದ್ರೆ ಆಶ್ಚರ್ಯ ಇಲ್ಲ ಅಂತಾರೆ."

ಬೀಸುತ್ತಿದ್ದ ಗಾಳಿಗೆ ಅಡ್ಡಲಾಗಿ, ಗಟ್ಟಿಯಾಗಿ ಕೇಳಿದ.

"ಏನು ಹೇಳ್ತಾ ಇದೀಯ? ಈಗ ಬ್ರೇಕ್ ಕೆಟ್ಟಿರೋದ್ರಲ್ಲಿ ನನ್ನ ಕೈವಾಡ ಇದೆ ಅಂತಲೆ? ಹಾಗಿದ್ರೆ ನಾನೂ ಯಾಕೆ ಇದರಲ್ಲಿ ನಿನ್ನೊಂದಿಗೆ ಕೂಡ್ತಿದ್ದೆ?"

"ಇದೂ ಒಂದು ತರಹದ ಹೊಸ ಸಂಚು. ಕಾರ್ತೀಕ, ನೀವು ಒಬ್ಬ ಶ್ರೀಮಂತೆಯ ಗಂಡ. ಬೇಡವಾದ ಶ್ರೀಮಂತೆ! ಅವಳು ಸತ್ತರೆ ಇಡೀ ಆಸ್ತಿ ನಿಮ್ಮದು..."

"ನಿನಗೆ ಬುದ್ಧಿ ವಿಕಲ್ಪವಾಯ್ತೆ?" ಅರಚಿದ.

ಕಾರು ತಗ್ಗಿಗೆ ಇಳಿಯಲಾರಂಭಿಸಿತು. ಹಿಂದಿನಿಂದ ಗಟ್ಟಿಯಾಗಿ ಹಾರನ್ ಕೇಳಿಸಿತು.

ಸುಧಾಕರ ಪಕ್ಕದಿಂದ ಕಾರು ದಾಟುತ್ತಾ ಇಬ್ಬರಿಗೂ ಕೈ ಆಡಿಸಿದ. ಚಾಲಕನ ಆತಂಕ ಚೆನ್ನಾಗಿ ಗ್ರಹಿಸಿದ. ಮುಂದೆ ಸಾಗಿ ಮೋಟಾರು ಸೈಕಲ್ ಪಕ್ಕಕ್ಕೆ ನಿಲ್ಲಿಸಿದ.

ಸರ್ರನೆ ವೇಗ ಹಿಡಿಯಿತು ಕಾರು. ಅವಳನ್ನು ಒತ್ತಿ ಸರಿಸಿದ ಕಾರ್ತೀಕ ವೀಲ್ ಸರಿಯಾಗಿ ಆಡಿಸಿ ಕ್ಲಚ್ ಒತ್ತಿ ಗೇರ್ ಎಳೆದ. ಕ್ಲಚ್ ಸಡಿಲ ಬಿಡುತ್ತಲೇ ವಿಕಾರ ಶಬ್ದದೊಂದಿಗೆ ಯಂತ್ರ ನಿಷ್ಕ್ರಿಯವಾಯಿತು. ಕಾರು ನಿಲ್ಲಲಿಲ್ಲ!

ಐನೂರು ಅಡಿಗಳ ಕೆಳಗಿನ ಕಮರಿ ಆಕಳಿಸುವಂತೆ ಕಾಣಿಸಿತು. ಹೊಲ, ಕೆರೆ, ಮನೆಗಳು ಓಲಾಡಿದವು.

"ಬ್ರೇಕ್ ಪೂರ್ತಿ ಹೋಗ್ಬಿಟ್ಟಿದೆ. ಗೇರ್ ಕೆಟ್ಟು ಹೋಯಿತು. ಉಳಿದಿರೋದು ಒಂದೇ ದಾರಿ. ನಿನ್ನ ಪಕ್ಕದ ಬಾಗಿಲು ತೆಗಿ. ಕಾರು ವೇಗಕ್ಕೆ ಬರೊ ಮೊದಲೆ ಕೆಳಕ್ಕೆ ಹಾರ್ಬಿಡು...."

"ಕಾರ್ತೀಕ, ನೀವು ಹಾರಿ ಮೊದಲು."

ದಂಗಾದ ಕಾರ್ತೀಕ. ಇಂತಹ ಅಪಾಯಕಾರಿ ಸನ್ನಿವೇಶದಲ್ಲೂ ತನ್ನ ಮೇಲೆ ಸಂಶಯ! ವಿಕೃತ ಬುದ್ಧಿಯವಳಿಂದ ಕಟು ಪರೀಕ್ಷೆ!

"ಸರಿ, ಹಾರ್ತೀನಿ. ನೀನು ಆ ಕಡೆ ಹಾರು!"

ಉತ್ತರಕ್ಕೆ ಕಾಯದೆ ಕಾರ್ತೀಕನ ಎಡ ಪಕ್ಕದ ಬಾಗಿಲು ತೆರೆದು ಹೊರಕ್ಕೆ ಹಾರಿ ಉರುಳಿ ಹೋದ. ಅರ್ಧ ನಿಮಿಷದ ಷಾಕ್‌ನಿಂದ ಹೊರ ಬಂದು ನೆಗ್ಗಿದ ಮೈ ಉಜ್ಜುತ್ತಾ ಎದ್ದು ನಿಂತಾಗ ಕಾರು ಡೊಂಕಿನಲ್ಲಿ ಮರೆಯಾಗಿತ್ತು.

ಮೈ ಮರೆತು ಗಾಬರಿಯಿಂದ ಮುಂದಕ್ಕೆ ವೇಗವಾಗಿ ಧಾವಿಸುತ್ತಾ ಕೂಗಿದ.

"ಹಾರು, ಸೌಭಾಗ್ಯ. ಜಂಪ್!"

ವಾಹನ ಮತ್ತಷ್ಟು ವೇಗವಾಗಿ ಇಳಿಯುತ್ತಿತ್ತು. ಸೌಭಾಗ್ಯ ಹೊರಕ್ಕೆ ಜಿಗಿಯಲಿಲ್ಲ!

ಹಿಂದಿನಿಂದ ಭೋರ್ಗರೆದ ಮೋಟಾರು ಸೈಕಲ್ ಕಾರ್ತೀಕನನ್ನು ಸವರುವಷ್ಟು ಪಕ್ಕದಲ್ಲಿ ಸರಿದುಹೋಯಿತು. ಕಾರು ದಾಟಿ ಅದಕ್ಕೆ ಮುಂದೆ ಅಡ್ಡಲಾಗಿ ನಿಂತಿತು.

ಸೌಭಾಗ್ಯ ಅಡ್ಡಲಾಗಿ ನಿಂತ ವಾಹನವನ್ನು ತಪ್ಪಿಸುವ ಯತ್ನದಲ್ಲಿ ಕಾರು ಸರ್ರನೆ ತಿರುಗಿಸಿ ಕಣ್ಣು ಮುಚ್ಚಿ ಚೀತ್ಕರಿಸಿದಳು. ಎಡ ಪಕ್ಕದ ದಿಬ್ಬಕ್ಕೆ ಬಲವಾಗಿ ಘರ್ಷಿಸಿದ್ದಳು. ವಾಹನ ಎರಡು ಸಾರಿ ಹಿಂದೆ ಮುಂದೆ ತೂರಾಡಿ ಸ್ಥಗಿತಗೊಂಡಿತು.

"ಏನಾಯ್ತು, ಸೌಭಾಗ್ಯ? ಸರಿಯಾಗಿ ಇದೀರಿ ತಾನೆ?"

ಮೋಟಾರು ಸೈಕಲ್‌ನಿಂದ ಇಳಿದು ಓಡಿ ಬಂದ ಸುಧಾಕರ ಅವನ ಕೆನ್ನೆ ತಟ್ಟಿದ. ಗಾಬರಿಯಿಂದ ಕಣ್ಣು ತೆರೆದಳು. ಶರೀರ ಥರಥರ ಕಂಪಿಸುತ್ತಿತ್ತು.

"ನಿಮಗೆ ಡಿಕ್ಕಿ ಹೊಡಿಬಾರದೂಂತ ಏನೊ ಮಾಡ್ದೆ. ಏನಾಯ್ತೊ ಗೊತ್ತಿಲ್ಲ."

ಏದುಸಿರಿನಲ್ಲಿ ತಡೆತಡೆದು ತೊದಲಿದಳು.

"ಏನೂ ಆಗ್ಲಿಲ್ಲ. ನೀವು ದಿಬ್ಬದ ಕಡೆ ಕಾರು ತಿರುಗಿಸಲಿ ಅಂತಲೆ. ನಾನು ನಿಮಗೆ ಅಡ್ಡ ಬಂದದ್ದು.

"ನಾನು ಸರಿಯಾಗಿದೀನಿ... ಕಾರ್ತೀಕ?"

ಕಣ್ಣುಗುಡ್ಡೆ ಆಡಿಸುತ್ತಾ ಹಿಂದಕ್ಕೆ ನೋಡಿದಳು. ಸುಧಾಕರನೂ ಅತ್ತ ತಿರುಗಿದ. ಕಾರ್ತೀಕ ಓಡಿ ಬರುತ್ತಿದ್ದ.

"ಸ್ವಾರ್ಥಿ! ಹೆಣ್ಣು ಒಬ್ಬಳನ್ನೇ ಕಾರಿನಲ್ಲಿ ಉಳಿಸಿ ತನ್ನ ಪ್ರಾಣ ಕಾಪಾಡಿಕೊಳ್ಳೋದಿಕ್ಕೆ ಮೊದಲು ಹಾರಿದ ವಂಚಕ."

ಕಟುವಾಗಿ ಅವಳಿಗೆ ಒಪ್ಪಿಸಿದ ಸುಧಾಕರ.

"ಪೆಟ್ಟಾಯ್ತೆ, ಸೌಭಾಗ್ಯ?"

ಕಾರಿನ ಕಿಟಕಿಯಲ್ಲಿ ತಲೆ ಹಾಕಿ ಗೊರಗು ಧ್ವನಿಯಲ್ಲಿ ಕೇಳಿದ ಕಾರ್ತೀಕ. ವ್ಯಂಗ್ಯದಲ್ಲಿ ಗಹಗಹಿಸಿದ ಸುಧಾಕರ.

"ಆಪತ್ಕಾಲಕ್ಕೆ ಎಲ್ಲಿಂದಲಾದ್ರೂ ರಕ್ಷಣೆ ಸಿಗುತ್ತೆ. ಮಿಸ್ಟರ್ ಕಾರ್ತೀಕ ನಾನು ಅಡ್ಡ ಬರದೆ ಹೋಗಿದ್ರೆ, ಸೌಭಾಗ್ಯ ತಳ ಭಾಗದ ಕಮರಿಗೆ ಬೀಳ್ತಿದ್ರು. ಕೇವಲ ಅನ್ನ, ಬಟ್ಟೆಯಿಂದ ಮನೆಯಲ್ಲಿ ಕೊಡೊ ರಕ್ಷಣೆ ಹಾಗಲ್ಲ ಇದು."

"ಷಟಪ್!" ಸಿಡಿದು ಕೂಗಿದ.

"ದೊಡ್ಡ ಬರಹಗಾರರ ಮುಂದೆ ನಾನು ಬಾಯಿ ಮುಚ್ಚಲೇಬೇಕು. ನಿಮಗೆ ಕೋಪ ಬಂದ್ರೂ ಚಿಂತೆಯಿಲ್ಲ. ಕಾರಿನಿಂದ ನೀವು ಮೊದಲು ಹಾರಿದ್ದು ನೋಡಿ ನನಗಾದ ಅರ್ಥ ನಾನು ತಿಳಿಸ್ದೆ. ಏನಂತ? ಸ್ವಾರ್ಥಿ! ವಂಚಕ!"

ಕಾರಿನಿಂದ ಇಳಿದು ನಡುಗುತ್ತಾ ನಿಂತಿದ್ದ ಸೌಭಾಗ್ಯಳ ಕೈ ಹಿಡಿದು ಮೋಟಾರ್ ಸೈಕಲ್ ಬಳಿಗೆ ಕರೆದೊಯ್ದು ಸುಧಾಕರ ಹಿಂದಕ್ಕೆ ತಿರುಗಿದ.

"ಮಿಸ್ಟರ್ ಕಾರ್ತೀಕ, ಸೌಭಾಗ್ಯಳಿಗೋಸ್ಕರ ಪ್ರಾಣ ಕೊಡೋದಿಕ್ಕೆ ತಯಾರಿದೀನಿ ಅನ್ನೋದು ಈಗಲಾದ್ರು ಗೊತ್ತಾಗಿರಬೇಕು ನಿಮಗೆ."

ನೀಳವಾಗಿ ನಿಂತು, ಮುಖ ಓರೆ ಮಾಡಿ ವೀರನಂತೆ ಹೇಳಿದ. ಕಾರ್ತೀಕ ನಿರುತ್ತರನಾದಾಗ ಸೌಭಾಗ್ಯಳ ಕಡೆ ತಿರುಗಿದ.

"ಅವರಿಗೆ ಭಾರಿ ನಿರಾಶೆ ಆಗಿದೆ, ಸೌಭಾಗ್ಯ... ನೀವು ಈಗ ಸಾಯಲಿಲ್ಲ ಅಂತ. ಇವತ್ತಲ್ಲ ನಾಳೆ ಸಾಯೋದಿಕ್ಕೆ ಸಿದ್ಧವಾಗಿರಿ."

"ನನ್ನ ಬುದ್ಧಿ ಕೆಡೊ ಮೊದಲು ತೊಲಗು... ರ್‍ಯಾಸ್ಕಲ್!"

ಕಣ್ಣು ಮುಚ್ಚಿ ಅಬ್ಬರಿಸಿದ ಕಾರ್ತೀಕ.

"ವಯಸ್ಸಾದೋರ ಜೊತೆ ಚರ್ಚೆ ಮಾಡೋದು ತಪ್ಪು ಅಂತ ಬಲ್ಲೆ.

ಮೋಟಾರು ಬೈಕ್ ಸದ್ದು ಮೂಡಿಸಿತು. ಸೌಭಾಗ್ಯ ನಿರ್ವಿಕಾರವಾಗಿ ಸುಧಾಕರನ ಹಿಂದೆ ಕುಳಿತಳು. ಎಸ್ಟೇಟ್ ದಿಕ್ಕಿಗೆ ಧೂಳೆಬ್ಬಿಸಿ, ಭೋರಿಟ್ಟು ಸರಿದು ಹೋದ ವಾಹನವನ್ನು ನೋಡುತ್ತಾ ಕಲ್ಲಾಗಿ ನಿಂತ ಬರಹಗಾರ. ನಿಮಿಷ ಪೂರ್ತಿ ಕಳೆದ ನಂತರ ಅಲುಗಿದ ಕಲ್ಲಿಗೆ ಚೇತನ ಬಂತು.

ತಲೆ ಕೊಡವಿ ಕಾರಿನತ್ತ ನಡೆದು ಅದರಲ್ಲಿದ್ದ ಬುಲ್ ಬುಲ್ ತರಂಗ ಎತ್ತಿಕೊಂಡ.

* * *

ಕೆಂಪು ರಂಗಿನ ಪರಿಚಿತ ವಿದೇಶಿ ಕಾರು ಏರು ತಗ್ಗುಗಳಲ್ಲಿ ಹಾವಿನಂತೆ ಬಳುಕಿ ಹರಿದು ಸಮೀಪಕ್ಕೆ ಬಂದಾಗ ಪುಟ್ಟ ವಿಮಾನದಂತೆ ಕಂಡಿತು. ಬಂಗಲೆಯ ಚಾವಣಿಯಲ್ಲಿ ನಿಂತ ಮೀನಾಕ್ಷಿ ಕೆಂಪು ಕರವಸ್ತ್ರ ಜೋರಾಗಿ ಆಡಿಸಿ ಕೆಳಗಿಳಿದು ಬಾಣದಂತೆ ಓಡಿದಳು. ಕಮಲಹಾಸ ಅವಳ ಹಿಂದೆಯೇ ಸರಸರ ನಡೆದ.

ಕಾರು ಗಕ್ಕನೆ ತೂಗಿ ನಿಂತಿತು. ಅರವತ್ತೈದು ದಾಟಿದ, ಸಣಕಲು ದೇಹದ, ಸಣಬಿನ ತಲೆಯ, ತೀಕ್ಷ್ಣ ಕಣ್ಣುಗಳ ಸೂಟುಧಾರಿ ವಕೀಲ ಪಿತಾಪುರಂ ಕೆಳಗಿಳಿಯುವ ಮೊದಲೆ ಮೀನಾಕ್ಷಿ, ಕಮಲಹಾಸ ಅವನ ಪಾದ ಸ್ಪರ್ಶಿಸಿದರು.

"ತೊಗೊಳಿ, ಮಾಮ"

ಮೀನಾಕ್ಷಿ ಹಳದಿ ರಂಗಿನ, ಸುನೇರಿ ಸುತ್ತಿದ ಎರಡು ಬೀಡಾಗಳನ್ನು ಬೊಗಸೆಯಲ್ಲಿ ನೀಡಿದಳು. ದವಡೆಯ ಎಡ ಬಲಕ್ಕೆ ಎರಡನ್ನೂ ಒಂದೇ ಸಾರಿಗೆ ಸೇರಿಸಿದ ವೃದ್ಧ ಜೇಬಿನಿಂದ ನೀಲಿ ಮಕಮಲ್ ಹೊದಿಕೆಯ ತೆಳು ಪೆಟ್ಟಿಗೆ ಎಳೆದು ತುಂಬಿದ ಬಾಯಲ್ಲಿ ಹೇಳಿದ.

“ಸಂಜೆವರೆಗೆ ಆಗೋಷ್ಟು ನಾನು ತಂದಿದೀನಿ. ಸಬ್ಜಿ ಮಂಡಿ ರಸಿಕ ರಂಜಿನಿ!'

ವಿಶೇಷ ರೀತಿಯಲ್ಲಿ ತಯಾರಿಸಿದ ಬೀಡಾ ತೋರಿಸಿ ಪೆಟ್ಟಿಗೆ ಪಕ್ಕದ ಜೇಬಿಗೆ ಸೇರಿಸಿದ.

“ಮೀನು, ಎಲ್ಲಿ ಪದ್ದು?”

ಕಾಣಲು ಕಾತರಿಸಿದ ವ್ಯಕ್ತಿಗಾಗಿ ಬಂಗಲೆಯ ಕಡೆ ಗಿಡುಗನ ದೃಷ್ಟಿಯಲ್ಲಿ ನೋಡಿದ.

“ರಾಣಿಗುಡಕ್ಕೆ ಹೋಗಿದಾಳೆ, ಮಾಮ... ದೇವಸ್ಥಾನಕ್ಕೆ. ಅವಳಿಗೆ ನೀವು ಬರೋದು ಗೊತ್ತಿಲ್ಲ. ಬಲು ಸೂಕ್ಷ್ಮ ಮನಸ್ಸಿನೋಳು.”

ಬಂಗಲೆಯನ್ನು ಉದ್ದಗಲ ಅಳೆಯುವಂತೆ ನೋಡಿ ಎರಡು ಕೈ ಬೀಸುತ್ತಾ ನಡೆದು ಇಳಿಸಿದ ಕಂಠದಲ್ಲಿ ಹೇಳಿದ.

“ಸಂತುರಾಮನ್ನ ನೋಡಬೇಕಿತ್ತು. ವನವಾಸ ಮಾಡಿ ಪದ್ದೂನ ಬೆಳೆಸಿದೋನ ಬಾಯಿಂದಲೇ ಬಹಳ ಕೇಳಬೇಕಿತ್ತು. ಏನೇನು ಹೇಳಬೇಕೂಂತ ಇದ್ದನೊ! ಪೈಲ್ವಾನ ಚಿಟಕಿ ಹೊಡೆದ ಹಾಗೆ ಸತ್ತು ಹೋಗ್ತಾನೇಂತ ಗೊತ್ತಾಗ್ಲಿಲ್ಲ.”

ಅವನ ಶೋಕದ ನಿರೂಪಣೆಗೆ ಎಡ ಬಲದಿಂದ ಮಾತು ಬರಲಿಲ್ಲ. ವಕೀಲ ಬಲ ಪಕ್ಕದಲ್ಲಿ ನಡೆದ ಕಮಲಹಾಸನ ಬೆನ್ನಿಗೆ ಬೆರಳು ಬಡಿದ.

“ಈಚೆಗೆ ನೀನು ದಪ್ಪ ಆಗಿಬಿಟ್ಟೆ, ಕಮಲ. ಹೀಗೇ ಆಗ್ತಾ ಹೋದ್ರೆ ಮಿದುಳೂ ದಪ್ಪ ಆಗುತ್ತೆ. ದಪ್ಪ ಮಿದುಳಿಗೆ ನನ್ನಂತ ವಕೀಲ ಬೇಕಾಗೋದಿಲ್ಲ. ಅದೇ ಕುಬುದ್ಧಿ, ಕುಯುಕ್ತಿಕ ತುಂಬಿಕೊಳ್ಳತ್ತೆ. ಹಹ್ಹ, ಏನು?”

ಎರಡು ತುಣುಕು ನಗೆ ಹಾಕಿ ಅವನ ನಡು ತಿವಿದು ನಡೆದ. ಕಹಿಗುಳಿಗೆ ನುಂಗಿದಂತೆ ಕಮಲಹಾಸ ತುಟಿ ಹಿಗ್ಗಿಸಿ ಕೃತಕ ನಗೆಯಲ್ಲಿ ಸೌಜನ್ಯ ಪ್ರಕಟಿಸಿದ.

ಸಜ್ಜುಗೊಳಿಸಿದ ಅತಿಥಿ ಕೋಣೆ ಪ್ರವೇಶಿಸುತ್ತಲೇ ಕಮಲಹಾಸ ವಕೀಲನ ಕೋಟು ನಯವಾಗಿ ತೆಗೆದು ಸ್ಟ್ಯಾಂಡಿಗೆ ತೂಗುಹಾಕಿದ. 'ಆಹ್' ಎಂದು ಆಯಾಸ ತೋರಿ ಮಂಚದ ಮೇಲೆ ಕೂಡುತ್ತಲೇ ಮೀನಾಕ್ಷಿ ಮಂಡಿಯೂರಿ ಕುಳಿತು ಅವನ ಬೂಟು ಕಳಚಿಟ್ಟಳು. ವಕೀಲ ಸ್ವಲ್ಪವೂ ಸಂಕೋಚಪಡದೆ ಸ್ವೀಕರಿಸಿದ. ಮುಖ ತೊಳೆದು, ಮೆಣಸಿನ ಕಷಾಯ ತರಿಸಿ ಕುಡಿದ ಮೇಲೆ ಹಾಸಿಗೆಯಲ್ಲಿ ಕಾಲು ಚಾಚಿ ನೋಟ್ ಬುಕ್ ತೆಗೆದು ಕನ್ನಡಕ ಏರಿಸಿದ.

“ನಾನು ಬರೋವಾಗಲೆ ಎರಡು ಡಿಗ್ರಿ ಜ್ವರ ಹೊತ್ಕೊಂಡು ಬರ್ತಾ ಇದೀನಿ” ಮೆಲ್ಲನೆ ಕೆಮ್ಮಿದ.

“ಡಾಕ್ಟರನ್ನ ಕರೆಸ್ತೀನಿ” ಲಘು ಆತಂಕದ ಮುಖದಲ್ಲಿ ಮೀನಾಕ್ಷಿ ಮುಂದೆ

ಬಂದಳು.

"ಅಗತ್ಯ ಇಲ್ಲ. ರಾಣಿಗುಡದ ವೈದ್ಯನಿಗಿಂತ ನನಗೇ ವೈದ್ಯ ಚೆನ್ನಾಗಿ ಗೊತ್ತಿದೆ. ಮೂರು ತಾಸಿನ ಕುಂಭಕರ್ಣ ನಿದ್ರೆ ಮಾಡಿದ್ರೆ ಜ್ವರದ ವಿಳಾಸವೇ ಇರೋದಿಲ್ಲ."

"ವಿಶ್ರಾಂತಿ ತೊಗೊಳಿ, ಮಾಮ."

ಕಮಲಹಾಸ ಹೊರಡುವ ಸೂಚನೆ ತೋರಿದ. ವಕೀಲ ಬೆರಳೆತ್ತಿದ .

"ಸ್ವಲ್ಪ ತಾಳು, ಕಮಲ. ಆರು ತಿಂಗಳಲ್ಲಿ ನೀನು ಬಹಳ ಖರ್ಚು ಮಾಡಿದೀಯ ಅಂತ ಆಡಿಟರ್ ಹೇಳಿದ್ರು. ಪದ್ದೂನ ಹುಡುಕೊ ಕೆಲಸದ ಖರ್ಚು ಅಂತ ಸಲೀಸಾಗಿ ಹೇಳಿದ್ದೀಯಂತೆ. ಇಬ್ಬರಿಗೆ ಒಂದೂವರೆ ಸಾವಿರದ ಬೆಂಗಳೂರು ಬಾಡಿಗೆ ಮನೆ, ಬೆಂಗಳೂರಿಂದ ಇಲ್ಲಿಯವರೆಗೆ ಪ್ರತಿ ಸಾರಿ ಟ್ಯಾಕ್ಸಿ, ಚೆನ್ನಾಗಿ ಓಡ್ತಾ ಇದ್ದ ಟ್ರಕ್ ಮಾರಿದ್ದು, ಏನು ಇವೆಲ್ಲಾ? ಚಂದ್ರಬಾಬು ಹಣ ಅಂದ್ರೆ ವಿದ್ಯುತ್ ಕರೆಂಟ್ ಹಾಗೆ ತಿಳಿಬೇಕು ಅಂತ ಹೇಳಿದ್ದೆ. ಮತ್ತೆ ಈ ಬಂಗಲೆಗೆ ಬಣ್ಣ ಹಚ್ಚಿಸೋದು ಯಾಕೆ ನಿನ್ನ ತಲೆಗೆ ಬರ್ಲಿಲ್ಲ?... ನನ್ನ ನೋಡು. ನನ್ನ ಕಾರಲ್ಲೇ ಇಲ್ಲಿಯವರೆಗೆ ನನ್ನ ಖರ್ಚಿನಲ್ಲಿ ಬಂದು ಹೋಗ್ತಿದೀನಿ... ಮೀನು, ಈ ತಿಂಗಳು ಎಷ್ಟು ಸೀರೆ ತೊಗೊಂಡೆ?'

"ಎರಡೇ ಎರಡು, ಮಾವ."

ಕೆನ್ನೆಗೆ ಕೈಯಿಟ್ಟು, ಮುಖ ಓರೆ ಮಾಡಿ, ನಾಲಗೆ ಕಚ್ಚಿದಳು.

ಕಮಲಹಾಸ ತಡವರಿಸದೆ ವ್ಯವಹಾರಸ್ಥನ ಸಿದ್ಧ ಉತ್ತರ ನೀಡಿದ.

"ಪದ್ಮಾವತಿ ಮದುವೆಗೆ ಬಂಗಲೆ ಬಣ್ಣ ಮಾಡಿಸೋಣ ಅಂತ ಮೀನಾಕ್ಷಿ ಅಭಿಪ್ರಾಯ. ಅದು ಸರಿ. ಮೂರು ಟ್ರಕ್ ಇಲ್ಲಿಗೆ ಹೆಚ್ಚು ಅಂತ ಒಂದು ಮಾರಿದ್ದಾಯ್ತು. ಅದಕ್ಕೆ ಬದಲು ಒಂದು ವ್ಯಾನ್ ತರ್ತೀವಿ. ಮತ್ತೊಂದು ಖರ್ಚಿನ ವಿಷಯ. ಅದು ವ್ಯರ್ಥ ಆಗ್ಲಿಲ್ಲ. ಮಾಮ. ಸೌಭಾಗ್ಯಳನ್ನ ನೋಡಿದ ಕೂಡಲೇ ವಸಂತನಗರದಲ್ಲಿ ಮನೆ ಮಾಡಿದ್ವಿ. ದೊಡ್ಡ ವ್ಯಾಪಾರಿ ಅನ್ನಿಸಿಕೊಂಡೋನ ಮನೆ! ಹಾರಂಗಿ, ಶಿವನ ಸಮುದ್ರ, ಕೆಮ್ಮಣ್ಣುಗುಂಡಿ ಅಂತ ಎಲ್ಲೆಲ್ಲಿಗೊ ಟ್ಯಾಕ್ಸಿ ಮಾಡಿದ್ದು ಕಾರ್ತೀಕನನ್ನ, ಬರ್ನಾರ್ಡ್‌ನ ಗಮನಿಸೋದಿಕ್ಕೆ. ಆ ಬರ್ನಾರ್ಡ್ ಬೇಗಂಚೆರ್ಲಾಗೆ ಬರೊವರೆಗೆ ನಮಗೆ ಸಿಗ್ಲಿಲ್ಲ."

ಪಿತಾಪುರಂ ಎರಡು ಮೆತ್ತೆಗಳ ಜೋಡಿ ಹಾಸಿಗೆಗಳ ಮೇಲೆ ದೇಹ ಹರಡಿ ಆಕಳಿಸಿದ.

"ನನಗೆ ಎರಡು ಕಾಗದ ಬಂದಿತ್ತು. ಬಹುಶಃ ಬರ್ನಾರ್ಡ್ ಬರೆದಿದ್ದು ಅಂತ ಈಗ ತಿಳಿತೀನಿ.

ಮೀನಾಕ್ಷಿ, ಕಮಲಹಾಸ ತುಸು ಗಾಬರಿಯಿಂದ ಮುಖಮುಖ ನೋಡಿದಳು.

"ಎಲ್ಲಿಂದ? ಅದರಲ್ಲಿ ಏನಿತ್ತು, ಮಾಮ?"

ಮೀನಾಕ್ಷಿ ಅವನಿಗೆ ದಿಂಬು ಹೊಂದಿಸಿಕೊಟ್ಟಳು.

"ಎರಡೂ ಬೆಂಗಳೂರಿನ ಅಂಚೆಮುದ್ರೆ ಇದ್ದ ಕಾಗದಗಳು. ಅದರಲ್ಲಿ ಹೆಸರು, ವಿಳಾಸ ಇರ್ಲಿಲ್ಲ. ಅತಿ ಮುಖ್ಯವಾದ ಸಂಗೀತನ ನೇರವಾಗಿ ಇಲ್ಲಿಗೆ ಬಂದು ತಿಳಿಸ್ತೀನಿ ಅಂತ ಬರೆದಿತ್ತು. ನಾನು ಬರೋದ್ರಲ್ಲಿ ವ್ಯಕ್ತಿ ಹೋಗ್ಬಿಟ್ಟ ಮೀನು, ಅವನೇ ಸಂತುರಾಮ ಅಂತ ನೀನು ಹೇಗೆ ಕಂಡು ಹಿಡ್ದೆ ಮಗು?"

ಅರ್ಥ ಎದ್ದು ಮೆಚ್ಚಿಗೆಯಲ್ಲಿ ಕುತೂಹಲದ ಕಣ್ಣು ಮಾಡಿದ.

ಮೀನಾಕ್ಷಿ ಹಿಗ್ಗಿದ ಉತ್ಸಾಹದಲ್ಲಿ ಮುಂದೆ ಬಂದಳು.

"ಆ ದೊಡ್ಡ ಶರೀರ, ಹೊರಳಾಡೋ ಗೋಲಿ ಕಣ್ಣು, ಮಾತು ಮಾತಿಗೆ ಸಿಡಿಯೋದು ನೋಡಿ ನನಗೆ ಸಂಶಯ ಬಂತು. ನೀನೇ ಸಂತುರಾಮ ಅಂತ ಧೈರ್ಯವಾಗಿ ಹೇಳ್ದೆ. ಒಪ್ಪಿಕೊಂಡುಬಿಟ್ಟ. ಆದರೆ ಅವನಿಗೆ ಹೃದಯಾಘಾತ ಆಗುತ್ತೇಂತ ಬಹುಶಃ ಅವನಿಗೇ ಗೊತ್ತಿರಲಾರದು."

"ಕೊಲೆ ಆಪಾದನೆ ಇತ್ತೂಂತ ಇಲ್ಲಿಗೆ ಬಹಳ ತಡೆದು ಬಂದ ಕಮಲ. ಎಲ್ಲಿ ಪದ್ದು?... ಓ, ರಾಣಿಗುಡ್ಡಕ್ಕೆ ಹೋಗಿದಾಳೆ ಅಂದೆಯಲ್ಲ. ನನಗೆ ಮಧ್ಯಾಹ್ನದ ಊಟ ಬೇಡ. ಮೈ ನೋಯ್ತಾ ಇದೆ. ನಿದ್ರೆಯಿಂದ ಎದ್ದ ಕೂಡಲೆ ಮೊದಲು ಪದ್ದೂನ ನೋಡಬೇಕು."

ತುಂಬಿದ ಬಾಯಿ ಮುಂದೆ ತಂದು ಮೀನಾಕ್ಷಿ ಹಿಡಿದ ದಾನಿಗೆ ಎಲೆ ರಸ ಪಿಚ್ಚನೆ ಸುರಿಸಿದ. ಕಮಲಹಾಸ ಕೋಣೆಯಿಂದ ಹೊರಕ್ಕೆ ನಡೆದ. ಮೀನಾಕ್ಷಿ ಅಲ್ಲಿಯೇ ನಿಂತಳು.

"ಸ್ವಲ್ಪ ಮಾತಾಡ್ಬೇಕಿತ್ತು, ಮಾಮ."

ತಲೆ ತಗ್ಗಿಸಿ ಸೆರಗು ಬೆರಳಿಗೆ ಸುತ್ತುತ್ತಾ ಅಂಜಿಕೆಯಲ್ಲಿ ಧ್ವನಿಸಿದಳು. ವಕೀಲ ಆಸಕ್ತಿ ತೋರದೆ ಮೈ ಮುರಿದ.

"ಹಾಂ, ರಾತ್ರಿಗೆ ವಿರಾಮವಾಗಿ ಹೇಳುವಂತೆ... ನೀನು ಮರೆತಿರಬೇಕು. ತೆಗೆದಿಟ್ಟಿದೀಯಾ?" ಗೊಣಗು ಸ್ವರದಲ್ಲಿ ಕೇಳಿದ.

"ತೆಗೆದಿಟ್ಟಿದೀನಿ. ಗೂಂಗುರ ಪಿಚಡಿ ತಾನೆ?"

"ಥೂ! ಅದು ತಿನ್ನೋದು ಬಿಟ್ಟು ವರ್ಷ ಆಯ್ತು. ನಾನು ಕೇಳಿದ್ದು ನನ್ನ ಬ್ರೇನ್ ಟಾನಿಕ್."

ಮೀನಾಕ್ಷಿ ನಾಲಗೆ ಕಚ್ಚಿದಳು. ಆಗಲೇ ನೆನಪಿಗೆ ಬಂದಿದ್ದು. ನೆಲಮಾಳಿಗೆಯಿಂದ ಹಳೆಯ ದ್ರಾಕ್ಷಾರಸ ತರಿಸಿರಲಿಲ್ಲ.

"ನಾನೇ ಹೋಗಿ ತರ್ತೀನಿ, ಮಾಮ."

ಕಾಲು ಸರಿಸಿದವಳಿಗೆ ಮತ್ತೆ ಹೇಳಿದ.

"ಕೇಳು.. ಪದ್ದೂನ ಈಚೆಗೆ ಸಾಕ್ತಾ ಇರೋನು...."

"ಹುಂ, ಹುಂ.......ಕಾರ್ತೀಕ, ಘಾಟಿನ ರಸ್ತೆಯಲ್ಲಿ ಹೊರಟರೆ ತಾಸುಗಟ್ಟಲೆ ಬಂಗಲೆ ಮರೆತುಬಿಡ್ತಾರೆ. ಅವರಿಗೂ ಬರಲಿಕ್ಕೆ ಹೇಳ್ತೀನಿ."

ಮೀನಾಕ್ಷಿ ಬಾಗಿಲು ಸರಿಸಿ ಹೋದ ಮೇಲೆ ವಕೀಲ ಬಾಯಿ ತೊಳೆದು ಶೀಷೆಯಿಂದ ಗುಳಿಗೆ ತೆಗೆದ, ಯಾವುದೊ ಯೋಚನೆಯಲ್ಲಿ ನಾಲ್ಕು ನುಂಗಿದ. ಹಣೆ ಚಚ್ಚಿದ. ಎರಡು ಗುಳಿಗೆ ಹೆಚ್ಚಾಯಿತೆಂದು ಗೊಣಗಿದ.

ಸಂಜೆ ಐದರ ಇಳಿ ಬೆಳಕಿನಲ್ಲಿ ಮೀನಾಕ್ಷಿ ಬೀಗದಕೈ ಗೊಂಚಲು ಆಡಿಸುತ್ತಾ ಮೈಕುಲುಕಿಸಿ ದಿಬ್ಬ ಇಳಿದಳು. ಕಾರ್ತೀಕ ಅವಳ ಹಿಂದೆ ಎಚ್ಚರಿಕೆಯಿಂದ ಹೆಜ್ಜೆ ಎಳೆದ. ದ್ರಾಕ್ಷಿ ತೋಟದ ಹಿಂಬದಿಯ ಬಂಡೆಗಳ ಗುಂಪಿನತ್ತ ನಡೆದಿದ್ದರು.

ಸೌಭಾಗ್ಯಳ ಕಣ್ಣು ಪರ್ಯಾಯವಾಗಿ ಸರಿದಾಡಿತು. ಮೀನಾಕ್ಷಿಯ ದೇಹದ ಉಬ್ಬುಗಳ ಕುಣಿತದ ಕಡೆಗೆ... ಅದನ್ನೇ ನಿರುಕಿಸಿ ಕಣ್ಣು ತುಂಬಿಕೊಳ್ಳುತ್ತಿದ್ದ ಕಾರ್ತೀಕನ ಕಡೆಗೆ.

ಅದು ಬರಹಗಾರನ ವೀಕ್ಷಣೆ ಅಲ್ಲ. ಮೊನಚು ಕಣ್ಣುಗಳಲ್ಲಿ ಹೆಣ್ಣಿನ ಮೈ ಹೀರುವ ಅಗಾಧ ಹಸಿವು!

ಸೌಭಾಗ್ಯಳ ತಲೆಯಲ್ಲಿ ಗೊಂದಲ. ಕಲ್ಪನೆ ಔಚಿತ್ಯದ ಸೀಮೆ ದಾಟುತ್ತಿದೆಯೆ?

ಗಾಜಿನ ಜಾಡಿಗಳನ್ನು ಹಿಡಿದ ಆಳು ಕೆಳಗಿನಿಂದ ಕೂಗಿ ಎಚ್ಚರಿಸಿದ.

"ಬಂಡೆ ಮೇಲೆ ಬರಬೇಡಿ. ಕಾಲು ಜಾರುತ್ತೆ."

ಇಪ್ಪತ್ತೈದು ಅಡಿಗಳಷ್ಟು ತಳಕ್ಕೆ ಹರಡಿದ ನುಣುಪು ಬಂಡೆಯ ಹಾಸಗೆಗೆ ಬೆರಳು ಮಾಡಿ ಅದನ್ನು ತಪ್ಪಿಸಿ ಪಕ್ಕದಿಂದ ಇಳಿಯಲು ಸೂಚಿಸಿದ.

"ಮೀನಾಕ್ಷಿ ಹುಚ್ಚು ಹಿಡಿಸೋಷ್ಟು ಚೆಂದವಾಗಿ ಕಾಣ್ತಾಳೆ ಇವತ್ತು."

ಮಾತಿಲ್ಲದೆ ಇಳಿಯುತ್ತಿದ್ದ ಬರಹಗಾರನನ್ನು ಕೆಣಕುವಂತೆ ಹೇಳಿದಳು ಸೌಭಾಗ್ಯ. ಹೆಣ್ಣಿನ ಈರ್ಷ್ಯೆ ಸ್ಫುಟವಾಗಿತ್ತು.

ಬರಹಗಾರನ ಚೇತನದಲ್ಲೇ ಉಳಿದಿದ್ದ ಕಾರ್ತೀಕ ಸಹನೆಯಿಂದ ಪ್ರತಿನುಡಿದ.

"ಚೆಂದಾಗಿ ಕಾಣಿಸ್ಕೊಬೇಕು ಅನ್ನೊ ಹೋರಾಟ ಹೆಣ್ಣಿಗೆ ಹತ್ತಿದ ಶಾಪ. ಆ ಹೋರಾಟವನ್ನ ನೋಡಿ ಹುಚ್ಚು ಹಿಡಿಸ್ಕೊಳೋದು, ರಂಜನೆ ಪಡೆಯೋದು, ಮರುಕಪಡೋದು ವೀಕ್ಷಕನ ಪ್ರಕೃತಿಗೆ ಬಿಟ್ಟಿದ್ದು. ಈ ವೀಕ್ಷಕನ ಪ್ರಕೃತಿ ಹೇಗೇಂತ ಪ್ರಶ್ನೆ ಹಾಕ್ತೀಯಾ? ಹೆಣ್ಣಿನ ಸ್ವಭಾವ ಸಾಕಷ್ಟು ಅಭ್ಯಾಸ ಮಾಡಿದ್ರೂ ಹೆಣ್ಣಿನ ಸಹ

ಬದುಕಿನ ವಿಷಯದಲ್ಲಿ ನಾನು ಇನ್ನೂ ವಿದ್ಯಾರ್ಥಿ. ನನ್ನ ಮುಂದೆ ನಡೆದು ಹೋದ ಆ ಹೆಣ್ಣಿನ ಚರ್ಯೆಯಿಂದ ಇಷ್ಟು ಹೇಳಬಲ್ಲೆ. ಅವಳು ಚತುರೆ, ವ್ಯವಹಾರ ಕುಶಲೆ. ನಗೆಮುಖದ ಸಂಚುಗಾತಿ!"

ಕೆನ್ನೆ ಸವರಿಕೊಂಡ. ಹಿಂದಿನ ದಿನದ ಕಾರು ಅಪಘಾತ ಅವನ ಎಡಗನ್ನೆಯ ಮೇಲೆ ನಾಲ್ಕು ಗೀರು ಮೂಡಿಸಿತ್ತು.

"ನಿನ್ನೆ ರಾತ್ರಿ ನನ್ನಲ್ಲಿ ಅವಳು ಹೇಳಿದುದೇನು? ನಿಮ್ಮನ್ನ ಯಾಕೆ ಮದುವೆ ಆಗಬಾರದು ಅಂತ ಅನ್ನಿಸಿದೆಯಂತೆ ಅವಳಿಗೆ!"

"ಅವಳು ತಪ್ಪೇನೂ ಹೇಳಲಿಲ್ಲ. ಅವಳ ಅನಿಸಿಕೆ, ಆಸೆ, ಕನಸು, ಕಲ್ಪನೆ ಅವಳ ಸ್ವತ್ತು. ಅದನ್ನ ಯಾರೂ ಕೊಳ್ಳೆ ಹೊಡೆಯೊ ಹಾಗಿಲ್ಲ."

ಕಾರ್ತೀಕ ಚಿಂತಿಸಿದ. ಕೇವಲ ನಾಲ್ಕು ದಿನಗಳಲ್ಲಿ ಸೌಭಾಗ್ಯಳ ಮಾತು, ವರ್ತನೆ ಎಷ್ಟೊಂದು ಬದಲಿಸಿದೆ! ಹೆಣ್ಣು ಶ್ರೀಮಂತಿಕೆಯ ಚಂಡಮಾರುತಕ್ಕೆ ತತ್ತರಿಸಿದೆ, ಸೋತಿದೆ.

ಹೆಣ್ಣಿನ ಹೃದಯದಲ್ಲಿ ಕಾವು ಏರಿತು. ಧನದಾಹಿ ಮಾತಿಗೊಂದು ಸೋಗಿನ ಪ್ರತಿ ಮಾತು ಹೇಳಿ ಜಾರುತ್ತಿದ್ದಾನೆ.

ಮಾತಿನ ಸ್ವರ ಏರಿತು.

"ನಿಮ್ಮನ್ನ, ನಾನು ಅರ್ಥಮಾಡ್ಕೊಳ್ಳೊದಿಕ್ಕೆ ಪ್ರಯತ್ನಪಟ್ಟಷ್ಟೂ ನೀವು ಸಮಸ್ಯಾ ವ್ಯಕ್ತಿ ಆಗಿದೀರಿ. ನನ್ನ ಗೊಂದಲಕ್ಕೆ ಹಾಕ್ತಿದೀರಿ."

"ಅದು ದೃಷ್ಟಿ ದೋಷ, ಸೌಭಾಗ್ಯ. ಬರಹಗಾರ ಅಮಾನುಷ ಅಥವಾ ಅಸಾಮಾನ್ಯ ವ್ಯಕ್ತಿ ಅಲ್ಲ. ಅವನ್ನ ಅರ್ಥಮಾಡ್ಕೊಳ್ಳೊದಿಕ್ಕೆ ನೀನು ಬುದ್ಧಿ, ಕಣ್ಣುಗಳೊಂದಿಗೆ ಮನಸ್ಸನ್ನೂ ಸೇರಿಸ್ಕೊಬೇಕಾಗಿತ್ತು. ಮೊದಲು ನಿನ್ನ ದೃಷ್ಟಿ ಶುದ್ಧವಾಗಿತ್ತು. ಅದಕ್ಕೆ ಯಾರೊ ಬಣ್ಣದ ಗಾಜು ತೊಡಿಸಿದಾರೆ. ನಿನ್ನ ಮೇಲೆ ನನಗೆ ಪ್ರೀತಿ ಇದೆ. ಅಗಾಧ ಪ್ರೇಮ! ಅದು ತ್ರಿಕರಣ ಶುದ್ಧವಾದ್ದು ಅಂತ ಬರ್ನಾರ್ಡ್ ಮುಂದೆ ಹೇಳಿದ್ದೆ."

ತಲೆಯಲ್ಲಿ ಗೊಂದಲ ಬಿರುಸಾಯಿತು. ಮತ್ತೆ ಮಾತಿನಲ್ಲಿ ಕೃತಕತೆ!

"ನೀವು ಈಗ ಹೇಳ್ತಾ ಇರೋದಿಕ್ಕೆ ಕಾರಣ ಬಲ್ಲೆ" ದೂರಕ್ಕೆ ಕಣ್ಣು ತೂರಿದಳು.

"ನಿನ್ನ ಕಣ್ಣಿನ ಪೊರೆ ಕಳಚಿ ಬೀಳೊವರೆಗೆ ನಾನು ಮತ್ತೆ ಮಿತಭಾಷಿ ಆಗೋದು ಸರಿ. ನಿನ್ನ ಚಿಂತನೆಗೆ, ಅಭಿಪ್ರಾಯಕ್ಕೆ ಸ್ವಾತಂತ್ರ್ಯ ಇದೆ. ನನ್ನ ಮಾತು ಕೇಳು. ಮೀನಾಕ್ಷಿ ಇಷ್ಟೊಂದು ಚತುರೆ ಆದ್ರೂ ನಾನು ವಿವಾಹಿತ ಅನ್ನೋದು ಅವಳಿಗೆ ಗೊತ್ತಿಲ್ಲ. ಅವಳು ನನ್ನ ಮದುವೆ ಆಗಬೇಕು ಅನ್ನೊ ಆಸೆ ವ್ಯಕ್ತಪಡಿಸಿದ್ರೆ ಅವಳ ತಪ್ಪಲ್ಲ ಅಂತ ಮತ್ತೆ ಹೇಳ್ತೀನಿ. ಮೀನಾಕ್ಷಿ ಅಂತ ಆಸೆ, ಅಭಿಪ್ರಾಯವನ್ನ ನನ್ನ

ಮುಂದೆ ಪ್ರಕಟಿಸಿಲ್ಲ. ಅದಕ್ಕೊಂದು ಚಿತ್ರ ತಲೆಯಲ್ಲಿ ಕಲ್ಪಿಸ್ಕೊಬೇಡ. ನಿನ್ನ ಮದುವೆ ಆಗ್ತೀನಿ ಅಂತ ಸುಧಾಕರ ನನಗೆ ಹೇಳಿದಾಗಲೂ ನನ್ನ ಒಳ ತೆರೆ ಮೇಲೆ ಯಾವ ಕೆಟ್ಟ ಚಿತ್ರವೂ ಬರ್ಲಿಲ್ಲ."

"ಸರಿ, ನಿಮ್ಮ ಹೆಂಡತಿ ನಾನು ಅನ್ನೋದು ಯಾಕೆ ಹೇಳಬಾರದು ಮೀನಾಕ್ಷಿಗೆ?"

ಅಳುಕಿನಲ್ಲಿ ಎಳೆದು ಕೇಳಿದಳು.

"ಹಾಗೆ ಹೇಳೊ ಸಮಯ ಹತ್ತಿರ ಬರ್ತಿದೆ."

ಸೌಭಾಗ್ಯ ಅವಡು ಕಚ್ಚಿದಳು.

ಪೊಳ್ಳು! ಢೋಂಗು! ಬದುಕೆಲ್ಲಾ ಹೀಗೆಯೇ ಮಿತವಾಗಿ, ಗಂಭೀರವಾಗಿ ಮಾತಾಡಿದ ವ್ಯಕ್ತಿ ತನ್ನನ್ನು ಕೊನೆಗಾಣಿಸುವುದು ಸತ್ಯ. ಸುಧಾಕರ ಹೇಳಿದಂತೆ ನಿನ್ನೆ ತಾನು ಬದುಕಿಕೊಂಡುದು ಅವನಿಗೆ ನಿರಾಶೆ ತಂದಿದೆ.

"ನಿಧಾನ ಪ್ರವೃತ್ತಿ ಅಪಾಯಕಾರಿ"

"ನಿಧಾನ ಪ್ರವೃತ್ತಿ ಅಲ್ಲ. ಇದೊಂದು ಕಟ್ಟುಪಾಡು. ಬಂಧನ ಚೌಕಟ್ಟು ಇದ್ದರೇ ಬದುಕಿನಲ್ಲಿ ಒಬ್ಬರನ್ನೊಬ್ಬರು ಅರ್ಥ ಮಾಡ್ಕೊಳೋದಿಕ್ಕೆ ಅವಕಾಶ."

ಮೀನಾಕ್ಷಿ ಬಂಡೆಗಳ ಭಾಗದಿಂದ ಚಪ್ಪಾಳೆ ಹಾಕಿದಳು.

"ಎಷ್ಟು ಕೂಗ್ದೆ. ಚರ್ಚೆ ನಡೆಸ್ತಾ ಇದೀರಿ. ವೈನ್ ಸೆಲಾರ್ ನೋಡೋದಿಲ್ಲವೆ?"

"ಬರ್ತಿದೀವಿ" ಕಾರ್ತೀಕ ಆ ದಿಕ್ಕಿಗೆ ಕೈಬೀಸಿ, ಕೂಗಿ ಹೇಳಿದ.

"ವೈನ್ ಸೆಲಾರ್?.... ಏನು ಹಾಗಂದ್ರೆ?"

ಅರಿಯದ ಸ್ವತ್ತಿನ ಬಗ್ಗೆ ಕೇಳಿದಳು ಶ್ರೀಮಂತೆ.

"ದ್ರಾಕ್ಷಾರಸದ ನೆಲ ಮಾಳಿಗೆ. ನೀನು ಅಲ್ಲಿಗೆ ಹೋಗ್ತಾ ಇರೋದೂ ಮರೆತುಬಿಟ್ಟ ಹಾಗಿದೆ. ನೂರಾರು ವರ್ಷಗಳ ಹಿಂದಿನ ದ್ರಾಕ್ಷಾರಸ ಅಲ್ಲಿ ಶೇಖರಿಸಿದಾರಂತೆ. ಮದಿರೆ ಹಳೆಯದಾದಷ್ಟು ಅದರ ಬೆಲೆ ಹೆಚ್ಚು. ವಕೀಲ ಪಿತಾಪುರಂಗೆ ಹಳೆಯ ದ್ರಾಕ್ಷರಸ ಬಹಳ ಪ್ರಿಯವಂತೆ. ಅವರನ್ನ ಒಲಿಸಿಕೊಳ್ಳೋದಿಕ್ಕೆ ಮೀನಾಕ್ಷಿ ಅದನ್ನ ಒಯ್ದಿದಾಳೆ. ಆ ಸಂಪತ್ತಿಗೆಲ್ಲ ನೀನೇ ಒಡತಿ."

ಒಡತಿ ತುಟಿ ಬಿಗಿಸಿ ಅವನ ಕೈ ಹಿಡಿದು ಹುಲ್ಲು ಹಾಸು ದಾಟಿದಳು.

ಕಪ್ಪು ಹಿಡಿದ ಬಂಡೆಗಳ ಮಧ್ಯದ ಪ್ರವೇಶದಲ್ಲಿ ಆಳು ದೀಪ ಹೊತ್ತಿಸಿದ. ಮುಂದೆ ಬೆಳಕಿನಲ್ಲಿ ಹೆಜ್ಜೆ ಇರಿಸಿದರು.

ಕಲ್ಲು ಕಂಬಗಳ ಮೇಲೆ ಕಲ್ಲು ಚಾವಣಿ ಹೊದ್ದು ನಿಂತ ಹಳೆಯ ಹಜಾರ. ದಪ್ಪನೆಯ ಉಣ್ಣೆ ಬಟ್ಟೆಗಳ ಹೊದಿಕೆಯಿಂದ ಸುತ್ತಿದ ಬಾಗಿಲು ತೆರೆಯಿತು.

ಕಲ್ಲುಗಳ ಸಣ್ಣ ಮೊಗಸಾಲೆ. ಅದರ ಕೊನೆಯಲ್ಲಿ ನಾಲ್ಕು ಮೆಟ್ಟಿಲು ಇಳಿದ ಮೀನಾಕ್ಷಿ, ಕಪ್ಪಾದ ಹಳೆಯ ಓಕ್ ಮರದ ಬಾಗಿಲ ಮುಂದೆ ನಿಂತಳು. ಆಳು ದಪ್ಪನೆಯ ಬೀಗ ತೆಗೆದು ಭಾರವಾದ ಬಾಗಿಲು ಹಿಂದಕ್ಕೆ ತಳ್ಳಿದ.

"ನೀನು ಇಲ್ಲೇ ಇರು" ಎಂದು ಮೀನಾಕ್ಷಿ ದೀಪ ಹಾಕಿದಳು. ಆಳು ಹಿಂದಕ್ಕೆ ಸರಿದ.

"ಎಚ್ಚರಿಕೆಯಿಂದ ಬರಬೇಕು. ಮೆಟ್ಟಿಲು ಜಾರತ್ತೆ. ಒಂಬತ್ತು ಮೆಟ್ಟಿಲು."

ತಣ್ಣನೆಯ ಗಾಳಿ ಸೌಭಾಗ್ಯಳ ಮುಖ ಸವರಿಕೊಂಡು ಹೋಯಿತು. ಇಕ್ಕಟ್ಟಾದ ಎರಡನೆಯ ಮೊಗಸಾಲೆಗೆ ಬಂದರು. ಹಳೆಯ ಸಿಹಿ ವಾಸನೆ ಗುಬ್ಬನೆ ತೂರಿ ಬಂತು.

"ಕಾರ್ತೀಕ, ನಿಮ್ಮ ಕಾದಂಬರಿಗೆ ಇದನ್ನ ಬಳಸ್ಕೊಳೊದಿಕ್ಕಾದ್ರೆ ನೋಡಿ. ದ್ರಾಕ್ಷಾರಸದ ಗುಪ್ತ ಮಾಳಿಗೆ ಬಂಡೆಗಳ ಕೆಳಗೆ ಅವಿತಿರುತ್ತೆ. ಅದಕ್ಕೇ ಅದು ಸದಾ ತಣ್ಣಗಿರತ್ತೆ. ನೈಜಾಂಷಾಹಿ ಕಾಲದ್ದು ಇದು. ಚಂದ್ರಬಾಬು ತಂದೆ ವಶಕ್ಕೆ ಬಂದ ಮೇಲೂ ಹೀಗೇ ಉಳಿದಿದೆ... ಎಚ್ಚರಿಕೆ, ಈಗ ಇನ್ನಷ್ಟು ಮೆಟ್ಟಿಲು ಇವೆ.

ಮತ್ತೊಂದು ದಪ್ಪನೆಯ ಬಾಗಿಲು ಕಿರ್ರನೆ ತೆರೆಯಿತು. ಒಳಗೆ ಬೆಳಕಿರಲಿಲ್ಲ. ಹಿಂದಿನಿಂದ ತೂರಿ ಬರುತ್ತಿದ್ದ ಬೆಳಕು ಮತ್ತಷ್ಟು ಕಲ್ಲು ಮೆಟ್ಟಿಲುಗಳನ್ನು ತೋರಿತು. ಕಾರ್ತೀಕ ಸೌಭಾಗ್ಯಳ ಕೈ ಹಿಡಿದು ನಿಧಾನವಾಗಿ ಇಳಿಸಿದ.

ತುಸು ದೂರದಿಂದ ಮೀನಾಕ್ಷಿಯ ಎಚ್ಚರಿಕೆ ಮತ್ತೆ ಬಂತು.

"ಕತ್ತಲು, ಹೆಜ್ಜೆ ಹುಷಾರಾಗಿ ಇಳಿಸಿ, ಸೌಭಾಗ್ಯ. ಒಟ್ಟು ಹನ್ನೆರಡು ಮೆಟ್ಟಿಲು."

ಇಬ್ಬರೂ ಮೆಟ್ಟಿಲು ಎಣಿಸುತ್ತಾ ಇಳಿದು ತಳಗಿನ ಕತ್ತಲೆಯಲ್ಲಿ ನಿಂತರು. ಮೀನಾಕ್ಷಿ ಸ್ವಿಚ್ ಹಾಕಿದ ಸದ್ದು ಕೇಳಿತು. ಆದರೆ ದೀಪ ಹೊತ್ತಿಕೊಳ್ಳಲಿಲ್ಲ.

"ಹಳೆ ಬಲ್ಬು. ಕೆಟ್ಟು ಹೋಗಿರಬೇಕು. ಟಾರ್ಚ್ ಬೇಕು. ಸ್ವಲ್ಪ ತಾಳಿ. ಗೂಡಿನಲ್ಲಿರೊ ಟಾರ್ಚು ತರ್ತೀನಿ."

ಮೀನಾಕ್ಷಿ ಸೌಭಾಗ್ಯಳ ಕೈ ಹಿಡಿದು ಹತ್ತು ಹೆಜ್ಜೆಗಳಷ್ಟು ಕತ್ತಲಿನಲ್ಲಿ ಮುಂದಕ್ಕೆ ಕರೆದೊಯ್ದಳು. ಕಾರ್ತೀಕ ಹಿಂದೆಯೇ ಉಳಿದ. ಒಂದು ಹೆಜ್ಜೆಯಷ್ಟು ಮುಂದೆ ಏನಿದೆಯೆಂಬುದು ಗೋಚರವಾಗದಂತೆ ಪಸರಿಸಿದ ಕಾರ್ಗತ್ತಲು! ಸುಂಯ್ ಗುಡುವ ಮೆದು ಗಾಳಿ. ಶೀತಳ ಆವರಣ, ಕಮಟು ಸಿಹಿ ವಾಸನೆ.

ಹೆಜ್ಜೆಯ ಸರಿದಾಟ ಕೇಳಿಸಿತು.

"ಹೆದರಬೇಡಿ, ಸೌಭಾಗ್ಯ. ನೀವೂ ಅಷ್ಟೆ. ಕಾರ್ತೀಕ, ಹಾಗೇ ನಿಂತಿರಿ. ಎರಡೇ ನಿಮಿಷ. ಸರಿದಾಡಿದ್ರೆ ಡಿಕ್ಕಿ ಹೊಡೀತೀರಿ. ಹಾಗೇ ಕತ್ತಲಿಗೆ ಕಣ್ಣು ಹೊಂದಿಸಿ

ನೋಡಿ. ಪೀಪಾಯಿಗಳ ಸಾಲು. ಶೀಷೆಗಳ ಕಪಾಟುಗಳು ಕಾಣಿಸುತ್ವೆ. ಮೂರು ಮೆಟ್ಟಿಲಿನ ಕೆಳಗೆ ಗೂಡಿನಲ್ಲಿ ಟಾರ್ಚ್ ಇದೆ. ಬಂದೆ...."

ಒಂದು......ಎರಡು...........ಮೂರು....

ಟಪ ಟಪ ಹೆಜ್ಜೆಗಳ ಇಳಿತದ ಸದ್ದು ಕರಗಿ ಹೋಯಿತು.

ಸೌಭಾಗ್ಯಳ ಮೈ ಕಾರಣವಿಲ್ಲದೆ 'ಜುಂ' ಎಂದಿತು. ಪಾತಾಳದ ಕಗ್ಗತ್ತಲಿನಲ್ಲಿ ಒಂಟಿಯಾಗಿ ನಿಂತ ಅಪೂರ್ವ, ಭಯಾನಕ ಅನುಭವ! ರಕ್ಷಣೆಯಿಂದ ದೂರವಾದ ಲಕ್ಷಾಧಿಕಾರಿಣಿ!

ಆಕಾರ ತೋರದ, ಅಗೋಚರ ವಸ್ತುಗಳು ಸುತ್ತಲಿನಿಂದ ಆವರಿಸಿದಂತಾಯಿತು. ತಣ್ಣನೆಯ ಆವರಣದಲ್ಲಿ ಶರೀರ ಬೆವರು ಹೊಮ್ಮಿಸಿತು. ಎದೆ ಉಬ್ಬಿತು. ಸರ್ರನೆ ಕುಗ್ಗಿ ಚಪ್ಪಟೆಯಾಯಿತು.

ಹೊರಬಾಗಿಲು ಮುಚ್ಚಿ ಹೋಗುತ್ತದೆ! ತಾನು ಬೆಳಕಿನ ಪ್ರಪಂಚದಿಂದ ಪೂರ್ಣವಾಗಿ, ಶಾಶ್ವತವಾಗಿ ಬೇರ್ಪಡುತ್ತೇನೆ!

ಸೂಚನೆ ಮರೆತು ಹೆಜ್ಜೆಗಳು ಸರಿದವು. ದುರಸ್ತು ಕಾಣದ, ಹಳೆಯ ನೆಲದ ತಗ್ಗು ಮುಗ್ಗರಿಸುವಂತೆ ಮಾಡಿತು. ಹೃದಯ ಕಳಚಿ ಹೊರಬಂತು!

"ಕಾರ್ತೀಕ...."

ಪಿಸುಗು ಕರೆಗೆ ಮಾರ್ದನಿ ಇಲ್ಲ.

"ಮೀನಾಕ್ಷಿ...."

ತುಸು ಏರಿದ ಆರ್ತಸ್ವರ ಗುಹೆಯಲ್ಲಿ ನಶಿಸಿ ಹೋಯಿತು.

ಅದೇ ಮಸಿ ಕತ್ತಲು, ಮಸಣ ನೀರವತೆ.

ಅಸ್ಪಷ್ಟ ಆಕಾರವೊಂದು ಸರಿದಾಡಿತು. ಗೆಲುವಿನ, ಮೆಲ್ಲನೆಯ ವಿಕೃತ ನಗು!

ಭ್ರಮೆಯಲ್ಲ! ನೆರಳಿನಂತೆ ಕಂಡ ಆಕಾರ ತನ್ನನ್ನು ನೆಲಮಾಳಿಗೆಯಲ್ಲಿ ಕೊಣೆಗಾಣಿಸುವ ಸ್ಪಷ್ಟ ಸೂಚನೆ.

ಹತೋಟಿ ತಪ್ಪಿದ ಶರೀರದಲ್ಲಿ ಶಕ್ತಿಯೆಲ್ಲಾ ಒಂದಾಯಿತು. ಸರಸರನೆ ಹಿಂದಕ್ಕೆ ನಡೆದಳು.

ನೆಲ ಮಾಳಿಗೆಯ ನಿಶ್ಶಬ್ದತೆಯನ್ನು ಒಮ್ಮೆಗೇ ಭೇದಿಸಿದ ಭೀಕರ ಶಬ್ದ ಸಮೀಪದಲ್ಲಿ ಕೇಳಿಸಿತು. ಸೌಭಾಗ್ಯ ಎದೆ ಅವಚಿ ಹಿಡಿದಳು. ಇಡೀ ಕಲ್ಲು ಗುಪ್ತ ಮಾಳಿಗೆ ಕುಸಿದುಬಿದ್ದಂತೆ! ಅದರ ಹಿಂದೆಯೇ ದ್ರವದ ಪ್ರವಹನದ ಶಬ್ದ.

ಅರ್ಧ ನಿಮಿಷದ ಹಿಂದೆ ಸೌಭಾಗ್ಯ ನಿಂತಿದ್ದ ಭಾಗದಲ್ಲಿ ಸರಿಯಾಗಿ ಭಾರವಾದ

ವಸ್ತು ಬಿದ್ದಿತ್ತು! ಮಾಸಲು ರೇಖೆಯಲ್ಲಿ ಕಾಣುವ ಹೊರೆ.

ಎದೆ 'ಧಸ್' ಎಂದಿತು. ಅಲ್ಲಿ ತಾನು ನಿಂತಿದ್ದರೆ ಅಗೋಚರ ಭಾರ ವಸ್ತುವಿನ ಅಡಿಗೆ ಸಿಕ್ಕಿ ಚಪ್ಪಟೆಯಾಗುತ್ತಿದ್ದೆ!

ವಿಕೃತ ನಗೆ ಈಗ ಕೇಳಿ ಬರಲಿಲ್ಲ. ಟಾರ್ಚ್ ಬೆಳಕು ಅವಳ ಮುಖಕ್ಕೆ ಸರಿಯಾಗಿ ಬಿತ್ತು. ಹಿಮ ಜಲದ ಸೇಚನಕ್ಕೆ ಸಿಕ್ಕಿದವಳಂತೆ ಬೆಚ್ಚಿ ಚೀರಿದಳು.

"ಯಾಕೆ ಕೂಗ್ತೀರಿ?.... ನಾನು ಮೀನಾಕ್ಷಿ. ಹೆದರಬೇಡಿ, ಬರ್ತಾ ಇದೀನಿ. ಟಾರ್ಚು ಬೇಗ ಸಿಗಲಿಲ್ಲ... ಆ ಕಪಾಟು ಯಾಕೆ ಬಿದ್ದಿದ್ದು?"

ಟಾರ್ಚ್ ಬೆಳಕು ಓಲಾಡಿಸಿದಳು, ಕಠಿಣ ನೆಲದ ಮೇಲೆ ದ್ರಾಕ್ಷಾರಸದ ಶೀಷೆಗಳ ವಿಶಾಲ ಕಪಾಟು ನೀಳವಾಗಿ ಬಿದ್ದಿತ್ತು. ಜೊಳ ಜೊಳನೆ ಹರಿದಿತ್ತು ಮಾಸಲು ರಕ್ತ ರಂಗಿನ ದ್ರವ.

ಐದು ಹೆಜ್ಜೆಗಳ ದೂರಕ್ಕೆ ಕಾರ್ತೀಕ ಅಲುಗದೆ ನಿಂತಿದ್ದ!

ಮೀನಾಕ್ಷಿ ಬೇಸರ ಮಿಶ್ರಿತ ಆತಂಕ ವ್ಯಕ್ತಪಡಿಸಿದಳು.

"ಓಹ್. ರ್‍ಯಾಕ್ ಬಿದ್ದು ಹೋಗಿದೆ! ಕೆಲವು ಸಾವಿರ ನೆಲದ ಪಾಲಾಯ್ತು. ಚಿಂತೆ ಇಲ್ಲ. ಅದು ಮೇಲೆ ಅವಚಿ ಬಿದ್ದಿದ್ರೆ ಗತಿ?"

ಅಲ್ಲಿಯೇ ನಿಂತು ಇಬ್ಬರ ಮೇಲೂ ಬೆಳಕು ಹರಿದಾಡಿಸಿ ತಟ್ಟನೆ ಕೇಳಿದಳು.

"ಪೆಟ್ಟಾಯ್ತೆ, ಸೌಭಾಗ್ಯ?"

"ಇಲ್ಲ, ಸರಿಯಾಗಿದೀನಿ."

ನಡುಗುತ್ತಾ ಹೇಳಿ ಕಾರ್ತೀಕನ ದಿಕ್ಕಿಗೆ ಭೀತಿಯಿಂದ ನೋಡಿದಳು. ಅವನು ನೆಲ ಹಿಡಿದ ವಸ್ತುವನ್ನು ನಿರುಕಿಸುತ್ತಾ ಅಚಲನಾಗಿದ್ದ.

ಭಯಾನಕ ಮನುಷ್ಯ! ಎರಡನೆಯ ವಿಫಲ ಸಂಚು!

ಮೂವರೂ ಸೊಲ್ಲೆತ್ತಲಿಲ್ಲ. ಹನ್ನೆರಡು ಮೆಟ್ಟಿಲು ನಿಧಾನವಾಗಿ ಏರಿ ಕಲ್ಲಿನ ಮೊಗಸಾಲೆಗೆ ಬಂದಾಗ ಕಾರ್ತೀಕನ ಮುಖದಲ್ಲಿ ಅಣು ಮಾತ್ರದ ವಿಕಾರವೂ ಕಾಣಲಿಲ್ಲ.

"ಕಪಾಟು ಬಿದ್ದಿದ್ದು ಭೂಕಂಪದಷ್ಟು ಆರ್ಭಟ ಆಯ್ತು."

ಮೌನ ಮುರಿಯಲು ಜೊಳ್ಳು ಮಾತು. ಬೇಸರ ತರುವ ಅದೇ ಸೌಮ್ಯಮುಖ.

"ನಿಶ್ಶಬ್ದವಾದ ಮುಚ್ಚಿದ ಸ್ಥಳ, ಸಣ್ಣ ಸದ್ದು ಅತಿ ದೊಡ್ಡದಾಗಿ ಕೇಳಿಸುತ್ತೆ. ಸಣ್ಣ ಕೈವಾಡ, ಭೂಕಂಪದ ಅನಾಹುತ! ಅರೆ ನಿಮಿಷದಲ್ಲಿ ಸೌಭಾಗ್ಯಳ ಮರಣ. ಬೇಗಂಚೆರ್ಲಾ ಎಸ್ಟೇಟಿಗೆ ಭಯಂಕರ ಭೂಕಂಪವೇ ಅದು. ಕಾರ್ತೀಕ, ನಾನು

ಟಾರ್ಚು ತರೋವರೆಗೆ ಕಾಯಬೇಕಿತ್ತು ನೀವು. ಆ ಕಪಾಟು ಯಾಕೆ ನೀವು ಅಲುಗಾಡಿಸಿದ್ದು?...."

ಆಳು ಗಾಜಿನ ಜಾಡಿಗಳನ್ನು ಹಿಡಿದು ಬಂದ.

"ಅಮ್ಮಗಾರು, ಅಮೃತ ತರಲಿಲ್ಲ?"

ಮೀನಾಕ್ಷಿ ಕಣ್ಣು ಮುಚ್ಚಿ ನೀಳವಾಗಿ ಉಸಿರೆಳೆದಳು. ನೆನಪು ಆಗಲೇ ಬಂದುದು. ವಕೀಲ ಪಿತಾಪುರಂಗೆ ವಂದಿರೆ ತರಲು ಬಂದವಳು! ವಕೀಲ ಮಾಮ ಬಹುಶಃ ನಿದ್ರೆ ಗುಳಿಗೆ ನುಂಗಿರಬೇಕು. ದೀರ್ಘ ನಿದ್ರೆ ಕಳೆದೊಡನೆ ಹಳೆಯ ಅಮೃತ ಅವ ಕಣ್ಣ ಮುಂದೆ ಇಲ್ಲವಾದರೆ ರಾದ್ಧಾಂತ. ತಾನು ಅವನ ಮನ ಒಲಿಸಿಕೊಂಡು ಕೇಳಲಿರುವ ಸಂಗತಿ ರಾತ್ರಿಗೆ ಸಾಧ್ಯವಿಲ್ಲ ಅದು ನಾಳೆಗೆ.

ಮೀನಾಕ್ಷಿ ಅಣತಿ ನೀಡುವಂತೆ ಹೇಳಿದಳು.

"ಶೀಷೆ ಪಂಜರ ಬಿದ್ದು ಹೋಗಿದೆ. ಹುಷಾರಾಗಿ ತುಂಬಿಕೊಂಡು ಬಾ."

ಆಳು ಮಾಳಿಗೆಯತ್ತ ಹೊರಡುವದನ್ನೇ ಕಾದಿದ್ದ ಕಾರ್ತೀಕ ಮುಂದೆ ಬಂದು ಬೆರಳೆತ್ತಿದ.

"ಏನು ನೀವು ಕೇಳಿದ್ದು. ಮೀನಾಕ್ಷಿ? ನಾನು ಯಾಕೆ ಕಪಾಟು ಅಲುಗಾಡಿಸಿದ್ದು ಅಂತ? ಅದನ್ನ ನಾನು ಮುಟ್ಟಲೂ ಇಲ್ಲ."

ಲೇಖನಿ ಹಿಡಿದ ಕೈ ಎತ್ತಿ ನೋಡಿಕೊಂಡ, ಅಂತಹ ಬಲಯುತ ಕೈ ಕಪಾಟನ್ನು ತಳ್ಳಬಲ್ಲದು!

ಮೀನಾಕ್ಷಿಯ ನಯನಗಳಲ್ಲಿ ತಿರಸ್ಕಾರ ಚಿಮ್ಮಿತು.

"ಅಷ್ಟೊಂದು ಬೆಲೆ ಬಾಳೊ ಅಮೃತ ನೆಲಕ್ಕೆ ಕುಡಿಸಿದ್ರಿಂದ ನಿಮಗೇನು ಲಾಭ? ಅಥವಾ ನಿಮಗೆ ಸೌಭಾಗ್ಯಳ ಮೇಲೆ ದ್ವೇಷ....?"

ಅಲುಗು ಮಾತಿನ ಚಳಿ ಕುಡಿದು ಕಂಪನ ಅರಗಿಸಿಕೊಂಡಿದ್ದವನ ಮೈಯಲ್ಲಿ ಮುಳ್ಳುಗಳೆದ್ದವು.

"ಮೀನಾಕ್ಷಿ, ನೀವು ಆ ಹಳೆ ನಿಜಾಮಿ ಅಮೃತ ಕುಡಿದಿದ್ರೆ ಇನ್ನೂ ಮೊನಚಾಗಿ ಮಾತಾಡಬೋದಿತ್ತು. ದ್ರಾಕ್ಷಾರಸದ ನೆಲಮಾಳಿಗೆ ತೋರಿಸ್ತೀನಿ ಅಂತ ನಮ್ಮಿಬ್ಬರನ್ನ ಕರೆತಂದು, ಒಂದೊಂದೇ ಮೆಟ್ಟಿಲು ಎಣಿಸಿ ಇಳಿಸಿದೋರು ನೀವು. ನನಗೆ ಇಂತಾ ಕೃತ್ಯದಿಂದ...."

ಬಿರುಸಿನ ಮಾತು ಹಾಗೆಯೇ ನಿಲ್ಲಿಸಿ ಒಡತಿಯನ್ನು ನೋಡಿದ. ರೋಸಿದ ಇರಿತದ ದೃಷ್ಟಿ!

ಒಣ ನಗೆ ಮುಖವೆಲ್ಲಾ ಆವರಿಸಿತು.

"ಬೇಕಾದಷ್ಟು ಲಾಭ ಇದೆ, ಮೀನಾಕ್ಷಿ. ಸೌಭಾಗ್ಯಳನ್ನ ಕೊಲೆ ಮಾಡಿದ್ರೆ ಅವಳ ಆಸ್ತಿಯ ಬಹು ಪಾಲು ನನಗೆ ಬರೋದಿಕ್ಕೆ ದಾರಿ ಇರಬೋದು. ಆಗ ನೀವೂ ನನ್ನ ಖುಷಿಯಿಂದ ಮದುವೆ ಆಗ್ತೀರಿ. ಅಷ್ಟೆ ಅಲ್ಲ. ನನ್ನ ಕಾದಂಬರಿ ದುರಂತವಾಗೋದು ಕಥಾನಾಯಕಿಯ ಮರಣದಿಂದಲೇ."

ಮೀನಾಕ್ಷಿ ತುಟಿ ಬಿಗಿಸಿದಳು. ಸೌಭಾಗ್ಯ ಕೈಗಳಿಂದ ಮುಖ ಮುಚ್ಚಿಕೊಂಡಳು.

"ಈ ನರಕದಿಂದ ಮೊದಲು ಹೊರಗೆ ಹೋಗೋಣ."

ಮೀನಾಕ್ಷಿ ಅವಳ ಹಸ್ತ ಸವರಿದಳು.

"ಸೌಭಾಗ್ಯ, ಇದು ನರಕ ಅಲ್ಲ. ಬೇಗಂಚೆರ್ಲಾ ಎಸ್ಟೇಟಿನ ಚಿನ್ನದ ಗಣಿ. ಇದರ ಅಧಿಕಾರಿಣಿ ನೀವು. ನಿಮ್ಮ ರಕ್ಷಣೆಗೆ, ನಿಮಗಾಗಿ ದುಡಿಯೋದಿಕ್ಕೆ ನಿಂತಿರೊ ಸೇವಕಿ ನಾನು."

ಹಳಸ್ಸು ಸಿಹಿ ಕಂಪು ಲಘುವಾಗಿ ತೇಲಿ ಬಂತು. ಅದರ ತೀಕ್ಷ್ಣತೆ ದಣಿವಿನಿಂದ ತತ್ತರಿಸುತ್ತಿದ್ದ ಒಡತಿಯ ನೆತ್ತಿಗೇರಿತು. ನರಗಳಲ್ಲೆಲ್ಲಾ ಸ್ಪಂದನ.

ಕಾದಂಬರಿಯ ಮಾತುಗಳಿಂದ ರೋಸುವಷ್ಟು ಬೇಸರ ತರುವ ಧನದಾಹಿ ಪತಿ! ಹೊರೆಯಾಗಿ ಜಗ್ಗಿಸುತ್ತಿರುವ ಶ್ರೀಮಂತಿಕೆ! ಮೂವತ್ತು ತಾಸುಗಳ ಅವಧಿಯಲ್ಲಿ ವಿಫಲವಾದ ಎರಡನೆಯ ಸಂಚು!

ತಲೆಗಟ್ಟಿಯಾಗಿ ಒತ್ತಿ ಕುಸುಕು ಅಳು ತೆಗೆದಳು ಶ್ರೀಮಂತೆ.

"ಕಾರ್ತೀಕ, ನನ್ನ ಮೇಲೆ ಸೇಡು ತೀರಿಸಿಕೊಳ್ಳೋದು ಯಾಕೆ? ನಿಮಗೆ ಎಷ್ಟು ಬೇಕೊ ಅಷ್ಟು ಹಣ ಆಸ್ತಿ ತೊಗೊಳ್ಳಿ. ಹೀಗೆ ನನ್ನ ಕೊಲ್ಲಬೇಡಿ!"

ನಿತ್ರಾಣದಲ್ಲಿ ಕಲ್ಲು ಗೋಡೆ ಒರಗಿದಳು. ಕಾರ್ತೀಕನ ಶಬ್ದಕೋಶ ಬರಿದಾಗಿತ್ತು.

## ೧೦

ಕಾರ್ತೀಕ ಬುಲ್ ಬುಲ್ ತರಂಗದ ಒತ್ತು ಗುಂಡಿಗಳನ್ನು ಎಳೆದು ಬ್ಲೇಡ್ ಚೂರಿನಿಂದ ತಂತಿ ಮೀಟಿದ. ಹಿತವಾದ ನಾದ ಹೊಮ್ಮಿ ಬರಲಿಲ್ಲ. ಹಣೆಯ ಬೆವರು ಒರೆಸಿ ಕೈ ಗಡಿಯಾರ ನೋಡಿದ. ರಾತ್ರಿಯ ಹತ್ತು ಗಂಟೆಗೆ ಐದು ನಿಮಿಷ ಕಡಿಮೆ. ವಾದ್ಯ ಕೆಟ್ಟಿತ್ತು. ಒತ್ತು ಗುಂಡಿ ಮತ್ತೊಮ್ಮೆ ಬಿಗಿಸಿ 'ಚಿಣ್ ಚಿಣ್' ಒಡಕು ಸ್ವರದಿಂದ ಬೇಸರಪಟ್ಟು ವಾದ್ಯ ಪಕ್ಕಕ್ಕೆ ಸರಿಸಿದ.

"ಅಪಸ್ವರ...."

ತೆರೆದ ಕಿಟಕಿಯಿಂದ ಬಂತು ಗಂಭೀರ ಶುಕ ವಾಣಿ. ಕಾರ್ತೀಕ ಕುಳಿತಲ್ಲೇ ತಿರುಗಿ ನೋಡಿದ.

ಆ ವೇಳೆಯಲ್ಲಿ ಇಣುಕಿದ ಚೆಲುವು ಮುಖ, ನಗೆಯ ಸಾಕಾರ ಮೀನಾಕ್ಷಿ!

"ಅಪಸ್ವರ ಕೇಳಿ ತಲೆಯಲ್ಲಿ ಹೊಗೆ ತುಂಬಿ ಹೋಗಿದೆ, ಮೀನಾಕ್ಷಿ ಮಿದುಳಿಗೊಂದು ಹೊಸ ಪೊರೆ ಕೂಡ್ತಾ ಇದೆ."

"ಮೀನಾಕ್ಷಿ ಬಾಯಿಗೆ ಕೈ ಹಚ್ಚಿ ಹಿತವಾಗಿ ನಕ್ಕಳು.

ನಾನು ಹೇಳಿದ್ದು ನಿಮ್ಮ ವಾದ್ಯ ಸ್ವರಕ್ಕೆ."

"ವಾದ್ಯ ಕೆಟ್ಟಿದೆ. ವಾದಕನಿಂದ ತಪ್ಪಾಗಿಲ್ಲ"

"ತಪ್ಪು ಗ್ರಹಿಕೆ ಶ್ರೋತೃವಿನದು... ಕಾರ್ತೀಕ, ನನ್ನಿಂದ ತಪ್ಪಾಗಿದೆ."

ವಾದಕನ ಗಾಂಭೀರ್ಯ ಹರಿದುಹೋಯಿತು. ಮುಖ ಅರಳಿತು.

"ನೀವು ಈ ಹೊತ್ನಲ್ಲಿ ವಾದ ಮಾಡೋದಿಕ್ಕೆ ಬಂದಿದೀರಿ."

"ಕ್ಷಮೆ ಕೇಳೋದಿಕ್ಕೆ" ನಸುಗೋಪ ತೋರಿದಳು.

"ಕೇಳಬಹುದು" ಹಾಸ್ಯದ ಮೆರುಗಿನಲ್ಲಿ ಉತ್ತೇಜಿಸಿದ.

"ಮುಚ್ಚಿದ ಕೋಣೆಯ ಹೊರ ಭಾಗದಿಂದ ಹೇಗೆ ಕೇಳಲಿ?"

ತಪ್ಪಿನ ಅರಿವಾಗಿ ಎದ್ದು ನಿಂತು ಕೈ ಜೋಡಿಸಿದ.

"ಕ್ಷಮಿಸಿ. ಎಸ್ಟೇಟ್ ಮೇಲ್ವಿಚಾರಕಿಯನ್ನು ಹೊರಗೇ ನಿಲ್ಲಿಸಿ ಮಾತಾಡೋಷ್ಟು ಮರೆವು, ಸ್ವಾರ್ಥದ ಹೊಗೆ ತುಂಬಿರೊ ತಲೆ ಇದು."

ಬಾಗಿಲು ತೆಗೆಯಿತು. ಮೀನಾಕ್ಷಿ ಒಳಬಂದು ಕುರ್ಚಿ ಎಳೆದು ಕುಳಿತಳು. ಸುಗಂಧ ಕೋಣೆಯಲ್ಲಿ ಹರಡಿತು.

"ಸಂಜೆ ವೈನ್ ಸೆಲಾರ್‌ನಲ್ಲಿ ನಾನು ಆಡಿದ ಕಟು ಮಾತುಗಳಿಗೆ ಕ್ಷಮೆ ಕೋರೋದಿಕ್ಕೆ ಬಂದಿದೀನಿ... ಎರಡು ಸಾರಿ ಹೇಳಿ ಕಳಿಸಿದ್ರೂ ನೀವು ಊಟಕ್ಕೆ ಬಂದಿಲ್ಲ."

"ನೀವು ಆಡಿದ ಮಾತುಗಳಿಂದ ಎಷ್ಟೋ ದಿನಗಳವರೆಗೆ ಊಟ ಬೇಡ ಅನ್ನೋಷ್ಟು ಹೊಟ್ಟೆ ತುಂಬಿ ಹೋಗಿದೆ. ನಿಮ್ಮ ಉಪಕಾರ, ಉಪಚಾರಗಳಿಂದ ಜಗ್ಗಿ ಹೋಗಿದೀನಿ.

"ಭಾರಿ ತಪ್ಪು ಮಾಡಿದೀನಿ... ದ್ರಾಕ್ಷಾರಸದ ಕಪಾಟು ಅಲುಗಾಡಿಸಿದ್ರಿ ಅಂದೆ. ಸೌಭಾಗ್ಯಳ ಮೇಲೆ ನಿಮಗೆ ದ್ವೇಷ ಅಂದೆ. ಅಪರಾಧ ಆಯ್ತು..."

ತಡೆ ಕೈ ತರುವುದರಲ್ಲಿ ಅವನ ಕಾಲುಗಳನ್ನು ತಬ್ಬಿದಳು. ಬೆಚ್ಚಿದ ಕಾರ್ತೀಕ

ನೋವಿನಿಂದ ತಲೆ ಒದರಿದ.

"ಹೀಗೆಲ್ಲ ಮಾಡಿ ನನ್ನ ಮನಸ್ಸು ಇನ್ನಷ್ಟು ಹದಗೆಡಿಸಬೇಡಿ. ನೀವು ತಪ್ಪು ಮಾಡಿಲ್ಲ. ನಾನು ಕ್ಷಮಿಸೊ ಅಗತ್ಯ ಬಂದಿಲ್ಲ. ನೆಲಮಾಳಿಗೆಯಲ್ಲಿ ತಬ್ಬಿಬ್ಬಾದೆ. ಕೋಗಿಲೆ ಕಂಠದಿಂದ ಅಪಸ್ವರ ಯಾಕೆ ಬಂತು ಅಂತ...."

"ಅಪಸ್ವರಕ್ಕಾಗಿ ಮೂರು ತಾಸಿನಿಂದ ಪಶ್ಚಾತ್ತಾಪಪಡ್ತಾ ಇದೀನಿ."

ಎದ್ದು ನಿಂತು ಕಣ್ಣೊರೆಸಿಕೊಂಡಳು. ಅವಳ ತಲೆ ನೇವರಿಸಿದ.

"ಆ ವೈನ್ ರ್‍ಯಾಕ್ ಯಾಕೆ ಉರುಳಿದ್ದು?"

"ಆಕಸ್ಮಿಕ... ನನ್ನ ದುರದೃಷ್ಟ, ಕಲ್ಲು ಚೂರುಗಳ ಆಧಾರದ ಮೇಲೆ ತಗ್ಗಿನಲ್ಲಿ ನಿಂತಿತ್ತು. ಕಪಾಟಿಗೆ ಕತ್ತಲಲ್ಲಿ ಬೆನ್ನು ಒರಗಿಸ್ದೆ... ಬಿದುಹೋಯ್ತು. ಅದು ತಿಳಿದ್ರೆ ವಕೀಲ ಮಾಮ ನನ್ನ ಸುಮ್ಮನೆ ಬಿಡೋದಿಲ್ಲ. ಸಮಯಕ್ಕೆ ಹೊಳೆದ ಕೆಟ್ಟ ಹುಮ್ಮಸಿನಲ್ಲಿ ಹಾಗೆ ಹೇಳ್ಬಿಟ್ಟೆ. ಅದರಿಂದ ಸೌಭಾಗ್ಯಳ ಮೇಲೆ ಏನು ಪರಿಣಾಮ ಆಗತ್ತೇಂತ ಆಗ ಹೊಳೀಲಿಲ್ಲ. ಅವಳಿಗೆ ನಿಮ್ಮ ಮೇಲೆ ಸಂಶಯ ನಿಲ್ಲೊ ಹಾಗೆ ಆಯ್ತು."

"ಸೌಭಾಗ್ಯಳ ಮೇಲೆ ನನಗೆ ದ್ವೇಷ ಅಂತ ಹೇಗೆ ಅಭಿಪ್ರಾಯಪಟ್ರಿ?"

"ದ್ವೇಷ ಅಂತ ತಪ್ಪು ಪದ ಬಳಸ್ದೆ... ತಿರಸ್ಕಾರ, ಅಸಡ್ಡೆ ಅಂತ ಹೇಳ ಬೇಕಿತ್ತು."

"ಪದಗಳ ದೊಂಬರಾಟ ನಿಮಗೆ ಯಾಕೆ?"

"ಸೌಭಾಗ್ಯಳ ತಾಯಿಗೆ ಕೊಟ್ಟ ಮಾತಿನ ಮೇಲೆ ನೀವು ಹಾರಂಗಿಯಿಂದ ಯಾವುದೊ ಭಾವೋದ್ವೇಗದಲ್ಲಿ ಅವಳನ್ನ ಕರಕೊಂಡು ಬಂದ್ರಿ. ರಕ್ಷಣೆಯ ಹೊರೆಯಿಂದ ಕ್ರಮೇಣ ಬೇಸರ ಬಂದಿದೆ. ಅವಳನ್ನ ಬೇರೆಯೋರಿಗೆ ಒಪ್ಪಿಸಿದರೆ ಸಾಕು ಅನ್ನಿಸಿರಬೇಕು.... ಅದು ಸ್ವಾಭಾವಿಕ. ಕೂಲಿಕಾರರ ಕಾಲೋನಿಯ ಒಬ್ಬ ಹುಡುಗಿಗೆ ರಕ್ಷಣೆ, ಪೋಷಣೆ ಕೊಟ್ಟು ಅವಳಿಗೆ ಮದುವೆ ಮಾಡಿಸೊ ಹೊಣೆಗಾರಿಕೆ ನಿಮಗೆ ಉರುಲು ಇದ್ದ ಹಾಗೆ...."

"ನೀವು ಹೇಳ್ತಾ ಇರೋದ್ರಲ್ಲಿ ಬಹು ಪಾಳು ನಿಜ ಇರಬೋದು. ನೀವು ನನ್ನ ಮದುವೆ ಯಾಕೆ ಆಗಬಾರದು ಅನ್ನೊ ಕುಟುಕು ಮಾತು ಸೌಭಾಗ್ಯಳಿಗೆ ಹೇಳಿದ್ರಾ?"

ಲಜ್ಜೆಯಿಂದ ಕೆಂಪೇರಿದ ಮುಖ ನೆಲ ನೋಡಿತು.

"ಅದು ಕುಟುಕು ಮಾತಲ್ಲ. ಆಸೆ ತೋರಿಸೋದಿಕ್ಕೆ ಹೃದಯ ಆತುರ ಮಾಡ್ತು. ಅದು ಪಾಪವೇ, ಕಾರ್ತೀಕ?"

"ಪಾಪ ಅಲ್ಲ. ಆದರೆ ಆತುರಾನ ನನ್ನ ಮುಂದೆ ಮಾಡಿದ್ರೆ ಆ ಬುದ್ಧಿ

ಬಲಿಯಿಂದ ಹೆಣ್ಣಿನ ತಲೆಯ ಗೊಂದಲು ಕಡಿಮೆ ಆಗ್ತಿತ್ತು."

"ಒಂದು ಹೆಣ್ಣಿಗೆ ಅವಳನ್ನ ರಕ್ಷಿಸಿ, ಸಾಕಿ, ಸುಧಾರಿಸಿದೋನ ಮದುವೆ ವಿಷಯ ಕೇಳಿ ಸಂತೋಷ ಆಗಬೇಕು! ನಮ್ಮಣ್ಣನಿಗೆ ಮದುವೆ ಅಂದ್ರೆ ನನಗೆ ಹಿಗ್ಗಲ್ಲವೆ?"

"ಸೌಭಾಗ್ಯ ಏನು ಹೇಳಿದ್ಲು?"

"ಬುದ್ಧಿ ಬಲಿಯದ ಹುಡುಗಿ ಏಕ್‌ದಂ ಶ್ರೀಮಂತೆ ಅನ್ನಿಸಿಕೊಂಡೋಳಿಗೆ ಹೃದಯ ವಿಶಾಲತೆ ಎಲ್ಲೀದು?.... ಸಂನ್ಯಾಸಿಗೆ ಮದುವೆ ಯಾಕೇಂತ ಮಾತು ಹಾರಿಸಿಬಿಟ್ಲು."

ಮುಖ ಭಾವ ವೀಕ್ಷಿಸಿದಳು. ಕಾರ್ತೀಕ ಸಂನ್ಯಾಸಿಯೆ?

"ಮೀನಾಕ್ಷಿ, ನನ್ನ ಮದುವೆ ಆಗೋದ್ರಿಂದ ನಿಮಗೇನು ಪ್ರಯೋಜನ ಇದೆ?"

ಅವಳ ನಾಡಿ ಹಿಡಿದು ನೋಡುವ ಯತ್ನ ಮಾಡಿದ.

"ಪ್ರಯೋಜನ? ಬದುಕಿನ ಸಾರ್ಥಕತೆ ಅನ್ನಿ. ಅದು ನಿಮ್ಮಿಂದ ಲಭಿಸುತ್ತೆ ಅನ್ನೊ ವಿಶ್ವಾಸ ಇದೆ."

"ಸೌಭಾಗ್ಯ ಹೇಳಿದ ಹಾಗೆ ನಾನು ಸಂನ್ಯಾಸಿ.

"ಬುದ್ಧಿಗೆಟ್ಟ ಹೆಣ್ಣಿನ ಮಾತಿಗೆ ಮಹತ್ವ ಕೊಡೋದಿಲ್ಲ ನಾನು."

"ನಾನು ಕೇವಲ ಬರಹಗಾರ. ಕಾಗದ, ಲೇಖನಿ ಎರಡೇ ನನ್ನ ಆಸ್ತಿ."

ಚಿಗುರಿದ ಆಸೆಯಲ್ಲಿ ಅವನ ಕೈ ಹಿಡಿದಳು.

"ನಿಮ್ಮಿಂದ ಅದನ್ನ ನಿರೀಕ್ಷಿಸೋದಿಲ್ಲ. ನನಗೆ ಹತ್ತು ಲಕ್ಷದ ಆಸ್ತಿ ಬಂದಿದೆ."

"ಹತ್ತು ಲಕ್ಷ?"

ಶಂಕೆ, ಕುತೂಹಲದಲ್ಲಿ ಅವಳ ಕೈ ಒತ್ತಿದ್ದ.

"ಸಂದೇಹವೆ?... ಅದು ನಾನು ಆಸೆಪಟ್ಟಿದ್ದಲ್ಲ, ಬೇಡಿದ್ದಲ್ಲ.. ಕೊಳ್ಳೆ ಹೊಡೆದಿದ್ದಲ್ಲ. ಈತನಕ ಎಸ್ಟೇಟು ನೋಡಿಕೊಂಡಿದ್ದಕ್ಕೆ, ಇನ್ನೊಂದೆರಡು ದಿನದಲ್ಲಿ ಸೌಭಾಗ್ಯಳ ಮದುವೆ ಮಾಡಿಸೋದಿಕ್ಕೆ ಚಂದ್ರಬಾಬು ಉಯಿಲು ನನಗೆ ಕೊಟ್ಟಿರೊ ಪ್ರತಿಫಲ."

"ಬನಾರ್ಡ್‌ಗೆ ಏನು ಸಿಕ್ತು?"

ಅವಳ ಭುಜ ಅಲುಗಿಸಿದ. ಅತೀವ ವಿಳಂಬವಾಗಿ ಬಂದ ಪ್ರಶ್ನೆ.

"ಸೌಭಾಗ್ಯಳನ್ನ ಸಾಕಿದ್ದಕ್ಕೆ ಆಸ್ತಿಯ ಪಾಲು ಸಿಗುತ್ತೇಂತ ತಪ್ಪು ತಿಳಿದಿದ್ದ... ಸಾಕಿದ ಪುಣ್ಯವೊಂದೇ ಅವನಿಗೆ ದಕ್ಕಿದ್ದು. ನಿಜ ಸಂಗತಿ ಇಲ್ಲಿ ಗೊತ್ತಾದಾಗ ಅವನಿಗೆ ಹೃದಯ ನಿಂತುಹೋಯ್ತು."

ಲೇಖಕನಿಗೆ ತಲೆ ಸುತ್ತಿ ಬಂತು. ಸಂತುರಾಮ ಹನ್ನೊಂದು ವರ್ಷಗಳ ಶ್ರಮ ರಾತ್ರಿಗಳ ಕನಸು... ಕನಸಿನ ರಾಜ್ಯದಲ್ಲಿ ತನ್ನನ್ನೂ ಕೂಡಿಸಿಕೊಂಡು ಸೃಷ್ಟಿಸಿಕೊಂಡ ಸಮಸ್ಯೆಗಳ ವಿಶಾಲ ಪರಿಸರ....

'ಮಣ್ಣಿನ ದೋಣಿ'ಯ ಸುಖಾಂತ್ಯಕ್ಕೆ ತನ್ನಿಂದ ಅಪೇಕ್ಷಿಸುವುದೇನು ಎಂದು ಪ್ರಶ್ನಿಸಿದವನು ತನ್ನನ್ನ ನಿಷ್ಠೆಗೆ ಅರ್ಪಿಸಿಕೊಂಡ!

ಕಾರ್ತೀಕ ಮನದ ವಿಕಾರಗಳನ್ನು ಕಷ್ಟದಿಂದ ತಡೆದು ಮಾತಿನ ಎಳೆ ಹಿಡಿದ.

"ನನಗೆ ಮದುವೆ ವಯಸ್ಸು ಮೀರಿದೆ ಅಂತ ನಿಮಗೆ ಚೆನ್ನಾಗಿ ಗೊತ್ತಿದೆ."

"ಮದುವೆಗೆ ವಯಸ್ಸು ಹೊಂದಿಸೊ ಚಪಲದ ಹೆಣ್ಣಲ್ಲ ನಾನು.. ಅಂತಾ ವಯಸ್ಸು ನನಗೂ ಏರ್ತಾ ಇದೆ... ಕಾರ್ತೀಕ, ನನಗೆ ಯಾಕಿಷ್ಟು ಪ್ರಶ್ನೆ? ನೀವು ನನ್ನ ಮದುವೆ ಆಗೋಕೆ ಒಂದು ರೀತಿಯಲ್ಲಿ ಒಪ್ಪಿಗೆ ಕೊಟ್ಟಿದೀರಿ. ಸಂಜೆ ಆ ಪಾತಾಳದಲ್ಲಿ ಏನು ಹೇಳಿದ್ರಿ? ಸೌಭಾಗ್ಯಳ ಆಸ್ತಿ ನಿಮಗೆ ಬಂದರೆ ನಾನು ನಿಮ್ಮನ್ನ ಖುಷಿಯಿಂದ ಮದುವೆ ಆಗ್ತೀನಿ ಅಂತ!"

"ಹೌದು, ಹೇಳ್ದೆ. ಸೌಭಾಗ್ಯಳ ಮದುವೆಗೆ ಸುಧಾಕರನ್ನ ಪ್ರಚೋದಿಸಿದೋರು ನೀವು ತಾನೆ?"

"ಇಲ್ಲದಿದ್ದರೆ ಆ ಹೇಡಿಗೆ ಅಂತಾ ಆಸೆ ಮೈ ಹತ್ತೋದು ಎಲ್ಲಿಂದ?"

"ಅವನು ಬಂದಿರೋದು ಇನ್ನೊಂದೆರಡು ದಿನದಲ್ಲಿ ಅವಳನ್ನ ಮದುವೆ ಆಗೋದಿಕ್ಕೆ?"

"ಹೌದು, ಹೌದು. ನಿಮ್ಮ ಹೊಣೆಗಾರಿಕೆನ ಒಂದು ರೀತಿಯಲ್ಲಿ ನಾನು ನಿರ್ವಹಿಸ್ತಾ ಇದೀನಿ. ಆಸ್ತಿಯ ಪಾಲು ನನಗೆ ಬರುತ್ತೆ ನೋಡಿ! ಸ್ವಾರ್ಥ ಮನುಷ್ಯನ ಜೊತೆಯಲ್ಲೇ ಹುಟ್ಟಿದ್ದು."

ಕಿಲ ಕಿಲ ನಗೆ ನಿಲ್ಲಿಸಿ ಬಾಗಿಲ ಕಡೆ ನೋಡಿ ಬಾಯಿಗೆ ಕೈ ಹಚ್ಚಿದಳು.

"ಬರಹಗಾರನನ್ನು ಊಟಕ್ಕೆ ಕರಕೊಂಡು ಹೋಗೋಕೆ ಬಂದೋಳು ತರಗತಿಯ ಪಾಠ ತೊಗೊಂಡಿದೀನಿ."

ಅವಳ ಕಣ್ಣು ಮೇಜಿನ ಮೇಲೆ ಹರಡಿದ್ದ ಪುಟಗಳ ಮೇಲೆ ಹರಿದಾಡಿತು.

"ಮಣ್ಣಿನ ದೋಣಿ ಪೂರೈಸಿಲ್ಲ..."

ಅವಳ ಮುಂದಿನ ಪ್ರಶ್ನೆಗೆ ಮೊದಲೇ ಕಾರ್ತೀಕ ಹಾಗೆಂದ.

"ಕಥೆ ತಿಳಿದಿಲ್ಲ. ಅದು ನಿಮ್ಮ ಕಥೆ ಅಂತ ಕೇಳ್ದೆ. ಅಲ್ಲಿಗೆ ಅದರಲ್ಲಿ ನನ್ನ ಪಾತ್ರವೂ ಇರಬೇಕು."

"ದೊಡ್ಡ ಪಾತ್ರ. ಸೌಭಾಗ್ಯ ಅದರ ಅರ್ಧ ಭಾಗ ಆಕ್ರಮಿಸಿಕೊಂಡಿದ್ರೆ ಉಳಿದ ಅರ್ಧ ನಿಮ್ಮದು."

"ಥ್ಯಾಂಕ್ಸ್, ಕಥಾನಾಯಕಿ ಯಾರು? ನಾನೊ, ಸೌಭಾಗ್ಯಳೊ?"

"ಬಹುಶಃ ನಾಳೆ ಮುಗಿಯಬಹುದಾದ ಕಾದಂಬರಿಯಲ್ಲಿ ದುರಂತ ಕಾಣುವ ಹೆಣ್ಣು."

ಮೀನಾಕ್ಷಿಯ ಮುಖದ ನಗೆ ಮಾಯವಾಗಿ ಕಣ್ಣೇರಿತು. ಮತ್ತೆ ಕಣ್ಣು ಮಿನುಗಿತು. ಮೆಲ್ಲನೆಯ ಪಕ ಪಕ ನಗೆ ಬಂತು. ಬಾಗಿಲತ್ತ ನೋಡಿದಳು.

"ಎಲ್ಲಾ ಮಾತುಗಳನ್ನ ನಾಲ್ಕು ಗೋಡೆಗಳ ಬಂಧನದಲ್ಲಿ ಮುಗಿಸಬಾರದು. ಸ್ವಲ್ಪ ಹೊರ ಹೋಗೋಣವೆ?"

"ಹೋಗೋಣ" ಎದುರಾಡದೆ ಅವಳೊಂದಿಗೆ ಹೊರ ಬಂದ.

ದ್ರಾಕ್ಷಿಯ ಹಂದರಗಳ ಮೇಲೆ ಹರಿದು ಬಂದ ಹಿತವಾದ ಎಳೆ ಗಾಳಿ ರಾಗ ತೆಗೆದಿತ್ತು.

"ಬರಹಗಾರರ ಸ್ಫೂರ್ತಿಗೆ ಬೀಸೋ ಗಾಳಿ ಇದು."

ಬರಹಕ್ಕೆ ಸ್ಫೂರ್ತಿ ಪಡೆಯದಿದ್ದರೂ ಸೀಮೆಯ ಮೆಚ್ಚಿಗೆಗೆ, ಅವಳ ತೃಪ್ತಿಗೆ ಆ ಮಾತು ಆಡಿದ.

"ಮುಂದಿನ ಬದುಕಿಗೂ ಸ್ಫೂರ್ತಿ ತಂದ್ಕೊಳ್ಳಿ."

"ಯಾವ ಬದುಕು?" ಎಚ್ಚೆತ್ತು ಕೇಳಿದ.

"ಲಜ್ಜೆ ತರೊ ಮಾತನ್ನ ಹೆಣ್ಣಿನ ಬಾಯಿಂದಲೇ ಹೇಳಿಸಿದರೆ ನಿಮಗೆ ಬಲು ಸಂತೋಷ...ನೀವು ನನ್ನ ಮದುವೆ ಆಗೋದು..."

"ನನ್ನ ನಿರ್ಧಾರ ತಿಳಿಸೋದಿಕ್ಕೆ ನಾಳೆವರೆಗೆ ಅವಕಾಶ ಕೊಡಿ."

"ಆಯ್ತು" ಹಿಗ್ಗಿನ ಉಸಿರಾಟದಲ್ಲಿ ಉದ್ರೇಕ ಸೇರಿತ್ತು.

ಉದ್ರೇಕ ತಡೆದು ಹೇಳಿದಳು.

"ಸೌಭಾಗ್ಯಳ ಮೇಲೆ ನಿಮಗೆ ಸೇಡಿನ ಭಾವ ಯಾಕೆ ಬಂದೀತು! ಹುಚ್ಚು ಹುಡುಗಿ... ಕೊಲ್ಲಬೇಡಿ ಅಂತ ಸಂಜೆ ಅವಳು ಸೊರಗಿದ್ದು ಯಾಕೆ?"

"ಕಲ್ಪನೆ, ಭಾವನೆ, ಮನೋ ವಿಕಾರ ಅವರವರ ಸೊತ್ತು ಅಂತ ಅವಳಿಗೆ ಹೇಳಿದೀನಿ. ಅದಕ್ಕೇ ನಾನು ಅವಳಿಗೆ ಪ್ರತಿ ಹೇಳ್ಲಿಲ್ಲ."

ಕಣ್ಣು ಮುಚ್ಚಿ ಆಕಾಶಕ್ಕೆ ತಲೆ ಎತ್ತಿದ. ತಂಗಾಳಿಗೆ ಹರ್ಷಚಿತ್ತನಾದಂತೆ ಕಂಡ.

"ನಿಮಗೆ ಈ ಸೀಮೆ ಬಹಳ ಹಿಡಿಸಿದೆ. ಕಾರ್ತೀಕ. ನೀವು ಇಲ್ಲೇ ಇದ್ದು

ಬಿಡಿ. ನನಗಂತೂ ಇಲ್ಲಿಂದ ಹೊರಟರೆ ದೇಹದಿಂದ ಪ್ರಾಣ ಕಿತ್ತ ಹಾಗೆ... ಹನ್ನೆರಡು ವರ್ಷದ ಹಿಂದೆ ನಾನು ಇಲ್ಲಿಗೆ ಬಂದೆ. ಆಗ ನಾನು ಹತ್ತೊಂಬತ್ತು ವರ್ಷದ ಚಿಗರೆ. ಬೆಜವಾಡ ಕಾಲೇಜಿನಲ್ಲಿ ಓದು ಮುಗಿಸಿದ್ದೆ. ಚಂದ್ರಬಾಬು ದೂರದ ನೆಂಟರು ಅಂತ ಇಲ್ಲಿಗೆ ಬರಲಿಲ್ಲ. ಎಸ್ಟೇಟಿಗೆ ಅವಿವಾಹಿತ ಮಹಿಳಾ ಟೈಪಿಸ್ಟ್ ಬೇಕಿತ್ತು. ಬಂದೋಳಿಗೆ ಬೇಕಾದಷ್ಟು ಅಧಿಕಾರ ಸಿಕ್ತು. ಚಂದ್ರಬಾಬು ತಂದೆ ಹಾಗೆ ಇದ್ರು. ಅವರ ತಮ್ಮ ಶತ್ರುಘ್ನಬಾಬುನ ನೆನೆಪಿಸಿಕೊಂಡ್ರೆ ಮೈ 'ಜುಂ' ಅನ್ನತ್ತೆ... ಬಲು ಕೆಟ್ಟ ಹುಳ! ಕುಡುಕ, ಕಾಮುಕ. ಅವನ ಕಾಟ ತಪ್ಪಿಸಿಕೊಳ್ಳೋದಿಕ್ಕೆ, ನನ್ನ ರಕ್ಷಣೆಗೆ ಅಣ್ಣನ ಕರಕೊಂಡು ಬಂದೆ. ಅವನಿಗೂ ಇಲ್ಲಿ ಉಸ್ತುವಾರಿ ಕೆಲಸ ಸಿಗ್ತು... ಆಮೇಲೆ ಏನೇನೋ ಆಗೋಯ್ತು..."

ಕಾರ್ತೀಕನಿಗೆ ತಟ್ಟನೆ ನೆನಪು ಬಂತು.

"ಮೀನಾಕ್ಷಿ, ನೀವು ಬೆಂಗಳೂರಿಂದ ಬರೋವಾಗ, ನಾನು ಹಿಂತಿರುಗೋದು ಸಂದೇಹ ಅಂತ ನನ್ನ ತಾಯಿಗೆ ಹೇಳಿದ್ರಾ?"

"ನೀವು ಹೊರಟುಹೋದ ಸನ್ನಿವೇಶ ಅಂತ ಆತಂಕ ಹರಡಿತ್ತು. ಬರ್ನಾರ್ಡ್‌ನಿಂದ ನಿಮಗೆ ಅಪಾಯ ತಟ್ಟಬಹುದು ಅಂತ ಹಾಗೆ ತಿಳಿಸ್ದೆ."

"ಆತಂಕ ತೋರ್ಸ್ಸಿ ಕಾಗದ ಬರೆದಿದಾಳೆ ನಮ್ಮಮ್ಮ."

"ಅವತ್ತಿನ ಉದ್ರೇಕಕ್ಕೆ ಇವತ್ತು ಕ್ಷಮೆ ಕೇಳ್ದೇಂತ ತಿಳಿಸಿ ನನ್ನ ನಮಸ್ಕಾರ ತಿಳಿಸಿ ಸ್ವರ್ಣಮ್ಮನಿಗೆ."

ಮತ್ತಷ್ಟು ನಡೆದರು. ಮಾತಿನ ಹಾದಿ ತಿರುಗಿಸಿದ.

"ಈ ಪಿತಾಪುರಂಗೆ ಏನಾಯ್ತು? ಹಳೆ ದ್ರಾಕ್ಷಾರಸ ಸೇವಿಸೋದಿಕ್ಕೆ ಮೊದಲೇ ಇಂತಾ ನಿದ್ರೆ! ನನ್ನ ನೋಡಬೇಕೂಂತ ಹೇಳಿದ್ರಂತೆ."

"ನಮಗೆ ಅವರ ನಿದ್ರೆ ಹೊಸತಲ್ಲ. ರಕ್ತದ ಒತ್ತಡಕ್ಕೆ ಸೇವಿಸೊ ಗುಳಿಗೆಗೆ ಬದಲು ನಿದ್ರೆ ಗುಳಿಗೆ ತೊಗೊಂಡುಬಿಟ್ಟಿರಬೇಕು. ಒಂದು ಗಂಟೆ ಹಿಂದೆ ಅವರಿಗೆ ಎಚ್ಚರವಾಯ್ತು. ಮೂರು ಗ್ಲಾಸ್ ಹಳೆ ದ್ರಾಕ್ಷಾರಸ ಕುಡಿದು, ಸ್ವಲ್ಪ ಊಟ ಮಾಡಿ, ಮಾತು ನಾಳೆಗೆ ಅಂತ ಮತ್ತೆ ಕಂಬದ ಹಾಗೆ ಮಲಗಿಬಿಟ್ರು. ನನಗೆ ಮಾತಾಡೋ ಅವಕಾಶವೇ ಸಿಕ್ಕಿಲ್ಲ."

ಬಂಗಲೆ ಸಮೀಪಿಸಿತು. ಮೀನಾಕ್ಷಿ ಬೆರಳು ಕಚ್ಚಿ ತಡವರಿಸಿದಳು.

"ತಪ್ಪು ತಿಳಿಯೋದಿಲ್ಲಾಂದ್ರೆ ಒಂದು ಮಾತು ಕೇಳ್ತೀನಿ."

"ಇಷ್ಟೊಂದು ಪ್ರಶ್ನೆ ಕೇಳಿದೋರಿಗೆ ಈಗೇಕೆ ಸಂಕೋಚ?"

"ನಿಮಗೆ ಯಾವತ್ತೂ ಸೌಭಾಗ್ಯಳನ್ನು ಮದುವೆ ಆಗಬೇಕು ಅನ್ನಿಸಲಿಲ್ಲವೆ?

ಮದುವೆ ಬೇಡಾಂದ್ರೂ ಮೈಯಲ್ಲಿ ಏಳೊ ಸುಳಿ... ಇಬ್ಬರೂ ಒಂದೇ ಗೋಡೆಯ ಎಡ ಬಲದಲ್ಲಿ ರಾತ್ರಿಗಳನ್ನ ಕಳೆದೋರು..."

ಬೀಸು ಗಾಳಿಯಲ್ಲಿ ಮಂಜು ತೂರಿ ಬಂದಿತ್ತು. ಹಳೆಯ ಸಂಗತಿ ಹೊಸ ಮುಖ ತೋರಿತ್ತು. ಎದೆಬಡಿತ ತುಸು ಏರಿತು.

"ಸಂಯಮ ಪಾಲಿಸಿದ ಸಂನ್ಯಾಸಿ ನಾನು."

"ಹೆಣ್ಣು ಸ್ವಲ್ಪ ತಿಳಿಗಪ್ಪಾದರೂ, ಆ ಹೊರೆ ಕೂದಲು ಎಂತೋರನ್ನೂ ಸೆಳೆದುಬಿಡುತ್ತೆ."

"ಮೀನಾಕ್ಷಿ, ನಿಮಗೆ ಸರಿಯಾದ ಹೆಸರು ಇಡಲಿಲ್ಲ. ನಿಮಗೆ ಮೀನಿನ ಕಣ್ಣಿಲ್ಲ.... ಇರೋದು ನಾಗರ ಕಣ್ಣು."

"ಯಾಕೆ ಹೀಗೆ ಹೇಳಿದ್ರಿ?"

ಅವನ ಕೈ ಹಿಡಿದು ಅಲುಗಿಸಿದಳು.

"ನಿಮ್ಮನ್ನ ತೆಗಳಲಿಲ್ಲ. ತಾನು ಭಾವಿಸೋ ಹಾಗೆ ಇನ್ನೊಬ್ಬರ ಪ್ರವೃತ್ತಿ ಇರಬೇಕಾಗಿಲ್ಲ ಅನ್ನೋದಿಕ್ಕೆ ಹೇಳಿದ ಮಾತು."

"ಅಬ್ಬಾ, ಎಷ್ಟು ಕಗ್ಗಂಟಿನ ಮಾತು ನಿಮ್ಮದು!"

ಊಟದ ಹಜಾರ ಸೇರಿದ ಮೇಲೆ ಅವಳ ತೃಪ್ತಿಗಾಗಿ ಟೇಬಲ್ ಮುಂದೆ ಕುಳಿತ. ಕೈಗಡಿಯಾರ ನೋಡಿಕೊಂಡ ಮೀನಾಕ್ಷಿ ಯಾವುದಕ್ಕೊ ತಡವಾದಂತೆ ನಾಲಗೆ ಕಚ್ಚಿ ಹುಬ್ಬೇರಿಸಿದಳು.

"ಸುಖ ನಿದ್ರೆ.... ಸವಿ ಕನಸು..." ಎಂದು ಹಾರೈಸಿ ಜಿಗಿತದ ನಡಿಗೆಯಲ್ಲಿ ಹೊರಟಳು.

ತಟ್ಟೆಯಲ್ಲಿ ಕೈ ಆಡಿಸುತ್ತಿದ್ದ ಕಾರ್ತೀಕ ತನ್ನಲ್ಲೇ ನಕ್ಕ. ವಿಚಿತ್ರ ಹೆಣ್ಣು! ಚೌಕಟ್ಟು ಕಾಣದ ಆಸೆ...ಚೆಲುವು, ವರ್ತನೆ, ಮನೋಧರ್ಮ ಅವು ಮೂರು ಮಿಲನ ಕಾಣದ ತ್ರಿಕೋಣದ ಮೂರು ಮೂಲೆಗಳು... ಹತ್ತು ಲಕ್ಷಗಳ ಆಸ್ತಿವಂತೆಗೆ ಏಕಾಏಕಿ ತನ್ನನ್ನು ಮದುವೆಯಾಗುವ ಆಕಾಂಕ್ಷೆ ಎಲ್ಲಿಯದು? ಅದಕ್ಕೆ ಕಮಲಹಾಸನ ಪ್ರತಿಕ್ರಿಯೆ! ಕಥಾನಾಯಕಿಯ ದುರಂತದ ತರುವಾಯ ಈ ಪೋಷಕ ಮಾತ್ರ ತನ್ನನ್ನು ಸೇರಿ ಸಾಧಿಸುವುದೇನು?

ಮೀನಾಕ್ಷಿಯನ್ನು ಮದುವೆಯಾಗುವ ಬಗೆಗೆ ನಾಳೆ ತನ್ನಿಂದ ನಿರ್ಧಾರ! ಅವಳಿಗೆ ಹಾಗೇಕೆ ಹೇಳಿದೆ? ಇಂತಹ ನಿಶ್ಶಕ್ತತೆ ತನಗಂಟಿದ ಬೇನೆ... ಇಡೀ ರಾತ್ರಿ ಮೀನಾಕ್ಷಿ ನಿದ್ರಿಸುವುದಿಲ್ಲ. ಕಲ್ಪನೆ, ವ್ಯೂಹದಲ್ಲಿ ಬೆಳಗು ಮಾಡುತ್ತಾಳೆ.

ಹಾಗೆ ಹೇಳಿದುದು ತಪ್ಪು. ನಿಶ್ಶಕ್ತ ಗಳಿಗೆಯ ಮಸಕು ಸಮ್ಮತಿ ಅದು!

ಮೀನಾಕ್ಷಿಗೆ ತನ್ನೊಂದಿಗೆ ಮದುವೆಯ ತುಣುಕು ಕಲ್ಪನೆಯೂ ಬೇಡ. ಹಾಗೆಂದು ನಿರ್ದಿಷ್ಟವಾಗಿ ತಿಳಿಸಿಬಿಡಬೇಕು.... ಈಗಲೇ!

ಕೈಗೆ ನೀರು ಸುರಿದ ಕಾರ್ತೀಕ ದಡ ದಡ ನಡೆದು ಹೋದ... ಬಂಗಲೆ ಹಿಂದಿನ ಸಣ್ಣ ಕಾಟೇಜ್‌ನಿಂದ ಪಿಯಾನೊ ವಾದನ ಗಡುಸಾಗಿ ಕೇಳಿ ಬರುತ್ತಿತ್ತು. ಸುಧಾಕರನಿಗೆ ಸೌಭಾಗ್ಯಳ ಕೈ ಹಿಡಿಯುವ ಕನಸು, ಚಿಂತೆಗಳ ಮಧ್ಯೆ, ಈ ಹೊತ್ತಿನಲ್ಲೂ ವಾದ್ಯ ನುಡಿಸುವ ಚಪಲ.

ಗಡಿಯಾರ ಹನ್ನೊಂದು ತೋರುತ್ತಿತ್ತು. ಊಟದ ಹಜಾರ ಬಳಸಿ ಬಂಗಲೆಯ ಮತ್ತೊಂದು ಪಕ್ಕಕ್ಕೆ ಬಂದು ಕೋಣೆ ಬಾಗಿಲಿಗೆ ಮೆಲ್ಲನೆ ಬೆರಳು ಬಡಿದ.

ಕೋಣೆಯಲ್ಲಿ ಮೀನಾಕ್ಷಿ ಇರಲಿಲ್ಲ!

* * *

ದೂರದ ಕಾಮಗಾರಿ ವಿಭಾಗದ ತಗ್ಗಿನ ಸಿಮೆಂಟ್ ಮನೆಯಲ್ಲಿ ದೀಪ ಕಾಣಿಸಿತು. ಚಕ್ರಗಾಲಿನ ಮೀನಾಕ್ಷಿ ಅಲ್ಲಿರಲು ಸಾಧ್ಯ. ಅಲ್ಲಿಯವರೆಗೆ ಹೋಗಿ ನಕಾರದ ನಿರ್ಧಾರ ತಿಳಿಸುವುದು ವಿಹಿತ. ಹೆಣ್ಣನ್ನು ಅಧಿಕ ಕಾಲ ತೂಗುಯ್ಯಾಲೆಯಲ್ಲಿಡುವುದು ಮತ್ತಷ್ಟು ಸಮಸ್ಯೆಗಳಿಗೆ ಆಹ್ವಾನ.

ಕತ್ತಲೆ ಹರಡಿದ ಕಿರು ರಸ್ತೆಯ ಮೇಲೆ ಬಿರುಬಿರು ನಡೆದು ಸೇತುವೆಯ ಪಕ್ಕದ, ತಗ್ಗಿನ ಹುಲ್ಲು ಹಾಸಿನ ಮೇಲೆ ಎಚ್ಚರಿಕೆಯಿಂದ ಇಳಿದ. ನೆಲ ಬಾವಿ, ಹೊಂಡಗಳ ಮಧ್ಯೆ ಸರಿದು ಮನೆ ಸಮೀಪಿಸುತ್ತಲೇ ಚಲನೆ ಮಂದವಾಯಿತು.

ಕಪ್ಪು ಬಟ್ಟೆಯಂತೆ ಹರಡಿದ ಕತ್ತಲು. ನಿರ್ಜನ, ನಿಶ್ಶಬ್ದ ತಾಣ. ಅಗಸೆ ಮರಗಳಿಂದ ತೂರಿದ ಮೆದು ಗಾಳಿ.

ಹದಿನೈದು ಗಜಗಳಷ್ಟು ದೂರಕ್ಕೆ ಕೋಣೆಯ ಮಾತುಗಳು ಕೇಳಿ ಬಂದವು. ನಡಿಗೆ ಮತ್ತಷ್ಟು ನಿಧಾನಗೊಳಿಸಿ ಗೋಡೆಯ ಒತ್ತಿನಲ್ಲಿ ಜರುಗಿ ತೆರೆದ ಕಿಟಕಿಯ ಪಕ್ಕಕ್ಕೆ ನಿಂತ.

ಇಬ್ಬರ ಮಾತು ಸಾಗಿತ್ತು. ತೊದಲುತ್ತಿದ್ದ. ಸೋಲು ಮಾತುಗಳ ಕಮಲಹಾಸ. ಚುರುಕಿನ ಧ್ವನಿಯ ಮೀನಾಕ್ಷಿ.

ಕಮಲಹಾಸನಿಗೆ ಕುಡಿತದ ಮತ್ತೇರಿರುವುದು ಸ್ಪಷ್ಟವಾಗಿತ್ತು. ಮಾತು ಎಳೆಯುತ್ತಿದ್ದ.

"........ಮುದುಕನ ಸಹವಾಸ ಬಹಳ ಕಷ್ಟ. ಅವನ ಮುಂದೆ ಮಾತಾಡೊ ಗುಂಡಿಗೆ ನನಗಿಲ್ಲ. ನೀನೇ ಆಡಬೇಕು... ಕುಡಿದು ಕೊರಡಿನ ಹಾಗೆ ಮಲಗಿದಾನೆ... ಕೋಟು, ಕಿಟ್, ಪೆಟ್ಟಿಗೆ ಎಲ್ಲಾ ತಡಕಾಡಿ ನೋಡ್ದೆ. ಅವನು ಉಯಿಲು ತಂದಿಲ್ಲ!...

ತಂದಿದ್ರೆ ಸಿಗದ ಹಾಗೆ ಎಲ್ಲೊ ಇಟ್ಕೊಂಡಿದಾನೆ...."

ಗದರು ಸ್ವರದಲ್ಲಿ ಮೀನಾಕ್ಷಿಯ ಉತ್ತರ ಬಂತು.

"ಇಷ್ಟು ವರ್ಷ ಕಾದಿರೋನಿಗೆ ಬೆಳಗಾಗೋವರೆಗೆ ತಡೆಯೋದಿಕ್ಕೆ ಆಗೋದಿಲ್ಲವೆ? ಪಿತಾಪುರಂ ಮಾಮನಿಗೆ ನೀನು ಉಯಿಲ ಹುಡುಕಾಡಿದ್ದು ಗೊತ್ತಾದ್ರೆ ರಂಪ ಮಾಡಿಬಿಡ್ತಾನೆ. ಎದುರಿಸಬೇಕಾದೋಳು ನಾನು."

ಅವನು ಆಕಳಿಸಿದ. ಮೇಜು ಬಲವಾಗಿ ತಟ್ಟಿದ.

"ನೀನು ಬಹಳ ನಿಧಾನ.... ಮಂದ ಸ್ವಭಾವದೋಳು. ಹತ್ತು ಲಕ್ಷಕ್ಕೆ ಇಷ್ಟು ವರ್ಷ ಕಾದು ಇನ್ನೂ ಬಾಯಿ ತೆರೆದೇ ಇಲ್ಲ... ವಿಳಂಬ ಅಪಾಯಕಾರಿ! ಈಗ ನಾನೇ ವೇಗದ ಕೆಲಸಕ್ಕೆ ಕೈ ಹಚ್ಚಬೇಕು. ನಿನ್ನೆಯಿಂದಲೇ ಯೋಚನೆ ಮಾಡ್ತಿದೀನಿ... ನಲವತ್ತು ಲಕ್ಷವೂ ಬರೊ ಹಾಗೆ ತಲೆಯಲ್ಲಿ ಮಿಂಚು ಕಂಡಿದೆ."

"ಏನದು?.... ಬೇಗ ಹೇಳು..." ಚಡಪಡಿಸಿದಳು.

ಕಾರ್ತೀಕ ಮೈಯೆಲ್ಲಾ ಕಿವಿ ಮಾಡಿ ನಿಂತ.

"ಹೇಳ್ತೀನಿ... ತಾಳು. ಇಷ್ಟು ವರ್ಷ ಕಾದಿರೋಳಿಗೆ ಎರಡು ನಿಮಿಷ ತಡೆಯೋ ತಾಳ್ಮೆ ಇಲ್ಲ... ನಲವತ್ತು ಲಕ್ಷ!"

ಬರಹಗಾರನನ್ನೂ ಕಾತರದಲ್ಲಿಡುವಂತೆ ಕಮಲಹಾಸ ಏನೂ ಹೇಳಲಿಲ್ಲ.

ಶೀಷೆ, ಟಂಬ್ಲರ್‌ಗಳ ಸದ್ದಿನೊಂದಿಗೆ ದ್ರವ ಸುರಿದುದು ಕೇಳಿತು. ಕಮಲಹಾಸ ಮತ್ತಷ್ಟು ಕುಡಿದಿರಬೇಕು. ಮೀನಾಕ್ಷಿಯೂ ಒಂದು ಗ್ಲಾಸ್ ಎತ್ತಿರುವುದರಲ್ಲಿ ಆಶ್ಚರ್ಯವಿಲ್ಲ.

ಕಾರ್ತೀಕನ ಊಹೆ ಸರಿ ಎಂಬಂತೆ ಪಾನಮತ್ತ ಅವಳನ್ನು ಒತ್ತಾಯಿಸುತ್ತಿದ್ದ.

"ತೊಗೊ, ಪರವಾಗಿಲ್ಲ."

"ಇವತ್ತು ಬೇಡ ಅನ್ನಿಸಿದೆ. ನೀನೇ ಕಡಾಯಿ ತುಂಬ್ಕೊ. ನಿನ್ನ ದೇಹ ದಪ್ಪ ಆಗ್ತಿದೇಂತ ಮುದುಕ ಹೇಳ್ದ."

ಮೂದಲಿಕೆಯ ಹಿಂದೆಯೇ ಅವಳ ನರಳುವಿಕೆ ಕೇಳಿತು.

"ನಿನ್ನ ಹಾಗೇ ಆ ಕಥೆ ಬರೆಯೋನು.. ಶೀಷೆ ಕಡೆ ಕಣ್ಣು ಹಾಕದ ದರಿದ್ರ! ವಾರಕ್ಕೊಂದು ಸಿಗರೇಟು ಸೇದ್ತಾನಂತೆ. ನಾಚಿಕೆಗೇಡು. ಆ ಕೆಟ್ಟ ವಾದ್ಯ, ಖಾಲಿ ಕಾಗದಗಳ ಮಧ್ಯೆ ಮಲಗಿಬಿಟ್ರೆ ಅವನಿಗೆ ಸ್ವರ್ಗ ಸುಖ.... ಮಾತಾಡೋದಿಕ್ಕೂ ಚೌಕಾಶಿ!... ಅವನು ಯಾಕೆ ಇಲ್ಲಿ ಇನ್ನೂ ಉಳಿದಿದಾನೆ ಅಂತ ಗೊತ್ತಾಗ್ಲಿಲ್ಲ. ನಾಳೆ ಮುದುಕನಿಗೆ ಹೇಳಿ, ಸ್ವಲ್ಪ ಹಣ ಅವನ ಮೈ ಮೇಲೆ ಎಸೆದು ಅವನ್ನ ಮೊದಲು ಕಳಿಸೋದು ನೋಡು."

ಕುಡುಕನ ಬಾಯಿಂದ ತನ್ನ ವರ್ಣನೆ ಕೇಳಿ ಬರಹಗಾರ ಹುಬ್ಬೇರಿಸಿದ.

ಮೀನಾಕ್ಷಿ ತರಾತುರಿಯಲ್ಲಿ ಹೇಳಿದಳು.

"ಅವೆಲ್ಲಾ ಅವನ ಸ್ವಂತ ವಿಷಯಗಳು. ನಲವತ್ತು ಲಕ್ಷದ ವಿಷಯಕ್ಕೆ ಬಾ ಅಂದೆ."

"ನಲವತ್ತು ಲಕ್ಷದ ಶ್ರೀಮಂತೇನ ನಾನು ಮದುವೆ ಆಗ್ತೀನಿ..."

ಗಾಜಿನ ಲೋಟ ನೆಲಕ್ಕೆ ಬಿದ್ದು 'ಠಳ್' ಶಬ್ದ ಬಂತು. ಮೀನಾಕ್ಷಿಯ ಮರು ಮಾತು ಕೇಳಲಾಗದಂತೆ ಕಾರ್ತೀಕನ ಎದೆಯಲ್ಲಿ ರಕ್ತದ ಬುಗ್ಗೆ ಬಳ್ಳನೆ ಎದ್ದು ಕೋಡಿ ಬಿತ್ತು.

"ನಲವತ್ತರ ವಯಸ್ಸಿನಲ್ಲಿ ಮದುವೆ ಹುಚ್ಚು! ಬೆಟ್ಟದಷ್ಟು ದುರಾಸೆ! ಇನ್ನೊಬ್ಬರ ಬಾಳು ಹಾಳಾಗೋದರ ಕಡೆ ಕುರುಡಾಗಿದೀಯ, ನೀನು ಸೌಭಾಗ್ಯಳನ್ನ ಮದುವೆ ಆದ್ರೆ ನನ್ನ ಗತಿ?"

"ನೀನೆಲ್ಲಿ ಹೋಗ್ತೀಯ, ಮೀನು. ನೀನು ನನ್ನ ಬಿಟ್ಟು ಹೋಗೋದಿಲ್ಲ. ನಾನು ನಿನ್ನ ಹೋಗೋದಿಕ್ಕೂ ಬಿಡೋದಿಲ್ಲ. ಇಬ್ಬರೂ ಬೇಗಂಚೆರ್ಲಾದಲ್ಲೇ ಸಾಯೋದು."

"ನಿನ್ನ ಕೆಟ್ಟ ತೀರ್ಮಾನಕ್ಕೆ ಸೌಭಾಗ್ಯ ಒಪ್ಪೋದಿಲ್ಲ."

ಅವಳ ಕಂಠದಿಂದ ಅಳುಕು ಸ್ವರ ಬಂತು.

"ಒಪ್ಪಿಸೋ ಚಾತುರ್ಯ, ಭಾರ ನಿನಗೇ ವಹಿಸಿದೀನಿ. ನೀನೇ ಹೇಳ್ತಿದ್ದೆ. ನಿನಗೆ ಎಂಟು ಮಿದುಳಿನ ತಲೆ ಅಂತ."

ವ್ಯಂಗ್ಯದ ಗಹಗಹ ನಗೆ ಏರಿತು. ಮತ್ತೆ ಮದಿರೆ ಸುರಿದ ಲೊಳ ಲೊಳ ಸದ್ದು.

"ಫೂಲ್! ನಾನು ಸುಧಾಕರನ್ನ ಕರೆಸಿ ಮದುವೆ ಏರ್ಪಾಟು ಅರ್ಧ ಪೂರೈಸಿದೀನಿ."

"ಫೂಲ್ ಆಗಿರೋದು ಸುಧಾಕರ... ಆ ಎಳಸು ನಾಯಿಗೆ ನಿನ್ನೆ ಪರ್ಸ್‌ನಿಂದ ಎರಡು ಎಂಜಲು ರೊಟ್ಟಿ ಚೂರು ಹಾಕು. ಆ ಹಳೆ ಪಿಯಾನೊ ಅವನ ತಲೆ ಮೇಲೆ ಹೊರಿಸಿ ಆಚೆಗೆ ಹಾಕು...."

ಜೋರಾಗಿ ತೇಗಿದ. ಅವನ ಎದೆಯ ಮೇಲೆ ದಬದಬ ಗುದ್ದಿದಳು.

"ಕಮಲ, ನಿನಗೆಲ್ಲಿ ಬಂತು ಈ ಅಸಾಧ್ಯದ ಕ್ಷುದ್ರ ಹಂಚಿಕೆ. ನಾನು ಇದನ್ನ ಎಂದೂ ಊಹಿಸಿರಲಿಲ್ಲ. ನೀನು ಸೌಭಾಗ್ಯಳನ್ನ ಮದುವೆ ಆಗೋದು ಸಾಧ್ಯವಿಲ್ಲ.

ನ್ಯಾಯವೂ ಅಲ್ಲ."

"ನೀನು ಕಾರ್ತೀಕನ್ನ ಮದುವೆ ಆಗ್ತೀನಿ ಅಂದಿದ್ದು ನ್ಯಾಯವೆ?"

ಕಾರ್ತೀಕ ಕಿಟಕಿಗೆ ಕಿವಿ ಒತ್ತಿದ.

ಟಂಬ್ಲರ್ ಕುಕ್ಕಿದ ಸಪ್ಪಳ. ಗಸಗಸ ಹೆಣ್ಣು ಮೆಲ್ಲನೆ ಚೀರಿತು. ಬಡಬಡಿಸುತ್ತಿತ್ತು ಗಂಡು.

ಕಾರ್ತೀಕ ಹಣೆ ಒರೆಸಿಕೊಂಡ. ಕಿಟಕಿಯ ಕಡೆಗೆ ಎತ್ತಿದ ಮುಷ್ಠಿ ಇಳಿಸಿದ. ಕೋಪ, ತಿರಸ್ಕಾರ ಕಲೆತ ಮನ ಸೌಮ್ಯವಾಗಿ ವಿರುದ್ಧ ದಿಕ್ಕಿಗೆ ಬೆರಳು ತೋರಿತು. ಕಾರ್ಯ ಮರೆತುಹೋಗಿತ್ತು. ಕಾಲುಗಳು ರಸ್ತೆಯ ದಿಬ್ಬದ ದಿಕ್ಕಿಗೆ ಮೆಲ್ಲನೆ ಹೊರಳಿದವು.

ನಲವತ್ತು ಲಕ್ಷ! ನಾಲ್ಕು ದಿನಗಳ ಹಿಂದೆ ಬಾಧ್ಯಸ್ಥೆಗೇ ಅದು ತನ್ನ ಸೊತ್ತೆಂದು ತಿಳಿದಿರಲಿಲ್ಲ. ಕಮಲಹಾಸ ಮದುವೆ ನೆಪದಲ್ಲಿ ಕಾನೂನಿನ ಕಡೆಗೆ ಕಣ್ಣು ಮೀಟಿ, ಸೊತ್ತು ಕಬಳಿಸಲು ಸಂಚು ಹೂಡಿರುವ ರಣಹದ್ದು! ಅಲ್ಲ, ಕಾದಂಬರಿಯ ನಾಯಕ ರಣಹದ್ದು! ಅದು ಸೌಭಾಗ್ಯಳ ಸ್ಫುಟವಾದ ಅಭಿಪ್ರಾಯ.

ಬಾಧ್ಯಸ್ಥೆಯನ್ನು ಮದುವೆಯಾಗಿ ಆಕಾಶದ ನಕ್ಷತ್ರಗಳನ್ನು ಎಣಿಸುತ್ತಿರುವ ಹುಂಬ ತಾನು. ಸೌಭಾಗ್ಯಳ ಸಂಪತ್ತು ತನಗೆ ಗೌಣ, ನಿಕೃಷ್ಟ. ಆದರೆ ಸೌಭಾಗ್ಯ ತನ್ನವಳು! ತನ್ನ ಮುಂದೆಯೇ ಸಾಗುತ್ತಿದೆ ಸಂಚು!

ವಿಳಂಬ ಮಾಡುವಂತಿಲ್ಲ. ಸೌಭಾಗ್ಯ ತನ್ನ ಹೆಂಡತಿಯೆಂದು ಕಮಲಹಾಸನಿಗೆ ಗುಂಡು ಹಾರಿಸಿದಂತೆ ಹೇಳಿಬಿಡುವೆ... ಬರ್ನಾರ್ಡ್‌ಗೆ ಕೊಟ್ಟ ಮಾತು? ಸೌಭಾಗ್ಯ ತನ್ನ ಪತ್ನಿಯೆಂದು ಅವಳಾಗಿ ಹೇಳುವ ಸಂಭವ? ಅಂತಹ ಸನ್ನಿವೇಶ, ಸಂದರ್ಭ ಬರುವಂತೆಯೇ ಇಲ್ಲ.

ಕಾರ್ತೀಕ ಹಿಂದಕ್ಕೆ ತಿರುಗಿ ಬೇಗ ಬೇಗ ನಡೆದ. ದೀಪದ ಕೋಣೆಯ ಕಿಟಕಿ ಈಗ ಮುಚ್ಚಿತ್ತು. ಒಳಗೆ ಪಿಸು ಮಾತು ಸಾಗಿತ್ತು.

ಕಿಟಕಿಯ ಮುಂದೆ ನಿಂತು ಬೆರಳಿನಿಂದ ಷಟರ್ ಒತ್ತಿದ. ನಿಶ್ಶಬ್ದವಾಗಿ ಒಳ ಸರಿಯಿತು. ನೀಳವಾಗಿ ನಿಂತು ಒಳಕ್ಕೆ ಇಣುಕು ನೋಟ ಹಾಕಿದ. ಬೆಳಕಿನಲ್ಲಿ ಕಣ್ಣಿರಿಯುವಂತೆ ಕಂಡಿತು.

ಬೃಹತ್ ವಿದ್ಯುತ್ತಿಗೆ ಸಿಕ್ಕಿ ಕರಿಗಟ್ಟಿದ ನಿರ್ಜೀವ ಭೌತ ವಸ್ತುವಾಗಿ ನಿಂತ.

ಎರಡು ಪೂರ್ಣ ನಗ್ನ ಶರೀರಗಳು! ಲೈಂಗಿಕ ದಾಹ ತೀರಿಸಿಕೊಳ್ಳಲು ಪರಿಜ್ಞಾನಶೂನ್ಯರಾಗಿ, ಉನ್ಮತ್ತ ಅಂಗಗಳ ಹುಚ್ಚು ಸ್ಪರ್ಶಾಟ ನಡೆಸುತ್ತಿರುವ ಉಗ್ರ ಕಾಮಿಗಳು! ಹಂಬು, ಲತೆಯಂತೆ ಏದುಸಿರಿನಲ್ಲಿ ಬಲವಾಗಿ ಅಪ್ಪಿದ ಸರ್ಪಗಳ

ಜೋಡಿ...

ವಿರಕ್ತನಿಗದು ವಿಚಿತ್ರ ಆಕರ್ಷಣೆಯ, ಅಪೂರ್ವ ದೃಶ್ಯ. ಕಂಪನ ಮೂಡಿಸುವ ವಿಕೃತ ನೋಟ. ಕಾಮಮತ್ತರ ದೈಹಿಕ ಹಸಿವಿನ ಅತಿರೇಕದಿಂದ ತತ್ತರಿಸಿದ.... ಕಿಟಕಿ ಹಾಗೆಯೇ ಹಿಂದಕ್ಕೆ ಎಳೆದು ಹಿಮ ಕುಡಿದ ಮೈ ಬಲವಾಗಿ ಒತ್ತಿಕೊಂಡ. ಭಾರವಾದ ಹೆಜ್ಜೆ ಕದಲದು.

ಅಸಹ್ಯಯಲ್ಲೂ ಇಣುಕು ಹಾಕಿತು ಅಚ್ಚರಿ.

ಕಮಲಹಾಸ... ಮೀನಾಕ್ಷಿ... ಅಣ್ಣ! ತಂಗಿ!

ಅಣ್ಣ, ತಂಗಿಯ ನಡುವಣ ವಿಕೃತಿ ಕಾಮಕೇಳಿಯ ಪ್ರಸಂಗ ಕೇಳಿರುವೆ, ಓದಿರುವೆ... ಕಲ್ಪನೆಗೂ, ಪ್ರತ್ಯಕ್ಷ ನೋಟಕ್ಕೂ ಇರುವ ಅಂತರ ಅಗಾಧ, ಊಹಾತೀತ. ಬತ್ತಲೆಯ ಉನ್ಮತ್ತರ ಕಾಮಚೇಷ್ಟೆಯ ಪರಾಕಾಷ್ಠೆ ಇವರಲ್ಲೇ ಕಾಣುವಂತಾಗಬೇಕೆ?

ನಲವತ್ತು ವರ್ಷದ ಕಮಲಹಾಸ ಇನ್ನೂ ಏಕೆ ಮದುವೆ ಆಗಿಲ್ಲ? ಎಸ್ಟೇಟ್ ಮಂದಿಯ ಪ್ರಶ್ನೆಗೆ ಕಾರ್ತೀಕ ಉತ್ತರ ಕಂಡಿದ್ದ.

ವಿಕಾರ ಭಾವನೆಗಳು ಚುರುಗುಟ್ಟಿದವು. ಚಿತ್ತ ವಿಕಲ್ಪಗೊಳ್ಳುವ ಮೊದಲೇ ವಿರಕ್ತ ಕಣ್ಣು ಮುಚ್ಚಿ ವೇಗವಾಗಿ ಕಾಲೆಳೆದ.

* * *

ವಕೀಲ ಪಿತಾಪುರಂ ಹಾಸಿಗೆಯಿಂದ ಧಿಗ್ಗನೆ ಎದ್ದು ನಿಂತು ಕನ್ನಡಕ ಮೇಲು, ಕೆಳಗು ಸರಿಸಿದ.

ಹಿತವಾದ, ತೆಳುಗಪ್ಪಿನ ಚೆಲುವು ಮುಖ. ಕಣ್ಣು ಸೆಳೆಯುವ ಕೇಶರಾಶಿ. ಹನ್ನೊಂದು ವರ್ಷಗಳಿಂದ ಕಾಣಲಾಗದಿದ್ದರೂ ತೃಣ ಮಾತ್ರದ ಸಂಶಯಕ್ಕೂ ಎಡೆಗೊಡೆದ, ಮರೆಯದ ಮುಖ!

"ಪದ್ದು! ಪದ್ದು!... ನಿನಗೆ ನೆಪಿಲ್ಲವೆ ಈ ಕೋರ್ಟು ಮಾಮ?"

ಸಿರಿಕಂಡ ಲೋಭಿಯಂತೆ ಉದ್ಗರಿಸಿದ. ಪಾದ ಸ್ಪರ್ಶಿಸಿದವಳನ್ನು ಹಾರ್ದಿಕವಾಗಿ ತಬ್ಬಿ ಅವಳ ನೆತ್ತಿ ಚುಂಬಿಸಿ, ತಲೆ ನೇವರಿಸಿದ. ಉದ್ವೇಗದಲ್ಲಿ ಕಣ್ಣು ದ್ರವಿಸಿತು. ಸಂತಸದ ಭರದಲ್ಲಿ ಏನೊ ಗೊಣಗಿದ.

ಕಾಣೆಯಾದ ತಂದೆಯ ಪ್ರೀತಿ, ವಾತ್ಸಲ್ಯ ಅವನಲ್ಲಿ ಕಂಡಿತ್ತು.

"ನನಗೆ ನೆನಪಿಲ್ಲ... ನನ್ನ ತಂದೆಗೆ ತುಂಬಾ ಬೇಕಾದ ಸ್ನೇಹಿತರು, ಹಿತೈಷಿಗಳು ಅಂತ ಕೇಳ್ದೆ. ನೀವೇ ನನಗೆ ದಾರಿ ತೋರಬೇಕು."

ಅವಳ ತುಂಬು ಮಾತಿನಲ್ಲಿ ಅವನಿಗೆ ಕಂಠ ಬಿಗಿದು ಬಂತು.

"ಎಲ್ಲಾ ತೋರಿಸಿಕೊಡ್ತೀನಿ. ಹೆದರಬೇಡ, ಮಗು. ನಿನ್ನ ತಂದೆಗೆ ನಾನೊಬ್ಬನೇ ಸಲಹೆಗಾರ, ಮಾರ್ಗದರ್ಶಿ, ಕುಟುಂಬ ಮಿತ್ರ, ಸೋದರ ಎಲ್ಲಾ... ಅದಕ್ಕೇ ಈ ಆಸ್ತಿ ವಿಷಯದಲ್ಲಿ ನನಗೊಂದು ಕಡೇ ಮಾತಿನ ಅಧಿಕಾರ ಉಳಿಸಿ ಹೋದ. ಚಂದ್ರಬಾಬು ಹಸುವಿನಂತಹ ಮನುಷ್ಯ. ಕೋಪವೇ ಬರ್‍ತಾ ಇರ್ಲಿಲ್ಲ. ತುಂಬಾ ಹದಗೆಟ್ಟಾಗ 'ವೆಧವ.....ವೆಧವ' ಅಂತ ಬೈತಿದ್ದ. ಅದಷ್ಟೇ ಅವನಿಗೆ ವಿಪರೀತದ ಕೆಟ್ಟ ಮಾತು. ದುಷ್ಟ ತಮ್ಮ ಶತ್ರುಘ್ನಬಾಬುವನ್ನೆ ಸಹಿಸಿಕೊಂಡಿದ್ದೋನು..."

ಮಾತಿನಲ್ಲಿ ಕಿಶೋರನಾದ ವಕೀಲ ಕಣ್ಣರಳಿಸಿ ಹಳೆಯ ಕಥೆ ಬಡಬಡಿಸಿದ.

ಚಂದ್ರಬಾಬುವಿಗೆ ಮದುವೆಯಾದ ಹತ್ತು ವರ್ಷಗಳ ಮೇಲೆ ಪದ್ಮಾವತಿ ಹುಟ್ಟಿದಳಂತೆ. ಅದೂ ಗಂಡ, ಹೆಂಡತಿ ತಿರುಪತಿಗೆ ಹತ್ತಾರು ಸಾರಿ ಯಾತ್ರೆ ಮಾಡಿದ ಮೇಲೆ. ಅವರಿಬ್ಬರೂ ಕೆಂಪು ಟೊಮೆಟೊ ಹಾಗಿದ್ರೂ ಮಗಳು ಮಾತ್ರ ತಿಳಿಗಪ್ಪು! ಪದ್ಮಾವತಿಯ ತಲೆಗೂದಲು ನೋಡೋದಿಕ್ಕೇ ರಾಣಿಗುಡದಿಂದ ಜನ ಬರ್ತಿದ್ರಂತೆ. ದೃಷ್ಟಿ ಆಗತ್ತೇಂತ ಚಂದ್ರಬಾಬು ತಿರುಪತಿಗೆ ಅವಳ ಮುಡಿ ಒಪ್ಪಿಸಿದ! ಆಮೇಲೆ ಅದು ಮೊದಲಿಗೆ ಎರಡರಷ್ಟು ಸೊಂಪಾಗಿ ಬೆಳೆದು ಹೋಯ್ತು!

ಪಿತಾಪುರಂ ಮಾಮನ ಜೊತೆ ಅದೇನು ಆಟ ಅವಳಿಗೆ! ಒಂದು ಸಾರಿ ವಕೀಲನ ಎದೆಗೆ ಏಟು ಹಾಕಿದಾಗ ಅವನು 'ಹಾ!...' ಅಂತ ಬಿದ್ದು ಕಣ್ಣು ಮುಚ್ಚಿ ನಾಟಕ ಆಡಿದ. 'ಕೋರ್ಟು ಮಾಮ ಸಚ್ಚಿಪೋಯ!' ಅಂತ ಅವಳು ಎಸ್ಟೇಟೆಲ್ಲಾ ಕೂಗಿಕೊಂಡು ಓಡಾಡಿದ್ಲಂತೆ...

ಒಂದೇ ಸಮನೆ ಉತ್ಸಾಹದಿಂದ ಹೇಳಿ ತೇಲುಗಣ್ಣು ಒರೆಸಿಕೊಂಡು ದವಡೆಗೆ ಬೀಡಾ ಸೇರಿಸಿದ... ಹಣೆಗೆ ಟಕ ಟಕ ಬೆರಳು ಬಡಿದು ಮುಂದುವರಿಸಿದ.

"ಪದ್ದು, ನಾನೆಂತ ಪೆದ್ದ! ನಿನ್ನೆ ಬೆಳಗ್ಗೆ ಬಂದಾಗ ನೀನು ದೇವಸ್ಥಾನಕ್ಕೆ ಹೋಗಿದ್ದೆ. ಮೊದಲು ನಿನ್ನ ನೋಡಬೇಕು ಅಂದೋನು ಹೆಣದ ಹಾಗೆ ನಿದ್ರೆ ಮಾಡ್ಬಿಟ್ಟೆ. ಎರಡು ಡಿಗ್ರಿ ಜ್ವರ ಬೇರೆ. ಸಂತೋಷದ ಭರದಲ್ಲಿ ಎರಡಕ್ಕೆ ಬದಲು ನಾಲ್ಕು ನಿದ್ರೆ ಮಾತ್ರೆ ನುಂಗಿಬಿಟ್ಟೆ. ರಾತ್ರಿ ಎಚ್ಚರವಾದಾಗ ಕಂಠಪೂರ್ತಿ ಅಮೃತ ಕುಡಿದುಬಿಟ್ಟೆ. ನಾನು ವೆಧವ!.... ನೀನೊಬ್ಬಳೇ ಬಂದೆಯೇನು ಈಗ?"

"ಹೌದು, ಮೀನಾಕ್ಷಿ ನನ್ನೊಬ್ಬಳನ್ನೇ ಕಳಿಸಿದ್ಲು."

"ಒಳ್ಳೇದು ಮಾಡಿದ್ಲು. ಹಳೆ ಅಮೃತಕ್ಕೆ ಏನೊ ಹಾಕಿ ಬುದ್ಧಿ ಮಂಕು ಮಾಡ್ತಾಳೆ... ನಿನ್ನ ವಿಷಯದಲ್ಲಿ ಬೇಕಾದಷ್ಟು ತಿಳಿಸಿದಾಳೆ... ಹಾಂ, ಎಲ್ಲಿ ನಿನ್ನ ಸಾಕಿದ ಮನುಷ್ಯ?"

ಬಾಗಿಲ ಕಡೆ ನೋಡಿದ.

"ಕಾರ್ತೀಕ... ತೋಟದ ಮನೇಲಿದಾರೆ. ನಿಮ್ಮನ್ನ ನೋಡೋದಿಕ್ಕೆ ಬಹಳ ಕಾತರವಾಗಿದಾರೆ."

ಹಾಗೆ ಹೇಳುವಾಗ ಧನದಾಹಿಯ ಮುಖ ಅವಳ ಮುಂದೆ ಬಂತು. ಸಂಚು! ಸ್ವಾರ್ಥ!

"ಮಧ್ಯಾಹ್ನ ಎಲ್ಲಾ ತಿಳಿಸಿ ಹೋಗ್ತೀನಿ. ಇಲ್ಲಿ ವ್ಯವಹಾರ ದೊಡ್ಡದು. ನೀನು ಬುದ್ಧಿವಂತೆ. ಕಾರ್ತೀಕನಿಂದ ತರಬೇತು ಪಡೆದೋಳು. ಒಂದು ತಿಂಗಳಲ್ಲಿ ನುರಿತು ಹೋಗ್ತೀಯ. ಆ ಕಾರ್ತೀಕನೇ ನಿನ್ನ ಸಹಾಯಕ್ಕೆ ನಿಂತ್ರೆ ಒಳ್ಳೇದು. ಅವನಿಗೂ ಹೇಳಿ ಹೋಗ್ತೀನಿ. ನಿನ್ನ ಮದುವೆ ಏರ್ಪಾಟು ಬೇಗ ಆಗ್ಬೇಕು... ಈಗ ಹೋಗು, ಮಗು. ಮತ್ತೆ ಕಾಣ್ತೀನಿ."

ಉದ್ವೇಗದಲ್ಲಿ ಹಾರ್ದಿಕವಾಗಿ ನಕ್ಕು, ಜಾರುತ್ತಿದ್ದ ಕನ್ನಡಕ ಏರಿಸಿ ದಾನಿಗೆ ಎಲೆ ರಸ ಸುರಿಸಿದ. ಆಯಾಸದಿಂದ ಹಾಸಿಗೆಯಲ್ಲಿ ಕಾಲು ಚಾಚಿ ಕಾನೂನು ಪುಸ್ತಕದಲ್ಲಿ ಕಣ್ಣು ಹೂಡಿದ.

ಓದಿನಲ್ಲಿ ಹಾಗೆಯೇ ಮಗ್ನನಾದ. ಹದಿನೈದು ನಿಮಿಷ ಕಳೆದು, ಬೆವರು ಒತ್ತಲು ಟವೆಲ್‌ಗಾಗಿ ತಿರುಗಿದಾಗ ಮೇಜು ಒರಗಿ ನಿಂತಿದ್ದ ಲೇಖಕ ಕಾಣಿಸಿದ.

"ಕಾರ್ತೀಕ......?" ಸಣಬಿನ ತಲೆ ಸವರಿ ಬೆರಳು ಮುಂದೆ ಮಾಡಿ ಕೇಳಿದ.

"ಹೌದು... ಕಾರ್ತೀಕ"

ಮೇಜು ಬಿಟ್ಟು ಮುಂದೆ ಬಂದ. ವೃದ್ಧನ ಪಾದ ಸ್ಪರ್ಶಿಸದೆ ಅವನ ಹಣೆ ಸುಕ್ಕುಗಟ್ಟುವಂತೆ ಮಾಡಿದ.

"ನಿನ್ನ ಜುಬ್ಬಾ, ಪ್ಯಾಂಟ್, ಕಣ್ಣು ನೋಡಿ ಬರಹಗಾರ ಅಂತ ತಿಳಿದು, ಕಾರ್ತೀಕ ಅಂತ ಕಂಡುಹಿಡಿಬೇಕು... ನನ್ನ ಕರೆದು ಎಚ್ಚರಿಸಬಹುದಿತ್ತು.. ಓ ನೀನು ಬರೆಯೋವಾಗ ನಾನೂ ಅಡಚಣೆ ಮಾಡೊ ಹಾಗಿಲ್ಲವಲ್ಲ. ಸ್ವಾಭಿಮಾನಿಗಳು ಅಂದ್ರೆ ಕನ್ನಡ ಸೀಮೆಯೋರು."

ಸ್ವಾಭಿಮಾನದ ತುಣುಕು ಭಾವವೂ ಬರದಂತೆ ಹಸನ್ಮುಖನಾದ ಬರಹಗಾರ.

"ಹಾಗೇನೂ ಇಲ್ಲ. ಸುಮ್ಮನೆ ಗಮನಿಸ್ತಾ ನಿಂತೆ."

"ನಿನ್ನ ಕಥೆಗೆ ಒಂದು ತೆಲುಗು ಪ್ರಾಣಿ ಅಂತ ನನ್ನ ಸೇರಿಸೋದಿಕ್ಕೆ! ಯಾವುದೊ ಪುಸ್ತಕ ಬರೀತಾ ಇದೀಯ ಅಂತ ಮೀನಾಕ್ಷಿ ಹೇಳಿದ್ಲು..."

ನೆನಪಿಗಾಗಿ ಗಾಳಿಯಲ್ಲಿ ಬೆರಳು ಸುತ್ತಿದ.

"ಮಣ್ಣಿನ ದೋಣಿ...."

“ಹೆಸರು ಚೆನ್ನಾಗಿದೆ. ಆದರೆ ಮಣ್ಣಿನ ದೋಣಿ ಎಲ್ಲಿರುತ್ತೆ? ಅಂದರೆ ಟ್ರ್ಯಾಜಿಡಿ! ಅದು ನಿನ್ನ ಕಥೆ ಅಂತ ಕೇಳ್ದೆ. ನಿನಗೆ ಜೀವನದಲ್ಲಿ ಬಹಳ ಬೇಸರವಾಗಿರಬೇಕು. ಆ ಕಥೆ ಬರೆಯೋದು ನಿಲ್ಲಿಸಿಬಿಡು, ಯಂಗ್ ಮ್ಯಾನ್.”

“ಇವತ್ತು ಕಥೆ ಪೂರೈಸಬೋದು.”

“ಗುಡ್... ಮತ್ತೆ ಆ ಬುಲ್ ಬುಲ್ ತರಂಗ್ ಬಾರಿಸ್ತೀಯಂತೆ. ಅದು ಮತ್ತೆ ಹಾರ್ಮೋನಿಯಂ ಎರಡೂ ನನ್ನಂತ ಹಳೆ ಮನುಷ್ಯನಿಗೇ ಬೇಸರ ತರುತ್ವೆ. ನಿನಗೆ ಗೊತ್ತಿಲ್ಲ.... ನಮ್ಮ ಕಡೆ ಆ ವಾದ್ಯ ಬಾರಿಸೋರು ಗುಜರಿ ಅಂಗಡಿಯೋರು ಮಾತ್ರ..... ಕ್ಷಮಿಸು.”

ವೃದ್ಧ ಅವನನ್ನು ಸಮೀಪಿಸಿ ಭುಜ ತಟ್ಟಿ ಹೇಳಿದ.

“ನೀನು ದೊಡ್ಡ ಬರಹಗಾರ. ನಿನ್ನ ಅಪರೂಪದ ಹವ್ಯಾಸ, ಅನುಭವಿ ಮುಖ, ತೀಕ್ಷ್ಣ ಕಣ್ಣು ನೋಡಿದ್ರೆ ನೀನೊಬ್ಬ ಸಂಭಾವಿತ, ದೊಡ್ಡ ಮನುಷ್ಯ, ವಿಶಾಲ ಹೃದಯಿ ಅಂತ ನನ್ನ ಅನುಭವ ಪಟ್ಟಿ ಮಾಡುತ್ತೆ. ಸ್ವಾಭಿಮಾನಿ ಅನ್ನೋದು ಮೊದಲೇ ಹೇಳ್ದೆ.”

“ನಿಮ್ಮ ಅಭಿಪ್ರಾಯಕ್ಕೆ ತುಂಬ ಥ್ಯಾಂಕ್ಸ್.”

“ಬಹಳ ದೊಡ್ಡ ಉಪಕಾರ ಮಾಡಿದೀಯ. ಆಪತ್ಕಾಲದಲ್ಲಿ ನನ್ನ ಮಗಳಿಗೆ.. ಪದ್ದು ನನ್ನ ಮಗಳಿಗಿಂತ ಹೆಚ್ಚು. ಅವಳನ್ನು ಚೆನ್ನಾಗಿ ಸಾಕಿದೀಯ. ನಿನ್ನ ಆಶ್ರಯದಲ್ಲಿ ಚಿಕ್ಕ ವಯಸ್ಸಿಗೆ ಎಷ್ಟು ಸುಧಾರಿಸಿಕೊಂಡಿದಾಳೆ ಹುಡುಗಿ! ಅವಳ ಮಿತವಾದ ಮಾತು, ಸಂಗೀತ... ಮೀನಾಕ್ಷಿ ಬರೀತಾ ಇದ್ದ ಕಾಗದದ ತುಂಬಾ ಅದೇ ವಿಷಯ. ಹಾಗೆ ಬರೆದಾಗ ಅವಳಿಗೆ, ನನಗೆ ಸೌಭಾಗ್ಯ ಚಂದ್ರಬಾಬು ಮಗಳು ಅನ್ನೋದರ ಸುಳಿವೇ ಇರಲಿಲ್ಲ... ಯಂಗ್‌ಮ್ಯಾನ್. ಅವಳ ಮದುವೆ ಮುಗಿಸಿಬಿಟ್ರೆ ನಾನು ನಿಶ್ಚಿಂತ.’

ಕಾರ್ತೀಕನಲ್ಲಿ ಏರುಪೇರಿರಲಿಲ್ಲ. ಸಾಕಷ್ಟು ಆಳವಾಗಿ ಇಳಿದಿದ್ದ ವಿಷಯ ಹದವಾದ ಚಿತ್ತವನ್ನು ಕೆದಕಲಿಲ್ಲ.

“ಅವಳ ಮದುವೆ ವಿಷಯ ನನಗೂ ಸೇರಿದೆ.”

ವೃದ್ಧ ತೃಪ್ತಿಯಿಂದ ಮುಖ ಅಲುಗಿಸಿದ.

“ನೀನು ಮಾಡಿರೊ ಉಪಕಾರಕ್ಕೆ ಬೆಲೆ ಕಟ್ಟೋದು ಸಾಧ್ಯವಿಲ್ಲ. ಆದರೂ ನಾನು ಲೆಕ್ಕಾಚಾರದ ಮನುಷ್ಯ. ಮೀನಾಕ್ಷಿ ಇಪ್ಪತ್ತೈದು ಸಾವಿರ ಅಂತ ಹೇಳಿದ್ಲು. ಉಹುಂ, ಕೃತಜ್ಞತೆಯ ಹಣ ಅಂತ ಐವತ್ತು ಸಾವಿರ ಕೊಡಿಸಲೆ?”

ಕಾರ್ತೀಕ ವೃದ್ಧನ ಕೈ ಆತ್ಮೀಯವಾಗಿ ಹಿಡಿದ.

"ಹಣಕ್ಕಾಗಿ ನಾನು ಸೌಭಾಗ್ಯಳ ಯೋಗಕ್ಷೇಮ ವಹಿಸಿಕೊಳ್ಳಲಿಲ್ಲ. ಅವಳ ಮುಗ್ಧ ಮುಖ, ಅವಳ ತಾಯಿಗೆ ಕೊಟ್ಟ ಮಾತು, ಅವಳೊಂದಿಗೆ ನನ್ನನ್ನು ಸೇರಿಸಿದ ಒಂದು ವಿಚಿತ್ರ, ಅದ್ಭುತ ಸನ್ನಿವೇಶ ಇವಿಷ್ಟೂ ನಮ್ಮಿಬ್ಬರನ್ನು ಒಂದು ಚೌಕಟ್ಟಿನಲ್ಲಿ ಬಂಧಿಸಿದ್ದು. ನಿಮ್ಮಿಂದ ನಾನು ಅಪೇಕ್ಷಿಸೋದು ಇಷ್ಟೆ. ದೊಡ್ಡ ವಿಪತ್ತುಗಳಿಗೆ ಕಾರಣವಾಗುವ ಹೆಣ್ಣಿನ ಸಣ್ಣ ದೋಷಗಳು ಅವಳಿಂದ ದೂರವಾಗಲಿ ಅಂತ ಅವಳಿಗೆ ನೀವು ಆಶೀರ್ವಾದ ಮಾಡಿದರೆ ಸಾಕು."

ಅರ್ಥವಾಗದ ಅರ್ಥವಾತ್ತಾದ ಮಾತು! ವಕೀಲ ಕನ್ನಡಕ ತೆಗೆದು ಅವನ ಮತ್ತಷ್ಟು ಮಾತುಗಳಿಗೆ ಕಾತರಿಸಿದ. ಕನ್ನಡ ಸೀಮೆಯ, ಸ್ವಾಭಿಮಾನಿಯ ಗಂಭೀರ ನುಡಿ ಕೇಳುವ ಆಸೆಲ.

"ಅದ್ಭುತ ಮನುಷ್ಯ!""

ಗಿಡುಗನ ಕಣ್ಣು ಹೊಳೆಯಿತು. ಕೆನ್ನೆಗಳು ಉಬ್ಬಿದವು.

"ಅಲ್ಲ, ಹದಿನಾರರ ಹೆಣ್ಣಿನ ಸ್ವಭಾವವನ್ನೇ ಅರ್ಥ ಮಾಡಿಕೊಳ್ಳದ ಸಾಮಾನ್ಯ ಮನುಷ್ಯ."

ಅವಾಕ್ಕಾದ ಪಿತಾಪುರಂ ಏನೊ ಹೇಳದೆ ನಿಂತ. ಕಾರ್ತೀಕ ವಂದಿಸಿ ಹೊರ ಬಿದ್ದ.

ವಕೀಲ ತಲೆ ಒದರಿ, ಕೋಣೆ ಬಾಗಿಲು ಮುಚ್ಚಿ ಆರಾಮವಾಗಿ ಮೇಜಿನ ಮುಂದೆ ಕುಳಿತ. ಹಿಂದಿನ ರಾತ್ರಿ ಎಚ್ಚೆತ್ತ ಮೇಲೆ ಸೇವಿಸಿ ಉಳಿದ ಇನ್ನೂರು ವರ್ಷಗಳ ಹಳೆಯ ದ್ರಾಕ್ಷಾರಸದ ಶೀಷೆ ಎತ್ತಿದ. ಅರ್ಧ ತಾಸು ಪುಸ್ತಕ ಹಿಡಿದು ಬೀಡಾದ ಮಕಮಲ್ ಪೆಟ್ಟಿಗೆ ತೆರೆಯುವ ಹೊತ್ತಿಗೆ ಬಾಗಿಲು ತಟ್ಟಿದ ಶಬ್ದ ಕೇಳಿತು. ಗೊಣಗುತ್ತಾ ಬಾಗಿಲು ತೆಗೆದಾಗ ಒಳ ಬಂದವಳು ಮೀನಾಕ್ಷಿ.

"ಟಿಫಿನ್ ರಎಡಿ ಇದೆ, ಮಾಮ... ಕಳಿಸಲೆ?"

ರಾಗವಾಗಿ ಕೇಳಿದವಳನ್ನು ಪರೀಕ್ಷಿಸುವಂತೆ ನೋಡಿದ.

"ಮೀನು, ನೀವೆಲ್ಲಾ ಮಾತಾಡಿಕೊಂಡಿದಿರೇನು? ಒಬ್ಬರಾದ ಮೇಲೊಬ್ಬರು ಸಂದರ್ಶನಕ್ಕೆ ಬರೊ ಹಾಗೆ ಕೋಣೆಗೆ ಬರ್ತಾ ಇದೀರಿ.. ನನಗೆ ವೇಳೆ ಇಲ್ಲ. ಮಧ್ಯಾಹ್ನ ಹೊರಡಬೇಕು. ಹೆಚ್ಚಿನ ಮಾತು ಮುಂದಿನ ಸಾರಿ ಬಂದಾಗ.. ಟಿಫಿನ್ ಕಳಿಸ್ತೀನಿ ಅಂದೆಯಾ? ನೀನೇ ತೊಗೊಂಡು ಬಾ."

ಹಾಸಿಗೆಯ ಮೇಲೆ ಕುಳಿತ.

ಉಪಾಹಾರದ ತಟ್ಟೆಗಳನ್ನು ಹಿಡಿದ ಮೀನಾಕ್ಷಿಯ ಸಹಾಯಕನಾಗಿ ಕಮಲಹಾಸನೂ ಹಿಂದೆಯೇ ಬಂದ.

ವಕೀಲ ತಿನಿಸುಗಳ ಮೇಲೆ ಕಣ್ಣು ಹರಿಸದೆ ಉಪ್ಪಿನಕಾಯಿ ವಿರಾಮವಾಗಿ ಚಪ್ಪರಿಸುತ್ತಾ, "ಖಾರ ಸಾಲದು" ಎಂದ. ಆದಾಯ, ವೆಚ್ಚದ ಮಾತು ಆಡಿದ.

ಮೇಜು ಒರಗಿ ನಿಂತ ಕಮಲಹಾಸ ಒಂದೇ ಸಮನೆ ಬೆರಳು ಹಿಸುಕಿದ. ಮುದುಕ ಆಸ್ತಿ, ಉಯಿಲಿನ ಸುದ್ದಿಯೇ ಎತ್ತಲೊಲ್ಲ! ಯಾರ ಸೊತ್ತಿಗೆ ಯಾರ ಅಂತಿಮ ನಿರ್ಧಾರ?

ವಕೀಲ ದಿನಪತ್ರಿಕೆ ತಿರುವುತ್ತಾ ಕೇಳಿದ.

"ಎಷ್ಟು ದಿನಾಂತ ಹೀಗೇ ಇರ್ತೀರಿ ನೀವಿಬ್ರೂ?"

ಪತ್ರಿಕೆಯಿಂದ ತಿರುಗಿದ ಗಿಡುಗನ ದೃಷ್ಟಿ ಇಬ್ಬರನ್ನೂ ತಿವಿಯಿತು. ಮೀನಾಕ್ಷಿ ಉಸಿರ್ಗರೆದಳು.

"ನಿಮ್ಮ ದಯೆ ಇರೋಷ್ಟು ದಿನ... ನಿನ್ನೆಯಿಂದ ಮಾತಾಡೋಕೆ ಅವಕಾಶವೇ ಸಿಕ್ಕಿಲ್ಲ, ಮಾಮ. ಇವತ್ತು ವಿಷಯ ಒಂದು ಘಟ್ಟಕ್ಕಾದರೂ ತಂದು ಹೋಗಿ. ನಾವು ಸಾಯೋವರೆಗೆ ನಿಮ್ಮನ್ನ ಮರೆಯೋದಿಲ್ಲ."

"ನಾನು ಕೇಳಿದ್ದು ನಿಮ್ಮ ಬದುಕಿನ ನಿರ್ವಹಣೆ ವಿಷಯ ಅಲ್ಲ."

ಇಬ್ಬರೂ ಕಂಪಿಸಿದರು. ತತ್ಕಾಲದ ಮಾತು ನಿಭಾಯಿಸಲು ಹೆಣ್ಣೇಗತಿ ಎಂದು ಹಲ್ಲು ಕಚ್ಚಿ ನಿಂತಿತು ಗಂಡು. ಹೆಣ್ಣು ತಲೆ ತಗ್ಗಿಸಿ ಮಾತು ಜಾರಿಸಿತು.

"ಅರ್ಥ ಆಯ್ತು, ಮಾಮ. ಅದರ ವಿಷಯದಲ್ಲಿ ನಿಮ್ಮ ಅಪ್ಪಣೆ ತಲೆಯಲ್ಲಿ ಹೊರತೀವಿ... ನಾವು ಎಸ್ಟೇಟ್ ವ್ಯವಹಾರ ಎಷ್ಟು ಮುತುವರ್ಜಿಯಿಂದ ನೋಡಿಕೊಂಡಿದೀವಿ ಅನ್ನೋದು ನಿಮಗೆ ಗೊತ್ತು. ದೇವರಿಗೆ ಗೊತ್ತು."

ಮಂಪರಿನಲ್ಲಿ ತಲೆ ಆಡಿಸಿದ ವೃದ್ಧ.

"ನನಗೆ ಗೊತ್ತು. ದೇವರಿಗೇನು ಗೊತ್ತು, ಪಾಪ. ನಿಮಗೆ ಪ್ರತಿಫಲ ಸಿಗತ್ತೆ. ಸೌಭಾಗ್ಯ ನನ್ನ ಮಾತಿಗೆ ಇಲ್ಲ ಅನ್ನೋದಿಲ್ಲ."

ಎಂದು ಗೊಣಗಿದವನು ತೇಲುಗಣ್ಣು ಎತ್ತಿದ.

"ಮೀನು, ಸಂತುರಾಮ ಏಕಾಏಕಿ ಸತ್ತಿದ್ದು ಯಾಕೆ?"

ಗುಂಡಿನ ಹೊಡೆತದಂತೆ ಬಂದ ಅನಿರೀಕ್ಷಿತ ಪ್ರಶ್ನೆಯಿಂದ ತಲ್ಲಣಿಸಿದ ಕಮಲಹಾಸ ಮುಂದೆ ಬಂದು ವಿನಂತಿಸಿದ.

"ನಿಮಗೆ ಫೋನ್ ಮಾಡಿ ತಿಳಿಸಿದ್ದೆ...."

ವಕೀಲ ಕೈ ಎತ್ತಿ ಅವನನ್ನು ಸುಮ್ಮನಾಗಿಸಿ ಮೀನಾಕ್ಷಿಗೆ ಉತ್ತರಿಸುವಂತೆ ಸೂಚಿಸಿದ. ಎಚ್ಚರಿಕೆಯಿಂದ ವರದಿ ನೀಡಿದಳು.

"ಬರ್ನಾರ್ಡ್ ಅವನ ಪಾಲಿನ ಆಸ್ತಿ ಇಲ್ಲಿದೆ ಅಂತ ತಪ್ಪು ತಿಳಿದು ಬಂದ. ಕೊಲೆಗಾರ ಅನ್ನೊ ಕಾರಣಕ್ಕೆ ಬರೋದನ್ನ ತಡ ಮಾಡಿದ. ನಾನು ಅವನ ಮುಖವಾಡ ಕಳಚಿದಾಗ ಸಂತುರಾಮ ಆದ. ಚಂದ್ರಬಾಬು ಸಾಯೋ ಮೊದಲು ಉಯಿಲು ಮಾಡ್ತೀನಿ ಅಂತ ಅವನಿಗೆ ಹೇಳಿದ್ರಂತೆ. ಪದ್ಮಾವತಿ ರಕ್ಷಣೆ ಕೊಟ್ಟು, ಅವಳಿಗೆ ಮದುವೆ ಮಾಡಿಸ್ದೋರಿಗೆ ಕಾಲುಭಾಗದ ಆಸ್ತಿ ಅಂತ ಬಾಬುಗಾರು ತಿಳಿಸಿದ್ರಂತೆ. ಅವನ ಪಾಲಿಗೆ ಕವಡೆ ಆಸಿಯೂ ಬರೋದಿಲ್ಲಾಂತ ನಾನು ನಿಜಾಂಶ ತಿಳಿಸುತ್ಲೇ ಅವನಿಗೆ ಷಾಕ್ ಬಂತು. ಚಂದ್ರಬಾಬು ಮೋಸಗಾರ ಅಂತ ಹೇಳ್ತಾ ಆ ದೇಹ ನೆಲಕ್ಕೆ ಕುಸಿದು ಬಿತ್ತು. ಆಮೇಲೆ ಒಂದು ಗಂಟೆ ಬದುಕಿದ್ದ...."

"ಒಂದು ರೀತಿಯಲ್ಲಿ ನೀನೇ ಅವನ ಸಾವಿಗೆ ಕಾರಣ ಆದೆಯಲ್ಲ, ಮಗು.."

ಹೆಣ್ಣಿಗೆ ಉಸಿರು ಕಟ್ಟಿತು. ಕಣ್ಣು ತುಂಬಿ ಬಂತು.

"ಹಾಗಾಗತ್ತೇಂತ ಖಂಡಿತ ತಿಳಿದಿರಲಿಲ್ಲ. ಉಯಿಲಿನ ವಿಷಯ ಅವನಿಗೆ ತಿಳಿಯದೆ?"

"ಉಯಿಲು! ಉಯಿಲು! ಚಂದ್ರಬಾಬು ನಿನಗೂ ಉಯಿಲು ಅಂತ ಹೇಳಿದ್ದನೆ?"

ಕಮಲಹಾಸ ಗರಿ ಕೆದರಿದ ಕಾತರದಲ್ಲಿ ತುದಿಗಾಲಿನಲ್ಲಿ ನಿಂತ. ಕಡೆಗೂ ವಕೀಲ ತಾನಾಗಿಯೇ ಉಯಿಲಿನ ಪ್ರಸ್ತಾಪ ಎತ್ತಿದ್ದ!

ಮೀನಾಕ್ಷಿ ಎರಡೂ ಕೈ ಕೆನ್ನೆಗಳಿಗೆ ಒತ್ತಿದಳು.

"ಹೇಳಿದ್ರು, ಮಾಮ... ಸಾಯೋದಿಕ್ಕೆ ಎರಡೇ ದಿನಕ್ಕೆ ಮೊದಲು ಈ ಎಸ್ಟೇಟನ್ನ ಚೆನ್ನಾಗಿ ಕಾಪಾಡಿ, ಪದ್ಮಾವತಿಗೆ ಮದುವೆ ಮಾಡಿಸ್ದೋರಿಗೆ ಕಾಲುಭಾಗದ ಆಸ್ತಿ ಅಂತ. ಮಾರನೆ ದಿನವೇ ನಿಮ್ಮನ್ನ ಕರೆಸಿ ಉಯಿಲು ಮಾಡಿದ್ರು ಮಾ ಪದ್ಮಾವತಿಗೆ ಹುಡುಗ ಸಿದ್ಧವಾಗಿದ್ದಾನೆ."

ಮೀನಾಕ್ಷಿ ಕಮಲಹಾಸನ ಪಾದ ತುಳಿದಳು. ಬುದ್ಧಿಗೇಡಿನ ಮಾತಿನಿಂದ ಪರಿಸ್ಥಿತಿ ಕೆಡಿಸಬೇಡವೆಂಬ ಎಚ್ಚರಿಕೆ!

ಗಿಡಗನ ಕಣ್ಣು ಮೊನಚಾಯಿತು.

"ಯಾರು? ಎಸ್ಟೇಟಿನ ಹಳೆ ಪಿಯಾನೊಗೆ ಜೀವ ತೆಗೀತಾ ಇರೋನು ಎಸ್ಟೇಟ್ ಮೋಟಾರ್ ಬೈಕ್‌ನ ಹೆಲಿಕಾಪ್ಟರ್ ಮಾಡಿದಾನಲ್ಲ. ಅವನು ತಾನೆ?"

"ಹೌದು" ಒಟ್ಟಾಗಿ ಉತ್ತರಿಸಿದರು.

ಹಾಸಿಗೆಯಿಂದ ಎದ್ದ ಪಿತಾಪುರಂ ಎರಡು ಸಾರಿ ಶತಪಥ ಹಾಕಿ, ವಿರಾಮವಾಗಿ ಮಕಮಲ್ ಪೆಟ್ಟಿಗೆ ತೆರೆದ. ಸಬ್ಜಿಮಂಡಿಯ ರಸಿಕರಂಜಿನಿ ಮುಗಿದಿತ್ತು! ಟಂಬ್ಲರ್‌ನಲ್ಲಿ ಉಳಿಸಿದ್ದ ಮದಿರೆ ಹೀರಿದ.

ಇಬ್ಬರೂ ಪ್ರತಿಮೆಗಳಂತೆ ಕಾದು ನಿಂತರು.

ವಕೀಲ ಗೊಣಗುತ್ತಾ ತನ್ನ ಕೋಟು ಹಿಡಿದು ಜೇಬುಗಳನ್ನೆಲ್ಲ ಹೊರ ಗಳೆದು ಜೋಲಿಸಿದ. ಕಿಟ್, ಕೈ ಪೆಟ್ಟಿಗೆ ತೆರೆದಿಟ್ಟು ಎರಡೂ ಕೈ ಎತ್ತಿದ.

"ಎಲ್ಲಿ ಉಯಿಲು?" ಗೊಣಗು ಪ್ರಶ್ನೆ ಹಾಕಿ ಮುಖ ಜೋಲಿಸಿದ.

ಇಬ್ಬರೂ ಕೀಲು ಗೊಂಬೆಗಳಂತೆ ತುಟಿ ಅದುರಿಸಿ ಮುಖ ಮುಖ ನೋಡಿ ಅವನ ಕಣ್ಣು ಎದುರಿಸಿದರು. ವೃದ್ಧನ ತೇಲುಗಣ್ಣು ಕಿರಿದಾಯಿತು.

"ಸ್ವಲ್ಪ ಜಾಸ್ತಿ ಕುಡಿದುಬಿಟ್ಟೆ. ಮೀನು. ಇರಲಿ, ಕೇಳು....ಚಂದ್ರಬಾಬುಗೆ ಮಗಳ ರಕ್ಷಣೆ, ಮದುವೆ, ಎಸ್ಟೇಟಿನ ರಕ್ಷಣೆ ಇವು ಮೂರು ಚಿಂತೆ ಕೊಟ್ಟಿದ್ವು. ಚಿಂತೆಯ ಕಾವು ಕುದಿತ ತಂದಾಗ ಸಂತುರಾಮನಿಗೆ ಪದ್ಮಾವತಿಯ ರಕ್ಷಣೆ, ಮದುವೆ ವಿಷಯ ಹೇಳಿರಬೇಕು. ನಿನಗೆ ಅವಳ ಮದುವೆ, ಎಸ್ಟೇಟಿನ ರಕ್ಷಣೆ ತಿಳಿಸಿದಾನೆ. ಇಬ್ಬರಿಗೂ ಎರಡು ತರಹ ಹೇಳಿ, ಹೊಣೆಗಾರಿಕೆ ಹಂಚಿ ಸ್ವಲ್ಪ ನೆಮ್ಮದಿ ತಂದುಕೊಂಡಿದಾನೆ ದೂರದರ್ಶಿ. ಮಾರನೆ ದಿನ ನನ್ನ ಇಲ್ಲಿಗೆ ಕರೆಸ್ದ. ಅವನಿಗೆ ಕುಡುಕ ತಮ್ಮ ಶತ್ರುಘ್ನಬಾಬುವಿಗಿಂತ ಬೇರೆ ಯಾರಿಂದಲೊ ಪ್ರಾಣ ಭಯ ತಟ್ಟಿರಬೇಕು. ಚಂದ್ರಬಾಬುಗೆ ಬೇರೆ ಶತ್ರುಗಳೂ ಇದ್ರು. ಚಂದ್ರಬಾಬು ದ್ರಾಕ್ಷಾರಸದ ಅಕ್ರಮ ವ್ಯವಹಾರ ನಡೆಸ್ತಾ ಇದ್ದಿದ್ದು ನಿಮಗೆ ಗೊತ್ತಿಲ್ಲ..."

"ಗೊತ್ತಿಲ್ಲ"

ಇಬ್ಬರ ಚಕಿತ ಉತ್ತರ ಏಕ ಕಂಠದಲ್ಲಿ ಬಂತು.

"ನನ್ನ ಮುಂದೆ ಉಯಿಲಿನ ವಿಷಯ ಇಟ್ಟ ಸ್ನೇಹಿತ..... ಮೀನಾಕ್ಷಿ ನಿನಗೆ ಹೇಳಬೇಕೆ? ಪದ್ಮಾವತಿ ರಕ್ಷಣೆ ನಿನ್ನ ಕರ್ತವ್ಯ. ನೀನು ಅವಳ ಅಕ್ಕನ ಹಾಗೆ. ಎಸ್ಟೇಟ್ ವಹಿವಾಟುಗಳನ್ನ ನೀನು, ನಾನು. ಕಮಲಹಾಸ, ಸಿಬ್ಬಂದಿ ಜನ ನೋಡಿಕೊಳ್ಳೋದು ಕಷ್ಟವೆ? ಪದ್ಮಾವತಿಯ ಮದುವೆ ನಾವು ನಡೆಸೋದು ತಾಪತ್ರಯವೆ? ಮಗಳು ಬದುಕಿರೋವಾಗ ಉಯಿಲು ಯಾಕೆ?... ಉಯಿಲು ಬೇಡಾಂತ ಚಂದ್ರಬಾಬುಗೆ ನಾನೇ ಸಲಹೆ ಕೊಟ್ಟೆ"

ಖಾಲಿ ಮಕಮಲ್ ಪೆಟ್ಟಿಗೆ ಮತ್ತು ತೆರೆದು ಮುಖ ಹಿಂಡಿದ.

ಮೀನಾಕ್ಷಿ ಬಾಯಿ ತೆರೆದಂತೆಯೇ ಮುಂದೆ ಬಂದಳು.

"ಅಂದರೆ ಮಾಮ, ಚಂದ್ರಬಾಬು ಉಯಿಲೇ ಮಾಡ್ಲಿಲ್ಲ! ನನ್ನ ಈ ಹನ್ನೊಂದು ವರ್ಷದ ಶ್ರಮ, ಅಲೆದಾಟ, ಮಾತಿನ ಚಾತುರ್ಯ ಎಲ್ಲಾ ವ್ಯರ್ಥ? ವಕೀಲ ಮಾಮ. ಚಂದ್ರಬಾಬು ಅಲ್ಲ ಮೋಸಗಾರ... ನೀವು ಮೋಸಗಾರ್ರು! ವಂಚಕರು!!"

ಉಮ್ಮಳಿಸಿದ ಆಯಾಸದಲ್ಲಿ ಕ್ರೋಧ ಹಾಗೆಯೇ ಅಡಗಿತು. ಚಾವಣಿಗೆ ತಲೆ

ಎತ್ತಿ ನಕ್ಕಳು. ಹುಚ್ಚಳಂತೆ ಒಂದೇ ಸಮನೆ ನಕ್ಕಳು...

ಕಮಲಹಾಸ ಅವಳ ಕೆನ್ನೆಗೆ ಚಟ್ಟನೆ ಬಾರಿಸಿದಾಗಲೂ ಹತಾಶಳ ವಿಕಟ ನಗೆ ನಿಲ್ಲಲಿಲ್ಲ.

## ೧೫

ಗುಡ್ಡದ ಮೇಲಿನ ಚಿಲ್ಲದ ಮರದ ಮರೆಯಲ್ಲಿ ಕುಳಿತು ಬರೆಯುತ್ತಿದ್ದ ಕಾರ್ತೀಕ ತಗ್ಗಿನ ಉದ್ದಕ್ಕೂ ಕಣ್ಣು ಹರಿಸಿದ. ಚುರುಕು ಹತ್ತುತ್ತಿದ್ದ. ಬಿಸಿಲಿನಲ್ಲಿ ಕಪ್ಪು ಕನ್ನಡಕ ಧರಿಸಿದ. ಕೆಂಪು ಬಿಳುಪು ಉಡುಪಿನವ ಬಣ್ಣದ ಛತ್ರಿ ಹಿಡಿದು ಸರಿಯುತ್ತಿದ್ದ. ದ್ರಾಕ್ಷಿ ತೋಟದ ಹಿಂದಿನ ನಿರ್ಜನ ಭಾಗಕ್ಕೆ ಬಿಸಿಲಿನಲ್ಲಿ ಇಳಿದು ಬಂದ ಪ್ರಕೃತಿವಾದಿ ಯಾರೆಂದು ಆಸಕ್ತಿಯಿಂದ ನಿಟ್ಟಿಸಿದ.

ಬಣ್ಣದ ಛತ್ರಿ ಪಕ್ಕಕ್ಕೆ ಹೊರಳಿತು. ಪರಿಚಿತ ಬಳುಕು ನಡಿಗೆ ಗಮನಿಸಿದಾಗ ಅವನ ಕೂಡ ಹುಬ್ಬುಗಳು ಸರಿದು ನಿಂತವು. ಸೊಗಸುಗಾರ ಸುಧಾಕರ ಸೌಭಾಗ್ಯಳ ಕೈ ಹಿಡಿಯುವ ಮೊದಲು ಬಣ್ಣದ ಚಿತ್ರಗಳನ್ನು ಮನದಲ್ಲಿ ಹರಡಿಕೊಂಡು ನಡೆದಿರುವ ಆಶಿಕ.

ತಾಸಿನ ಹಿಂದೆ ವಕೀಲ ಪಿತಾಪುರಂ ಉದ್ದನೆಯ ಕೆಂಪು ಕಾರಿನಲ್ಲಿ ಕುಳಿತಾಗ ಪಿಯಾನೊ ಪ್ರಿಯನಿಗೆ ಹೇಳಿದ್ದ.

“ಹಳೆ ಪಿಯಾನೊ ಅಂತ ಚಪಾತಿ ಹಿಟ್ಟಿನ ಹಾಗೆ ಒತ್ತಿದರೆ ಅಪಸ್ವರ ಬರೋದಿಲ್ಲವೇ, ಹುಡುಗ? ಇಂಥಾ ಘಾಟಿನ ಭಾಗದಲ್ಲಿ ಹಾರುವ ಹಾಗೆ ಮೋಟಾರ್ ಬೈಕ್ ಓಡಿಸಿದ್ರೆ, ನನಗನ್ನಿಸುತ್ತೆ ನೀನು ನಿರಾಶಾವಾದಿ ಅಂತ. ಈ ಮುದುಕನ ಮಾತು ಕೇಳು. ಮದುವೆ ವಿಷಯದಲ್ಲಿ ಕನಸಿನ ಉಪ್ಪರಿಗೆಗಳು ಬೇಡ. ಬೆಂಗಳೂರಿಗೆ ಹೋದ ಕೂಡ್ಲೆ ಕಾಲೇಜು ನೋಡದ, ಬಡವರ ಮನೆ ಹುಡುಗೀನ ಮದುವೆ ಆಗು. ನಿನ್ನ ಬಾಳು ಹದವಾಯ್ತು ಅಂತ ತಿಳಕೊ.”

ಸುಧಾಕರ ಹಾಸ್ಯದ ಮೆರುಗಿನ ಬುದ್ಧಿವಾದವನ್ನು ಮನಸಾರೆ ಗ್ರಹಿಸಿದಂತೆ “ಬಹಳ ಥ್ಯಾಂಕ್ಸ್” ಎಂದು ಪಕ್ಕಕ್ಕೆ ತಿರುಗಿ ವಕೀಲನ ಇರಿತದ ವ್ಯಂಗ್ಯದಿಂದ ಮುಖಭಂಗಿತನ ಛಾಯೆ ಹರಡಿಕೊಂಡಿದ್ದ.

ಕಾರ್ತೀಕ ಬರಹಕ್ಕೆ ತೊಡಗುವ ಮೊದಲು ಯುವಕನ ಮೇಲೆ ಅನುಕಂಪ ತಂದುಕೊಂಡ. ವೇಗದ ಪ್ರವೃತ್ತಿಯ, ಚಂಚಲ ಮನಸ್ಸಿನ ಕನಸುಗಾರ!

ಕನಸುಗಾರ ಛತ್ರಿ ಗಿರ್ರನೆ ಸುತ್ತಿಸಿದ. ತಲೆಯ ಚಕ್ರವೂ ಸುತ್ತಿತು. ಸಪ್ಪಳ ಅಡಗಿಸಿ ನಡಿಗೆ ಮುಂದುವರಿಸಿದ.

ಬಲ ಪಕ್ಕದ ಬಂಡೆ ಹಾಸು ಇಳಿದರೆ ದ್ರಾಕ್ಷಾರಸದ ನೆಲಮಾಳಿಗೆ ಅಡಗಿಸಿದ

ಬಂಡೆಗಳ ಗುಂಪು. ಎಡದ ತಗ್ಗಿನಲ್ಲಿ ನಾಲ್ಕಾರು ಕಪ್ಪು ಬಂಡೆಗಳ ಆಚೆಗೆ ಆಯ್ದು ನೆಟ್ಟಂತೆ ಕಾಣುವ ಮೂರು ದೊಡ್ಡ ಗೇರು ಮರಗಳು. ತುಸು ಮುಂದಕ್ಕೆ ನೆಟ್ಟಂತೆ ಬೂದಿ ಹರಡಿದ ಸುಟ್ಟ ನೆಲದ ತುಣುಕು ಹಾಸು, ಗೇರು ಮರ ಒರಗಿ, ಕಾಲು ಚಾಚಿ, ಹಳದಿ ಶಿಲೆಯಾಗಿ ಕುಳಿತ, ಕಡೆದ ಮಾಟದ ಚೆಲುವು!

ಸೌಭಾಗ್ಯಳ ದೃಷ್ಟಿ ಅಚಲವಾಗಿತ್ತು. ಮೂರು ನಾಲ್ಕು ದಿನಗಳಲ್ಲಿ ಗಾಳಿಗೆ ಸಿಕ್ಕಿ ತೂರಿ ಹೋಗಬಹುದಾದ ಪಪ್ಪ ಬರ್ನಾರ್ಡ್ ಅವಶೇಷ. ಆಮೇಲೆ ಅಲ್ಲಿ ಉಳಿಯುವುದು ಹುಲ್ಲು ಆವರಿಸಿ ನಿಲ್ಲುವ ಅದೇ ಹಿಂದಿನ ಚೂರು ನೆಲ, ಹನ್ನೊಂದು ವರ್ಷಗಳ ಭ್ರಮಣ ಬದುಕಿನ ಅಂತ್ಯದಲ್ಲಿ ನಾಲ್ಕಾರು ಹಿಡಿ ಬೂದಿ. ಆಮೇಲೆ ಅವನ ಹೆಸರಿನ ಉಲ್ಲೇಖವೂ ಇಲ್ಲ.

ಬೂದಿಯ ಎಳೆಗಳೂ ಗಾಳಿಯಲ್ಲಿ ತತ್ತರಿಸಿ ಹೊರಳಾಡಿದವು. ಪೊದೆಯಂತೆ ಕೂಡಿದ ಗಡ್ಡ, ಮೀಸೆಗಳು! ಸಿಂಹದ ಬದುಕಿನ ಬರ್ನಾರ್ಡ್.

ಸಿಂಹದ ಮುಖದ ಮರೆಯಲ್ಲಿ ಮಾನವೀಯ, ನಿಷ್ಠಾವಂತ ಹೃದಯ ಗಾಜಿನ ಕೆಂಗಣ್ಣುಗಳು ಹಿಂದೆ ಹೋರಾಟದ ಬದುಕಿನ ಶೋಕಗಾಥೆ, ಅವನದು ಆರ್ಭಟವಲ್ಲ. ರಕ್ಷಣೆ, ಆಸರೆಗಳ ಆಶ್ವಾಸನೆಯ ಮಧುರನಾದ.

ಹಸಿರು ನೆನಪೊಂದೇ ಸ್ಮಾರಕ.

ವಕೀಲ ಹೊರಡುವ ಮೊದಲು ತಪ್ಪದೆ ನೆನಪಿಗೆ ತಂದುಕೊಂಡಿದ್ದ.

"ಸಂತುರಾಮ ಇದ್ದಿದ್ರೆ ಪದ್ಮಾವತಿಗೆ ಹತ್ತು ಭುಜಗಳ ಬಲ ಬರ್ತಿತ್ತು.

ಅವನಿಗೆ ನಾವು ಏನೂ ಮಾಡ್ಲಿಲ್ಲ. ದೇಹಕ್ಕೆ ಬೆಂಕಿ ಹಚ್ಚಿದ್ದೇ ದೊಡ್ಡ ಪ್ರತಿ ಫಲ! ಕಾರ್ತೀಕ ಅವನ ಸ್ಥಾನ ಭರ್ತಿ ಮಾಡಬಹುದು. ಹೌದಲ್ಲ, ಯಂಗ್ ಮ್ಯಾನ್?"

ಗಂಭೀರ, ಕ್ಲಿಷ್ಟ ಪ್ರಶ್ನೆಗೆ ಕಾರ್ತೀಕನದು ಶಿಲಾಮೌನ. ಸೌಜನ್ಯಕ್ಕೂ 'ಹುಂ' ಗುಟ್ಟದ ಅಸಹ್ಯ ಬಿಗುಮಾನ.

ಸೌಭಾಗ್ಯಳ ಮೈ ತಿರಸ್ಕಾರದಿಂದ ಅದುರಿತ್ತು.

ನೆಟ್ಟ ಕಣ್ಣುಗಳು ಮುಚ್ಚಿ, ತುಟಿ ಬಿಗಿಸಿದವು. ಕಂಠ ತುಂಬಿ ಬಂತು. ಬೆರಳುಗಳು ಅವಚಿದವು. ಅರಳಿದವು.

"ಮನಸ್ಸು ಸರಿ ಇಲ್ಲಾಂತ ತೋರತ್ತೆ..."

ನೀರವತೆ ಇರಿದ ಮಾತಿನಿಂದ ಎಚ್ಚೆತ್ತು ಕತ್ತು ಹೊರಳಿಸಿದಳು. ಬಣ್ಣದ ಹೂಗಳ ಛತ್ರಿ! ಅದರಡಿಯಲ್ಲಿ ಕಪ್ಪು ಕನ್ನಡಕ, ಕೆಂಪು ಷರಟು, ಬಿಳುಪು ಪ್ಯಾಂಟು ಧರಿಸಿದ ಸುಧಾಕರ!

ಹಾಯಾಗಿ ಚಾಚಿದ್ದ ಕಾಲುಗಳನ್ನು ಎಳೆದುಕೊಂಡಳು. ಹೊಳಪು ಹೂವಿನ ಅಂಚುಗಳ ತಿಳಿಹಳದಿ ಸೀರೆ, ಹಳದಿ ಕುಪ್ಪಸ ಬಾಚದೆ ಗಂಟೇರಿಸಿದ ತಲೆಯ ಹೊರೆಯಲ್ಲಿ ಅಪ್ಸರೆಯಂತೆ ಕಂಡಳು ಸೌಭಾಗ್ಯ.

"ಇಲ್ಲಿಗೆ ಯಾಕೆ ಬಂದ್ರಿ, ಸುಧಾಕರ?.... ಹೊಗೆ ತುಂಬಿದ ಮನೆಯಿಂದ ಹಾರಿ ಬರೊ ಹಾಗೆ ಇಲ್ಲಿಗೆ ಧಾವಿಸಿ ಬಂದೆ. ಹಣ, ಆಸ್ತಿ, ವ್ಯವಹಾರ, ಸುತ್ತುವರಿದ ರಣಹದ್ದುಗಳು ಎಲ್ಲದರಿಂದ ದೂರಕ್ಕೆ ಓಡಿ ಹೋಗೋಣ ಅನ್ನಿಸಿಬಿಟ್ಟಿದೆ."

ಭುಜ ಏರಿಸಿದ ಸುಧಾಕರ, ರಣಹದ್ದುಗಳಲ್ಲಿ ತಾನೊಬ್ಬ! ಕನ್ನಡಕ ತೆಗೆದು ಮುಂದೆ ಬಂದ.

"ಹಾಗೆಲ್ಲಾದ್ರು ಮಾಡಿಬಿಟ್ಟೀರಿ. ನಿಮ್ಮನ್ನ ಅವಲಂಬಿಸಿರೊ ವ್ಯಕ್ತಿಗಳು ಕಂಗಾಲಾಗಿಬಿಟ್ಟಾರು."

"ನಾನು ಅಂತಾ ಪ್ರಮುಖ ವ್ಯಕ್ತಿ ಅಲ್ಲ."

"ಹಾಗನ್ನೇಡಿ. ನಿಮ್ಮನ್ನ ಅವಲಂಬಿಸಿರೊ ವ್ಯಕ್ತಿಗಳಲ್ಲಿ ನಾನೂ ಒಬ್ಬ."

ಛತ್ರಿ ನೆಲಕ್ಕೆ ಹಾಕಿ ಶ್ರೀಮಂತೆಯ ಮುಂದೆ ವಿನಯವಾಗಿ ಕೈಗಳನ್ನು ಚಾಚಿ ಓರೆಯಾಗಿ ತಲೆ ಬಾಗಿಸಿದ ಮಾನಸಿಕವಾಗಿ ಇನ್ನೂ ಗಂಭೀರ ಪರಿಸರದಲ್ಲಿದ್ದವಳಿಗೆ ಅವನ ನಾಟಕೀಯ ವರ್ತನೆ ಹಿಡಿಸಲಿಲ್ಲ.

"ಮೀನಾಕ್ಷಿಯ ಬಣ್ಣದ ಛತ್ರಿ ನೀವು ಯಾಕೆ ಹಿಡಿದ್ರಿ? ಅವಳ ಆಸರೆ ಇನ್ನೂ ತಪ್ಪಿಲ್ಲವೆ?"

"ಆಂಧ್ರದ ಬಿಸಿಲು ತಡೆಯೋಕೆ ಆಗದೆ ಈ ಛತ್ರಿ ಹಿಡಿದು ಬಂದೆ. ಅವಳ ಆಸರೆ ನನಗೆ ಬೇಕಿಲ್ಲ. ಆಸರೆ ಬೇಕಾಗಿರೋದು ಪರಸ್ಪರ ನಮ್ಮಿಬ್ಬರಿಗೆ ಸೌಭಾಗ್ಯ. ನಾನು ಬಂದಾಗಿನಿಂದ ಮಾತಾಡೋಕೆ ಅವಕಾಶ ಸಿಗ್ಲಿಲ್ಲ. ಅವತ್ತು ನಿಮ್ಮ ಪಪ್ಪನ ಮರಣಕ್ಕೆ ಸಂತಾಪ ಸೂಚಿಸೋಣಾಂಥ ಬಂದೆ. ಕಾರು ಅಪಘಾತದ ಹಗರಣದಲ್ಲಿ ಮರೆತುಹೋಯ್ತು. ನಿಮ್ಮ ಎದುರಿನಲ್ಲಿ ಕಾರ್ತೀಕನಿಗೆ ಬಳಸಿದ ಒರಟು ಮಾತುಗಳಿಗೆ ಈಗ ಕ್ಷಮೆ ಕೇಳಬೋದೆ? ಆ ದಿನ ನನ್ನ ಪ್ರಾಣ ಒತ್ತೆ ಇಟ್ಟು ನಿಮ್ಮನ್ನ ಕಾಪಾಡೋ ಹಾಗೆ ಆಯ್ತು. ಏನು ಮಾಡ್ಲಿ? ನಿಮ್ಮ ಮೇಲಿರೊ ನನ್ನ ಪ್ರೀತಿಗೆ ಸಾವಿಲ್ಲ..."

ಅವನ ಮೇಲೆ ತಿರಸ್ಕಾರದ ಓರೆ ನೋಟ ಹಾಕಿ ತೀಕ್ಷ್ಣವಾಗಿ ಹೇಳಿದಳು.

"ಯಾಕೆ ಚಪಲದ ಮಾತಾಡ್ತೀರಿ? ನಿಮ್ಮ ಪ್ರೀತೀನ ನಾನೇ ಕೊಂದು ಹಾಕಿದೀನಿ. ಸತ್ತ ಪ್ರೀತೀನ ತಟ್ಟಿ ಎಬ್ಬಿಸ್ತಾ ಇದೀರಿ. ಸುಧಾಕರ. ವಕೀಲ ಮಾಮ ಬೆಳಿಗ್ಗೆ ಹೋಗುವಾಗ ಹೇಳಿದ್ದು ಇಷ್ಟು ಬೇಗ ಮರೆತುಬಿಟ್ಟಿದ್ದೀರಿ. ಬಡವರ ಮನೆ ಹುಡುಗೀನ ಮದುವೆ ಆಗಿ. ಈಗ ನಾನು ಲಕ್ಷ ಲಕ್ಷಗಳ ಶ್ರೀಮಂತೆ. ನನ್ನ ಮೇಲಿನ

ಆಸೆ ಮತ್ತೆ ಚಿಗುರದ ಹಾಗೆ ಬುಡಕ್ಕೆ ಕೊಡಲಿ ಹಾಕ್ಕೊಳ್ಳಿ. ನೀವು ಇಂತ ಮಾತಿನಿಂದ ತಲೆ ಕೆಡಿಸ್ತೀರಿ ಅಂತಲೆ ನಿಮಗೆ ಕಾಣಿಸ್ಕೊಳ್ಳಿಲ್ಲ ನಾನು.. ನಮ್ಮಿಬ್ಬರಿಗೆ ಆಸರೆ ಬೇಕಾಗಿರೋದು ಅಂದ್ರಲ್ಲಾ. ಏನದು?"

ಅಧಿಕಾರಯುತ ತಿರಸ್ಕಾರದ ಮಾತು ಮುಖ ಅಪ್ಪಳಿಸಿತು. ಪ್ರಾರಂಭದಲ್ಲೇ ಅವಳಿಂದ ಕಟು ಮಾತು ನಿರೀಕ್ಷಿಸಿರಲಿಲ್ಲ.

"ನನಗೆ ನೀವು ಬೇಕು. ನಿಮಗೆ ನಾನು ಬೇಕು."

ಸೋಲು ತೋರಕೊಡದೆ ಹೇಳಿದ.

"ಛೇ, ಅದೇ ತುಚ್ಛ ಮಾತು!... ನೀವು ಬಂದಿದ್ದು ಯಾಕೆ?"

ಬಿರುಸಾಗಿ ಕೇಳಿ, ಎದ್ದು ಮರ ಒರಗಿ ನಿಂತಳು. ಅವನು ಸಿಗರೇಟು ಹಚ್ಚಿದ. ಅವಳು ಮತ್ತಷ್ಟು ಬೇಸರಿಸುವಂತೆ ವಿರಾಮವಾಗಿ ಎರಡು ಸಾರಿ ಹೊಗೆ ಹಾಕಿದ.

"ನನ್ನ ಮದುವೆ ಆಗಿ ಅಂತ ಕೇಳೋದಿಕ್ಕೆ."

ಸಿಗರೇಟಿನ ಉರಿ ನೋಡುತ್ತಾ ನುಡಿದ.

"ಅದು ಸತ್ತ ಬೇಡಿಕೆ. ನಿಮಗೂ, ನಮಗೂ ಸಾವಿರ ಮೈಲಿಗಳ ಅಂತರ. ಹೊರಟ್ಹೋಗಿ."

"ಕಡೇ ಸಾರಿ ಬೇಡಿಕೆ ಸಲ್ಲಿಸೋದಿಕ್ಕೆ ಬಂದಿರೋದು."

"ಉತ್ತರ ಕೊಟ್ಟಾಯ್ತು. ನನ್ನ ಮನಸ್ಸು ಕಲಕಬೇಡಿ. ನಾನು ಸೋಲೋದೂ ಇಲ್ಲ."

"ನಾನೂ ಸೋಲೋದಿಕ್ಕೆ ಸಿದ್ಧವಾಗಿ ಬಂದಿಲ್ಲ...."

ಹಣೆ ಮುಚ್ಚಿದ ಕೂದಲು ಹಿಂದಕ್ಕೆ ಹಾರಿಸಿ ಕೈ ಹಿಸುಕಿದ. ಕಣ್ಣುಗಳಿಂದ ಹಸಿವು ತೂರಿತು. ಕಾಲಿನ ಒದೆತಕ್ಕೆ ಸಿಕ್ಕಿ ಬಣ್ಣದ ಛತ್ರಿ ಹಾರಿ ಹೋಯಿತು.

"ಸುಧಾಕರ...."

ವಿಹ್ವಲಳಾಗಿ ಮರ ಒತ್ತಿ ನಿಂತಳು.

"ಕಥೆ ಓದಿದೀರಿ... ಅವಳಿಗೆ ಮದುವೆ ಆದರೆ ಮಾತ್ರ ಆಸ್ತಿ ಬರೊ ನಿಬಂಧನೆ. ಅವನು ಮದುವೆ ಆಗೂಂತ ಅವಳನ್ನ ಒತ್ತಾಯ ಮಾಡ್ತಾನೆ. ಅವಳು ಒಪ್ಪೋದಿಲ್ಲ. ಬಲವಂತವಾಗಿ ಅವಳ ಮೇಲೆ ಅತ್ಯಾಚಾರ ನಡೆಸಿ ಬಿಡ್ತಾನೆ! ಅವಳು ನಿರ್ವಾಹವಿಲ್ಲದೆ ಅವನ್ನ ಮದುವೆ ಆಗ್ತಾಳೆ."

ಸಿಗರೇಟು ನೆಲಕ್ಕೆ ಹೊಸಕಿದ. ನಾಲಗೆಯಿಂದ ತುಟಿ ಸವರಿ ಆಕಾಶಕ್ಕೆ ತಲೆ

ಎತ್ತಿ ಮತ್ತೆ ಮುಖ ಇಳಿಸಿ ಬಿರುನೋಟ ಹಾಕಿದ.

ಕಂಪಿಸಿದ ಹೆಣ್ಣಿನ ತುಟಿ ಅದುರಿತು.

"ಅದು ನಾನೇ ಹೇಳಿದ ಹಣ ಹದ್ದಿನ ಕಥೆ. ಅದನ್ನ ಮೀನಾಕ್ಷಿಗೆ ಹೇಳಿದ್ದೆ. ಅಂದ್ರೆ ಮೀನಾಕ್ಷಿ ನಿಮ್ಮನ್ನ ಕಳಿಸಿಕೊಟ್ಟಿದ್ದಾಳೆ!"

ಉಸಿರಾಟ ಏರಿತು. ಗಾಳಿಗೆ ನಗೆ ತೂರಿದ.

"ಇಂತಾ ಗಂಡು ಕೆಲಸಕ್ಕೆ ಒಂದು ಹೆಣ್ಣಿನಿಂದ ಪ್ರಚೋದನೆ ಬೇಕಿಲ್ಲ. ನಿಮ್ಮ ಕಥೆ ಅವಳಿಂದ ಕೇಳಿದ್ದೆ. ಮತ್ತೆ ನಿಮಗೇ ಹೇಳ್ದೆ."

"ಕಥೆಯ ಹೆಣ್ಣಲ್ಲ ನಾನು. ಕಥೆಯಲ್ಲಿ ನಡೆಯೋದೆಲ್ಲಾ ಭೂಮಿಯ ಮೇಲೆ ನಡೆಯಬೇಕಾಗಿಲ್ಲ. "ನನಗೆ ಆಸ್ತಿಯ ಮೇಲೆ ಆಸೆ ಇಲ್ಲ. ಮದುವೆ ಅಗತ್ಯವೂ ಇಲ್ಲ. ಕ್ಷುದ್ರ ಮನುಷ್ಯ! ತೊಲಗು!..... ಥೂ!!"

ಛೀಮಾರಿ ಗಾಳಿಗೆ ತೂರುವಂತೆ ಕೈ ಒದರಿ ಮುಂದೆ ಬಂದ.

"ನಿಲ್ಲು ಅಲ್ಲೇ...." ಅರಚಿತು ಕಂಗೆಟ್ಟ ಹೆಣ್ಣು.

"ಮೀನಾಕ್ಷಿ ನಮ್ಮ ಮದುವೆ ವಿಷಯದಲ್ಲಿ ಸೋತಿದ್ದಾಳೆ. ನಾನು ಸೋತಿಲ್ಲ. ಅವತ್ತು ನಿನ್ನ ಪಪ್ಪ ಬಂದಿದ್ರಿಂದ ಕೈ ತಪ್ಪಿ ಹೋದೆ. ಇವತ್ತು ನಿನ್ನ ಬಿಡೋದಿಲ್ಲ."

ಮತ್ತಷ್ಟು ಸರಿದು ಬಂದ.

"ಅವತ್ತು ನಿನ್ನ ಅದೃಷ್ಟ ಚೆನ್ನಾಗಿತ್ತು. ಪಪ್ಪ ನಿನ್ನ ಕೊಂದು ಹಾಕ್ತಿದ್ದ. ನಿನ್ನ ಓಡಿಸಿ ಉಳಿಸ್ದೆ."

ಸರಕ್ಕನೆ ಅವಳ ಕೈ ಹಿಡಿದು ಮುಂದಕ್ಕೆ ಜಗ್ಗಿದ, ಮೈಮೇಲೆ ಜಾರಿ ಬಂದ ಹೆಣ್ಣನ್ನು ತಬ್ಬಿ ಅವಳ ಸೊಂಪಾದ ತಲೆಗೂದಲಿನಲ್ಲಿ ಹುಚ್ಚು ಕೈಗಳನ್ನು ಮನಸಾರೆ ಹರಿದಾಡಿಸಿದ. ಬೈತಲೆಯ ನೆತ್ತಿಗೆ ಬಿಸಿ ತುಟಿ ಒತ್ತಿದ.

ಕೆನ್ನೆಗೆ ರಪ್ಪನೆ ರಾಚಿ ಬಲವಾಗಿ ಒದರಿದಳು. ಸುಧಾಕರ ಹಿಂದಕ್ಕೆ ಸರಿದು ಬಿದ್ದ. ಕ್ಷಣದಲ್ಲಿ ಎದ್ದು ನಿಂತು ಕೆನ್ನೆ ಸವರಿಕೊಂಡ.

"ಬೇಡ!.... ಬೇಡ..!!."

ಹಿಂದಕ್ಕೆ ಸರಿದಳು. ಆರ್ತಳ ಬೇಡಿಕೆ ಅಂಧನ ಕಿವಿ ಸವರಿ ಹೋಯಿತು. ಮುಂದಕ್ಕೆ ಜಿಗಿದು ಅವಳನ್ನು ಅಲುಗಾಡದಂತೆ ತಬ್ಬಿ, ಕುಪ್ಪಸ ಚರ್ರನೆ ಹರಿದ. ಸೆರಗು ಮುಷ್ಟಿಯಲ್ಲಿ ಸುತ್ತಿ ಹಿಡಿದು ಉಡಿಗೆ ಎಡಗೈ ಹೂಡಿದ.

ಕೊಸರಾಡಿದ ಹೆಣ್ಣು ಬಳಲಿತ್ತು.

"ಬಿಡು, ನಾನು ಸೋಲೋದಿಲ್ಲ, ನನ್ನ ಮದುವೆ ಆಗೊ ಕಲ್ಪನೆಯೂ ನಿನಗೆ ಪಾಪ..."

"ಹಾಗಂದ್ರೆ?"

ಅವಳ ಮುಖ ಎರಡು ಕೈಗಳಲ್ಲೂ ಒತ್ತಿ ಹಿಡಿದು ನೂರು ಆಸೆ ಸೋರಿಸುವ ತುಟಿಗಳನ್ನು ಮುಂದೆ ತಂದ.

"ನನ್ನ ಮದುವೆ ಆಗಿದೆ..." ಕಣ್ಣು ಮುಚ್ಚಿ ಉಸುರಿದಳು.

ಉಸಿರು ನುಡಿಯ ಬಿರುಸು ಅವನನ್ನು ಅಲುಗಿಸಿತು.

"ಹಾಂ! ಹಾಗೆ ಹೇಳಿದ್ರೆ ನಿನ್ನ ಬಿಟ್ಟು ಬಿಡೊ ಮುಟ್ಠಾಳ ಅಲ್ಲ ನಾನು."

"ನಾನು ಮದುವೆ ಆಗಿರೋದು ಸತ್ಯ. ಅಗೋ, ಅಲ್ಲಿ ನನ್ನ ಪಪ್ಪನ್ನ ಸುಟ್ಟಿರೊ ಭೂಮಿಯ ಆಣೆ......"

ಮುಖದಿಂದ ಕೈಗಳೂ ಸಡಿಲಗೊಂಡವು.

"ಯಾರು ನಿನ್ನ ಗಂಡ?"

ಭೀತಿಯಲ್ಲಿ ಅಯ್ದಿತ್ತು ಪ್ರಶ್ನೆ.

"ನನ್ನ ಗಂಡ ಕಾರ್ತೀಕ..."

"ಕಾರ್ತೀಕ! ನಿನ್ನ ಗಂಡ?"

ಬೆಂಕಿಯ ಕಾವಿನಿಂದ ಹಿಂದಕ್ಕೆ ಸರಿದ. ಮಾತು ಬತ್ತಿತು. ಕಣ್ಣು ಮುಂದಕ್ಕೆ ಸರಿದು ತುಸು ಮೇಲೇರಿತು. ಬೆಚ್ಚಿದವ ಭೂಮಿಗೆ ನೆಟ್ಟು ನಿಂತ.

ಹತ್ತು ಗಜಗಳ ದೂರದಲ್ಲಿ ಕೈ ಕಟ್ಟಿ ನಿಂತಿದ್ದ ಕಾರ್ತೀಕ. ಸೌಮ್ಯ ಮುಖದಿಂದ ನಿರ್ವಿಕಾರ ಸ್ವರ ಹರಿದುಬಂತು.

"ವಿಶ್ವಾಸ ಬರಲಿಲ್ಲವೆ, ಹುಡುಗ? ನಾನು ಕಾರ್ತೀಕ. ಸೌಭಾಗ್ಯಳನ್ನು ವಿಧಿವತ್ತಾಗಿ ಮದುವೆ ಆದೋನು."

ಸೌಭಾಗ್ಯ ಅಂಬಿನಂತೆ ಪತಿಯ ಬಳಿಗೆ ಓಡಿದಳು. ಅವನು ತೋಳು ಚಾಚಿ ಅವಳನ್ನು ತೆಕ್ಕೆಗೆ ಸೇರಿಸಿಕೊಳ್ಳಲಿಲ್ಲ. ಎದೆಗೆ ಒತ್ತಿ ತಲೆ ನೇವರಿಸಲಿಲ್ಲ.

ಹೋರಾಟದಲ್ಲಿ ಕಂಗೆಟ್ಟ ಮುಖ, ಜಾರಿದ ಸೆರಗು, ಹರಿದ ಕುಪ್ಪಸ, ಕೆದರಿ ಹಾರಾಡಿದ ತಲೆಗೂದಲು... ಅವುಗಳತ್ತ ಅವನ ಎಳೆ ದೃಷ್ಟಿಯೂ ಬೀಳದು. ಭಾವರಹಿತ ಮುಖದಲ್ಲಿ ಹಾಗೆಯೇ ನಿಂತಿದ್ದ, ಕಲ್ಲು ಹೃದಯದ ಸ್ಥಿತಪ್ರಜ್ಞ!

ಅವಳ ಆಯಾಸ, ಉದ್ವೇಗ ಇಂಗಿ ಹೋಯಿತು.

"ಇಷ್ಟು ಆಗೊವರೆಗೆ ಹೀಗೇ ಕಲ್ಲಾಗಿ ನಿಂತು ತಮಾಷೆ ನೋಡ್ತಾ ಇದ್ರಾ? ನಿಮ್ಮ ಹೆಂಡತಿ ಅನ್ನೋದನ್ನ ನನ್ನ ಬಾಯಿಂದಲೇ ಹೇಳಿಸೊ ಹಠ ಯಾಕೆ?"

ಅಳುಕು ದನಿಯಲ್ಲಿ ಅರಚಿದಳು.

"ನೀನು ನನ್ನ ಹೆಂಡತಿ. ನಿನ್ನ ಮೇಲೆ ನನಗೆ ಪವಿತ್ರ ಪ್ರೇಮ ಅಂತ ಗಂಟೆ ಹೊಡೆದ ಹಾಗೆ ಹೇಳಿದೀನಿ. ಅದನ್ನ ಸಂಬಂಧವಿಲ್ಲದ ಜನರ ಮುಂದೆ ಡಂಗೂರ ಹಾಕಿ ಸಾರಲೆ? ನಿನ್ನ ಗಂಡ ನಾನು ಅಂತ ಹೇಳೋದಿಕ್ಕೆ ನಿನ್ನ ಸರದಿಯೂ ಇದೆ. ನಿನ್ನ ಬಾಯಿಂದಲೇ ಅದು ಬರಲಿ ಅಂತ ಕಾದಿದ್ದೂ ನಿಜ. ಅದು ನನ್ನ ದೋಷ, ಹಠ, ಚಪಲ ಯಾವುದೂ ಅಲ್ಲ. ಬರ್ನಾರ್ಡ್‌ಗೆ ನಾನು ಕೊಟ್ಟಿದ್ದ ವಚನ."

ಕಿಂಚಿತ್ತೂ ವಿಶ್ವಾಸ ತೋರದೆ ತಲೆ ಬಲವಾಗಿ ಒದರಿದಳು.

"ಅದೇ ಹಳೆ ನಾಟಕ. ಸ್ವಾರ್ಥಕ್ಕೂ ಮುಖವಾಡ. ಮಾತಿನಲ್ಲಿ ಕೊಲ್ಲೊ ತಂತ್ರ. ಹೆಂಡತಿ ಅನ್ನೋದು ಉಚ್ಚಾರಣೆಗೆ ಮಾತ್ರ. ನೀವು ಮಾನಸಿಕವಾಗಿ ನನ್ನ ದೂರ ಮಾಡಿ ಎಷ್ಟೋ ದಿನ ಆಯ್ತು."

ಅವನು ಪ್ರತಿ ಹೇಳಲಿಲ್ಲ. ಸಾವಿರ ಹೆಣ್ಣುಗಳ ಮಧ್ಯದ ಅತಿ ಸಾಮಾನ್ಯ ಹೆಣ್ಣು!

"ನನ್ನ ಕೊಲ್ಲೊವರೆಗೆ ಹೀಗೇ ಪೊಳ್ಳು ಮಾತು ಆಡ್ತಾ ಇರ್ತೀರಾ?"

ಗಾಂಭೀರ್ಯ ಒತ್ತಟ್ಟು ಮಾಡಿ ತುಸು ರೋಸಿ ಹೇಳಿದ.

"ಪ್ರೀತಿಯ ಅತಿರೇಕ ಸಾವು. ನಿನ್ನ ಮೇಲಿನ ಪ್ರೀತಿ ಅಧಿಕವಾಗಿರೊ ನನಗೆ ನಿನ್ನ ಕೊಲೆ ಮಾಡೋದೂ ಆಶ್ಚರ್ಯವಿಲ್ಲ. ಹೌದು, ಸೌಭಾಗ್ಯ... ನಿನ್ನ ಕೊಲ್ಲಬೇಕು ನಾನು."

ಅವಳು ಸೋತಿದ್ದಳು. ಸನ್ನಿವೇಶ ಏಕಾಏಕಿ ನೆನಪಿಗೆ ಒಂದು ಕಾರ್ತೀಕ ಅವಳ ಎಡ ಬಲ ನೋಡಿದ.

ಬಿಸಿಲು ಕನ್ನಡಕ ಗೇರು ಮರದ ಆಚೆ ಬಿದ್ದಿತ್ತು. ಸುಧಾಕರ ಅಲ್ಲಿರಲಿಲ್ಲ

ಭ್ರಮೆ, ಸೋಲು, ಅನುತಾಪದಿಂದ ತತ್ತರಿಸಿ ಓಟದ ಹೆಜ್ಜೆ ಹಾಕುತ್ತಿದ್ದ ಸುಧಾಕರನ್ನು ಮೀನಾಕ್ಷಿ ತಡೆದು ನಿಲ್ಲಿಸಿದಳು.

"ಪ್ರಯೋಗ ಏನಾಯ್ತು, ಸುಧಾಕರ?"

ಅವನ ಕೈ ಅಲುಗಿಸಿ ಕೇಳಿದಳು. ನಗು ಕಂಡು ವರ್ಷಗಳಾದಂತೆ ಮ್ಲಾನಗೊಂಡಿತ್ತು ಅವಳ ಮುಖ.

"ಬದುಕಿನ ಸೋಲೆಲ್ಲಾ ಒಂದೇ ಸಾರಿಗೆ ಬೆಟ್ಟವಾಗಿ ತಲೆಯ ಮೇಲೆ ಕಳಚಿ ಬಿತ್ತು. ಅಚಾತುರ್ಯ ನಡೆಸೋದು ಸ್ವಲ್ಪದರಲ್ಲಿ ತಪ್ಪಿದ್ದು ನನ್ನ ಪುಣ್ಯ... ಅವಳ ಮದುವೆ ನಿಬಂಧನೆ ಉಯಿಲಿನಲ್ಲಿದೆ ಅಂದ್ರಿ...."

ಸೋಲಿನ ಸತ್ವಹೀನ ನಗೆ ತೋರಿದಳು.

"ಉಯಿಲೇ ಇಲ್ಲ. ಅದು ವಿಳಂಬವಾಗಿ ತಿಳೀತು."

"ನಾನು ಅವಳನ್ನ ಮದುವೆ ಆಗೋದ್ರಲ್ಲಿ ನಿಮ್ಮ ಸ್ವಾರ್ಥ, ಹಂಚಿಕೆ ಏನೇ ಇರಲಿ, ನನ್ನಿಂದ ತಪ್ಪಾಯ್ತು. ಆತ್ಮವಂಚನೆ ಮಾಡಿಕೊಂಡೆ ಭಾರಿ ಸೋಲು ಕಂಡೆ, ಮೀನಾಕ್ಷಿ ನಿಮಗೆ ಗೊತ್ತಿರಲಿಲ್ವೆ? ಕಾರ್ತೀಕ ಸೌಭಾಗ್ಯಳ ಪೋಷಕ ಮಾತ್ರ ಅಲ್ಲ. ವಿಧಿವತ್ತಾಗಿ ಅವಳನ್ನ ಮದುವೆ ಆದ ಪತಿ!"

ನಿಸ್ತೇಜ ಕಪ್ಪು ಕಣ್ಣುಗಳು ಬಟ್ಟಲಿನಂತೆ ಅರಳಿದವು. ಸೋಲು, ನಿರಾಶೆಗಳ ನಡುವೆ ಮಿಂಚಿದ ಒಂದು ಅಚ್ಚರಿ.

ಕಾರ್ತೀಕ ಸೌಭಾಗ್ಯಳ ಪತಿ!..... ಹಾಂ, ಆಗಾಗ್ಗೆ ಸುಳಿದ ಆ ಸಂಶಯ ನಿಜ ಆಯ್ತು.

ಮಿದುಳಿನಲ್ಲಿ ಚಂಡಮಾರುತದ ಭೋರ್ಗರೆತ ಎದ್ದಿತು. ಅದು ಬಿರುಗಾಳಿ ಯಾಗಿ 'ಸುಂಯ್' ಗುಟ್ಟಿ ತರಂಗಗಳು ಪ್ರಶ್ನಾರ್ಥಕವಾಗಿ ನಿಂತವು.

ವಿಸ್ಮಯ ಏಕೆ? ಕಮಲಹಾಸ ತನ್ನ ಪತಿ!

ದಿಬ್ಬ ಏರುತ್ತಿದ್ದ ಯುವಕನ ಕಡೆಗೆ ಆತಂಕದಲ್ಲಿ ಕೂಗಿ ಕೇಳಿದಳು.

"ಸುಧಾಕರ, ಎಲ್ಲಿಗೆ ಹೋಗ್ತಾ ಇದೀಯ?"

"ಗೊತ್ತಿಲ್ಲ. ಪಶ್ಚಾತ್ತಾಪಕ್ಕೂ ಹೆಚ್ಚಿನದು ಹುಡುಕ್ತಾ ಹೋಗ್ತಿದೀನಿ." ಹಿಂದಕ್ಕೆ ನೋಡದೆ ಹೇಳಿದ.

"ಹೋಗು, ಅದೇ ಸೂಕ್ತವಾದ ದಾರಿ. ಆತ್ಮಹತ್ಯೆ!"

ತಿರಸ್ಕಾರದಿಂದ ಉಸಿರು ಕಟ್ಟಿ ಅರಚಿದಳು.

ಸುಧಾಕರ ಎಸ್ಟೇಟ್ ದಿಕ್ಕಿಗೆ ತಿರುಗಲಿಲ್ಲ. ಒಂದೇ ಗತಿಯಲ್ಲಿ ದಿಬ್ಬ ಏರಿ ಹೋದ. ಕೆಂಪು, ಬಿಳುಪು ಚುಕ್ಕೆಯಾಗಿ ಅವನು ಕರಗುವವರೆಗೆ ಎವೆಹಾಕದೆ ನೋಡುತ್ತಾ ನಿಂತಳು ಮೀನಾಕ್ಷಿ.

* * *

ಕಾರ್ತೀಕ ಪೆಟ್ಟಿಗೆಗೆ ವಾದ್ಯ ಸೇರಿಸಿ, ಬಟ್ಟೆಗಳ ರಾಶಿ ಹಾಕಿದ. ಒಂಬತ್ತು ಗಂಟೆ ಸಮೀಪಿಸಿತು. ರಾತ್ರಿಯಲ್ಲೇ ಇಲ್ಲಿಂದ ನಿರ್ಗಮಿಸುವುದು! ಸರಹದ್ದಿನಲ್ಲಿ ಅವನ ಪಾತ್ರ ಉಳಿದಿರಲಿಲ್ಲ. ಹೆಣ್ಣಿನ ಅಧ್ಯಯನವೂ ಪೂರೈಸಿತ್ತು.

ಹೆಣ್ಣಿನ ಹದಿನಾರು! ಹೆಣ್ಣಿಗೆ ಆ ವಯಸ್ಸು ಬಾಳಿನ ಪ್ರಥಮ ಸಂದಿಗ್ಧ ಘಟ್ಟ. ದೈಹಿಕ ತಿರುವುಗಳೊಂದಿಗೆ ಮನದಲ್ಲಿ ವಿಕಾರಗಳಿಗೆ ಹೊರಳಾಟ. ಚಿಗುರಿದ ಯೌವನದ ಆಸೆಗಳೊಂದಿಗೆ ಕಲ್ಪನೆಗಳ ಗೋಪುರ. ಹಿಂದೆಯೇ ನಾಚಿಕೆ, ಅಂಜಿಕೆ, ಜಿಜ್ಞಾಸೆಯಲ್ಲಿ ಗೋಪುರದ ಕುಸಿತ.

ಬಡತನ, ಅವಲಂಬನೆಯ ಪರಿಸರದಲ್ಲಿ ಷೋಢಶ ಆಕಾಂಕ್ಷೆಗಳ ಸುಪ್ತ ಸೀಮಿತ. ಪರಿಸರ ತನ್ನಿಂದ ಮಲಿನಗೊಳ್ಳುವುದೆಂಬ ಭಯ. ವೈವಾಹಿಕ ಪರಿಸರದಲ್ಲಿ ಉಬ್ಬುವ ಆಸೆಗೋಲಗಳು. ಗೋಲಗಳ ಪರಿಧಿಯ ಮೇಲೆ ಹರಡುವ ವಿವೇಚನೆ. ಪ್ರಶ್ನಿಸುವ ದಾರ್ಢ್ಯ.

ಇಲ್ಲೊಂದು ಮೂರನೆಯ ಪರಿಸರ! ಹಣದ ವಾಸನೆಯಿಂದ ಕಲುಷಿತಗೊಂಡ ಅಪ್ರಬುದ್ಧ ಮಸ್ತಿಷ್ಕ. ವಿವೇಚನೆ ದೂರಕ್ಕೆ ಸರಿದು ಭವಿಷ್ಯಕ್ಕೆ ಕತ್ತಲಿನ ಹೊದಿಕೆ. ಅನಿರೀಕ್ಷಿತ ಪ್ರಸಂಗ, ಬಣ್ಣದ ಮಾತುಗಳಿಗೆ ಸೋಲುವ ನಿಶ್ಶಕ್ತ ಮನಸ್ಸು. ಹದವಿಲ್ಲದ ಮನಸ್ಸಿಗೆ ಹಣವೂ ಬೇಡವೆಂಬ ಸಮಯೊದ್ರೇಕ! ತುಸು ಬೇಸರ ಸಿಂಪರಿಸಿದ ವಸ್ತುವನ್ನು ವಿಶ್ಲೇಷಿಸುವ ತಾಳ್ಮೆ ಇಲ್ಲ. ಅಂತಿಮವಾಗಿ ವಸ್ತುವಿನ ಬಗೆಗೆ ತಿರಸ್ಕಾರ.

ಕಾರ್ತೀಕ ಕಾದಂಬರಿಯ ಪುಟದ ಮೇಲೆ ವೇಗವಾಗಿ ಪೆನ್ ಹರಿಸಿದ :

‘.........ಅವಳಿಗೆ ತಲೆಯಲ್ಲಿ ಸೀಸದ ಗಟ್ಟಿಯಂತೆ ಭಾರವಾಗಿ ಕುಳಿತ ಅಭಿಪ್ರಾಯ ಅದು. ಬಂಧನದ ಮದುವೆಯ ಘಳಿಗೆಯಲ್ಲಿ ಅವನು ಮಾನಸಿಕವಾಗಿ ತನ್ನನ್ನು ದೂರ ಮಾಡಿದ! ಇಬ್ಬರ ವಯಸ್ಸಿನ ಅಂತರ ಅತಿ ದೊಡ್ಡದೆಂಬ ಭಾರಿ ಚಿಂತೆ. ಸಮಾಜದ ಮೋಜು ಕಣ್ಣುಗಳಿಗೆ ಹೆದರಿ ಮದುವೆಯ ಉಂಗುರ ತೆಗೆದಿರಿಸುವಂತೆ ಮಾಡಿ, ತನಗೊಂದು ಏಕಾಂಗಿಯ ಬಾಳು ಸೃಷ್ಟಿಸಿದ್ದಾಯ್ತು. ಬಣ್ಣದ ಪ್ರಪಂಚದಲ್ಲಿ ನಾಲ್ಕು ಹೆಜ್ಜೆ ಹರಿಸಿದಾಗ ಹೊಸ ಸಮಸ್ಯೆಗಳೆಷ್ಟು? ಅದರ ಅರಿವು ಪತಿಗೆ ಇದ್ದರೂ ಬಿಗುಮಾನ ತಪ್ಪದು.

ಹೆಂಡತಿ ಆ ಒಂದು ತುಂಬು ಆ ನುಡಿ ಆಡಲು ಹಿಂತೆಗೆದವನಿಗೆ ತಾನು ಶ್ರೀಮಂತೆ ಎನಿಸಿದ ಮೇಲೆ ಮೈ ತುಂಬ ಆವರಿಸಿದ ಕೃತಕ ಪ್ರೀತಿ. ಒಮ್ಮೆಗೇ ಸ್ವಾರ್ಥ ಹೆಡೆ ಎತ್ತಿ ಪ್ರಚೋದಿಸುತ್ತಿದೆ. ಹೆಂಡತಿಯ ಕೊಲೆ! ಕೊಲೆಗಾಗಿ ಹೂಡಿದ ಎರಡು ಹಂಚಿಕೆಗಳು ವಿಫಲವಾಗಿವೆ. ಗಂಭೀರ ಮುಖದ ಹಿಂದೆ ಕಪ್ಪು ಹೃದಯ ಅಡಗಿಸಿಟ್ಟವನು ಪತಿಯೇ? ಅಲ್ಲ, ಸಂಪತ್ತಿನ ವಾಸನೆ ಹಿಡಿದ ಕುರುಡು ಕಾಲು ಹಾಕಿದ ನಿಕೃಷ್ಟ ಮನುಷ್ಯ......”

ಕಾದಂಬರಿಕಾರ ಮುಂದಿನ ಕೆಲವು ಸಾಲುಗಳನ್ನು ಹೊಡೆದು ಮುಖ ಒರೆಸಿ ಮನದ ಉದ್ವೇಗವನ್ನು ಲೇಖನಿಯಿಂದ ಮತ್ತಷ್ಟು ಹೊಮ್ಮಿಸಿದ.

‘............ಅವನು ಸಾಕಷ್ಟು ವಿವೇಚಿಸಿದ್ದಾಗಿತ್ತು. ಸುಧಾರಿತ ಹಾದಿಗೆ ಇಳಿದು, ಯಾವುದೊ ಸೆಳೆತಕ್ಕೆ ಸಿಕ್ಕಿ ಅಡ್ಡ ಹಾದಿಗೆ ಕಾಲಿರಿಸಿ ದುರಸ್ತು ಕಾಣದಂತೆ ಮನಸ್ಸಿನ ಯಂತ್ರ ಹದಗೆಡಿಸಿಕೊಂಡಿರುವ ಹೆಣ್ಣು!

ಆದರೆ ಅವಳ ಮೇಲಿನ ಪ್ರೀತಿ ಕುಗ್ಗದು. ಪವಿತ್ರ ಪ್ರೇಮವೆಂಬ ಹಾರ್ದಿಕ ನಿರೂಪಣೆಗೆ ಅವಳದು ನಿರುತ್ತೇಜಕ ಪ್ರತಿಕ್ರಿಯೆ. ನಾಟಕ! ಒಂದೇ ನಾಟಕವನ್ನು

ಪದೇ ಪದೇ ಪ್ರದರ್ಶಿಸುವುದು ಸ್ವಾಭಿಮಾನಕ್ಕೆ ಪೆಟ್ಟು.

ಪ್ರೀತಿ ಪ್ರೇಮದ ಗರಿಷ್ಠ ಬಿಂದು ಸಾವು. ಆ ಹೆಣ್ಣಿಗೆ ಸಾವೇ ಗತಿ. ಕೊಲೆ, ಸಂಚು ಎಂದು ದುಃಸ್ವಪ್ನ ಕಾಣುತ್ತಿರುವವಳಿಂದ ತನಗೂ ಮನಸ್ಸು ವಿಕಲ್ಪವಾಗುತ್ತಿದೆ. ಪ್ರೀತಿ ಗಾಢವಾಗುತ್ತಿರುವ ಈ ಪರೀಕ್ಷೆಯ ಕಾಲದಲ್ಲಿ ಆಗಾಗ್ಗೆ ಅನಿಸಿದೆ. ಅವಳನ್ನು ಕೊಲ್ಲಬೇಕು!

ಕೊಲ್ಲುವುದರಿಂದ ಪ್ರೀತಿಯ ಪರಿಸಮಾಪ್ತಿ ಆಗುವುದೆಂಬ ವಿಚಿತ್ರ ನೆಮ್ಮದಿ ಪವಿತ್ರ ಪ್ರೇಮಕ್ಕೆ ಸೋಲು ಕಂಡಾಗ ಅದರ ರೂಪಾಂತರ ವಿಕೃತ ಪ್ರೇಮ. ಅದು ಎಲ್ಲದರ ಕಡೆಗೂ ಕುರುಡು.

ಸೌಭಾಗ್ಯಳ ಕೊಲೆ!

ಪರಿಣಾಮ ಸ್ಪಷ್ಟ. ಜೈಲು ಕಾಣುವುದು. ಇಲ್ಲವೆ ಬರ್ನಾರ್ಡ್‌ನಂತೆ ಅಜ್ಞಾತ ಬದುಕಿನ ನಿಗೂಢ ಕೋಶ ಸೇರುವುದು.

ದಡವಿಲ್ಲದ ನಡು ಹೊಳೆ. ಗತಿ ತಪ್ಪಿ ತೂಯ್ದಾಡುವ ಮಣ್ಣಿನ ದೋಣಿ. ಅವಳೇ ತಂದುಕೊಂಡ ಭೀಕರ ಜಲ ಪಯಣ. ಮಣ್ಣಿನ ದೋಣಿ ನೀರಿನಲ್ಲಿ ಕರಗಿ ಅವಳು ಕಾಣುವುದು ಆಕಸ್ಮಿಕ ಸಾವಲ್ಲ, ತಾನೇ ಹೂಡಿದ ಶೀತಳ ಕೊಲೆ!

ಇದು ಭ್ರಮೆಯಲ್ಲ.........”

ಭ್ರಮಾಧೀನನಂತ ಕಾರ್ತೀಕ ಎದ್ದು ತಲೆ ಹಿಂದಕ್ಕೆ ಎಸೆದ. ವಿಶಾಲವಾಗಿ ಚಾಚಿದ ಕೈಗಳನ್ನು ಕಣ್ಣ ಮುಂದೆ ಹರಡಿ ನೋಡಿದ, ರಕ್ತ!

ಬರಹಗಾರ ಹೇಡಿಯಲ್ಲ. ಹೆಂಡತಿಯನ್ನು ಕೊನೆಗಾಣಿಸಬಲ್ಲ ದೃಢ ಮನಸ್ಕ. ಲೇಖನಿ ಹಿಡಿದ ಶೂರ! ಲೇಖನಿ ಚೂರಿಗಿಂತಲೂ ತೀಕ್ಷ್ಣ.

ಕಾದಂಬರಿ ಅಂತ್ಯಕ್ಕೆ ಬಂದಿತ್ತು. ಪುಟದ ಮೇಲೆ ಕೊನೆಯದೊಂದು ಖಾಲಿ ಪುಟ ಇಟ್ಟು ಹೊರಬಂದು ನಿಂತ ಕಾರ್ತೀಕ. ದೀಪ ಉರಿಯುತ್ತಿತ್ತು. ಬಾಗಿಲು ಮುಚ್ಚಿ ನಡೆದ.

ಚಿತ್ರದಲ್ಲಿ ಕೊರೆದಿಟ್ಟಂತೆ ಅಲುಗಾಡದೆ ನಿಂತ ದ್ರಾಕ್ಷಿ ಬಳ್ಳಿಗಳ ಸಾಲು. ತಾಸಿನ ಹಿಂದೆ ಹುಟ್ಟಿದ ಚಂದ್ರ. ಗಾಳಿಯ ಸುಳಿವಿಲ್ಲದ. ಕೀಟಗಳ ಕ್ಷೀಣ ಮೊರೆತ ಹರಡಿದ ಗಂಭೀರ ರಾತ್ರಿ. ಕಿವಿಗಳಿಗೆ ದಾಳಿ ಇಡುವ ಗುಂಗಿನ ದನಿ ಕೊಲೆ!ಕೊಲೆ!

ಪಕ್ಷಿ ಪ್ರೇಮಿ ಹೆಂಡತಿಯ ಹಂತಕ! ‘ಮಣ್ಣಿನ ದೋಣಿ’ಯ ಕಥಾ ನಾಯಕ ಪ್ರಧಾನವಾಗಿ ನಿಲ್ಲುವಂತಾಗಲು ನಾಯಕಿಗೆ ದುರಂತವಾಗಬೇಕೆಂಬುದು ಎಲ್ಲಿಯ ಹುಚ್ಚು? ಅಲ್ಲದೆ ದುರಂತಕ್ಕೆ ನಾಯಕನಿಂದಲೇ ಕೊಲೆ! ಕಥೆಗಾರನ ವಿಚಿತ್ರ ಸ್ವಾರ್ಥ, ಓದುಗರ ಮನದ ಗಟ್ಟಿ ಬಂಡೆಯ ಮೇಲೆ ಕಾದಂಬರಿ ನಿಲ್ಲುವುದೆಂಬ ಮಹದಾಸೆ.

ಕಾದಂಬರಿಗಾಗಿ ಬಾಳು ಹರಿದುಕೊಳ್ಳುವ ಗೀಳು. ಚಿಂತೆಯಿಲ್ಲ, ನಿಶ್ಚಯಿಸಿದ ಪಥದಿಂದ ಹಿಂದಕ್ಕೆ ಸರಿದರೆ ತಾನು ಹೇಡಿ. ಕೊಲೆ ಅನಿವಾರ್ಯ.

ಹೊತ್ತಿನ ಪರಿವೆ ಇಲ್ಲದ ಸೀಳು ಕಲ್ಲುಗಳ ಮಧ್ಯೆ ಕಾಲಾಡಿಸಿ ಕೋಣೆಗೆ ಹಿಂತಿರುಗಿದ. ಹೊರ ದೀಪ ಹಾಗೆಯೇ ಉರಿಯುತ್ತಿತ್ತು. ಮುಚ್ಚಿದ ಬಾಗಿಲು ತೆರೆದಿತ್ತು. ಬರಹವನ್ನು ಮುಚ್ಚಿದ ಖಾಲಿ ಹಾಳೆ ಪಕ್ಕಕ್ಕೆ ಸರಿದಿತ್ತು. ಬರಹದ ಪುಟಗಳನ್ನು ಚದುರಿಸಿ ಯಾರೊ ಆತುರದಿಂದ ಕಣ್ಣಾಡಿಸಿ ಹೋದುದು ಸ್ಪಷ್ಟವಾಗಿತ್ತು.

ಕೋಣೆಯ ಹೊರಬಂದು ನಿಂತು ಪಕ್ಕಗಳಿಗೆ ನೋಡಿದ. ನೆಲಕ್ಕೆ ದೃಷ್ಟಿ ಬಿತ್ತು. ಕೆಲವೇ ನಿಮಿಷಗಳ ಹಿಂದೆ ನೆಲದ ಮೇಲೆ ಊರಿ ಹೋದ ತೇವದ ಮಣ್ಣಿನ ಪಾದರಕ್ಷೆ ಗುರುತು!

ಹೆಣ್ಣಿನ ಅನುಭವ ಕಿವಿಯಲ್ಲಿ ಪಿಸುಗಿತು. ಸಂಶಯ, ರಚ್ಚು, ಜಿಜ್ಞಾಸೆ ತಳೆದ ಹಣ್ಣಿನ ಮೃದು ಹೆಜ್ಜೆ ಅದು.

ಸೌಭಾಗ್ಯ ನಿಶ್ಶಬ್ದತೆಯಲ್ಲಿ ಪುಸ್ತಕ ಹಿಡಿದವಳು ಮೆಲ್ಲನೆಯ ಸದ್ದಿನಿಂದ ಬೆಚ್ಚಿದಳು. ಗಾಳಿಗೆ ತರಗೆಲೆ ಸರಿದ ಚರಚರ ಸಪ್ಪಳ! ಬಾಗಿಲಡಿಯಿಂದ ಲಕೋಟೆ ಜಾರಿ ಬಂದಿತ್ತು.

ನಡುಗುವ ಬೆರಳುಗಳಿಂದ ಎತ್ತಿ ನೋಡಿದಳು. ಮೇಲೆ ಏನೂ ಬರೆಯದ ಬಿಳುಪು ಕವರ್.

ಬಾಗಿಲು ತೆರೆದು ಹೊರಕ್ಕೆ ತಲೆ ಹಾಕಿದಳು. ಚಂದ್ರನ ಮಾಸಲು ಬೆಳಕಿನಲ್ಲಿ ಮೊಗಸಾಲೆಯ ಎರಡು ಪಕ್ಕಗಳಲ್ಲಿ ಯಾರೂ ಕಾಣಲಿಲ್ಲ.

ಬಾಗಿಲು ಬಿಗಿಸಿ ಕವರ್‌ನಿಂದ ಕಾಗದ ಎಳೆದಳು. ಟೈಪ್ ಆಗಿದ್ದ ಸರಳ ಇಂಗ್ಲಿಷ್‌ನ ಎರಡೇ ಪಂಕ್ತಿಗಳು.

'ನಿನ್ನೊಂದಿಗೆ ಅತಿ ತುರ್ತಿನ ಮಾತಾಡಬೇಕು. ಸೇತುವೆಯ ಬಳಿಗೆ ಬಂದರೆ ಸರಿ. ಆದಷ್ಟು ಜಾಗ್ರತೆ ಈಗಲೇ ಬಾ, ಕಾದಿರುತ್ತೇನೆ."

ಅಡಿಯಲ್ಲಿ ಕಾರ್ತೀಕನ ಹೆಸರು ಟೈಪ್ ಆಗಿತ್ತು.

ಹನ್ನೆರಡು ಸಮೀಪಿಸುತ್ತಿದ್ದ ಅಪರಾತ್ರಿ. ಎಂದೂ ಭೇಟಿಗೆ ಕರೆಯದವನ ಪತ್ರಕ್ಕೆ ಮನ ಸಮ್ಮತಿ ನೀಡಿತು.

ಮೀನಾಕ್ಷಿ ತಂದಿಟ್ಟಿದ್ದ ಹಸಿರು ಉಲ್ಲನ್ ಓವರ್‌ಕೋಟು ಧರಿಸಿ ಬೆಲ್ಟು ಬಿಗಿದಳು. ತೆಳು ಚಪ್ಪಲಿಗೆ ಕಾಲು ಹೂಡಿದಳು. ನಿಮಿಷದಲ್ಲಿ ಕೋಣೆಯಿಂದ ಹೊರಬಂದು ಬಂಗಲೆಯ ಪಕ್ಕದಲ್ಲಿ ನಡೆದಳು.

ನಿರಾಶ ಹೃದಯದಿಂದ ಭಯ ದೂರವಾಗಿತ್ತು. ಕಾರ್ತೀಕನೊಂದಿಗೆ ಅಂತಿಮ

ಭೇಟಿ!

ಸರಹದ್ದು ಪೂರ್ಣ ನಿರ್ಜನವಾಗಿತ್ತು. ಧಾವಿಸುತ್ತಿದ್ದ ತೆಳು ಮೋಡಗಳ ಮೇಲೆ ಅರ್ಧ ಚಂದ್ರ ಮೂಡಿತ್ತು. ಚಳಿ ಕೂಡಿದ ಗಾಳಿಯ ಚಲನೆ ಏರಿತ್ತು,

ಜಲಪದರಗಳ ಮಧ್ಯದ ಕಿರು ರಸ್ತೆಯ ಮೇಲೆ ಸಾಗಿದಳು. ಚಂದ್ರನ ನಸು ಬೆಳಕಿನಲ್ಲಿ ವೇಗದ ನಡಿಗೆಗೆ ಅಡ್ಡಿ ಇರಲಿಲ್ಲ. ಮರಗಳ ನೆರಳು ಸಾಲು ಕಪ್ಪು ನೀರಿನ ಮೇಲೆ ಓರೆಯಾಗಿ ಅಲುಗುತ್ತಿತ್ತು.

ಸೇತುವೆ ಸಮೀಪಿಸಿತು. ಕಾರ್ತೀಕ ಎಲ್ಲಿ?

ಕಿರು ರಸ್ತೆಯ ಅಂಚಿನಲ್ಲಿ ಒಟ್ಟಿದ ದಿಂಡು ಕಲ್ಲುಗಳ ರಾಶಿ ದಾಟಿದಳು. ಸೇತುವೆ ಆಚೆಯ ಎಡ ಪಕ್ಕದಿಂದ ಕಾರಿನ ಯಂತ್ರ ಶಬ್ದ ಹರಿದುಬಂತು. ಅದರೊಂದಿಗೆ ದೀಪಗಳೆರಡೂ ಹೊತ್ತಿದವು. ನಡಿಗೆ ಮಂದವಾಯಿತು.

ಕಾರು ಕಿರು ರಸ್ತೆಯ ಮೇಲೆ ಎದುರು ದಿಕ್ಕಿನಿಂದ ಭಿಮ್ಮನೆ ಹರಿದು ಬಂತು. ದೀಪಗಳ ತೀಕ್ಷ್ಣತೆ ಮುಖ ಅಪ್ಪಳಿಸಿತು. ಕಣ್ಣುಗಳ ಮುಂದೆ ಬುದ್ಧಿ ಶೂನ್ಯಗೊಳಿಸು ವಂತೆ ಗಾಢವಾಗಿ ಹರಡಿದ ಹಳದಿಗೆಂಪಿನ ಹೊಳಪು ಪರದೆ.

ದಿಗ್ಭ್ರಮೆಯಲ್ಲಿ ತಾನು ರಸ್ತೆಯ ಮೇಲಿರುವುದು ಸೂಚಿಸಲು ಕೈಗಳನ್ನೆತ್ತಿ ಬಲವಾಗಿ ಬೀಸಿದಳು. ವಾಹನ ಅದೇ ರಭಸದಲ್ಲಿ ಹರಿದು ಬಂತು. ಮಿದುಳಿನಿಂದ ರಭಸದಲ್ಲಿ ಬಂತು ಎಚ್ಚರಿಕೆ... ಕಾರ್ತೀಕ ತನ್ನ ಮೇಲೆ ಕಾರು ಹರಿಸುತ್ತಾನೆ!

ಕಾರು ಒಂದೇ ಗತಿಯಲ್ಲಿ ನೇರವಾಗಿ ಮೇಲೆ ಬಂತು. ಚೀತ್ಕರಿಸಿದ ಸೌಭಾಗ್ಯ ಕಿರುರಸ್ತೆಯಿಂದ ಪಕ್ಕಕ್ಕೆ ಹಾರಿದಳು. ಯೋಚನೆಗೆ ಕ್ಷಣದ ಅವಕಾಶವಿಲ್ಲದೆ, ಅವಳಿಗೆ ಅರಿವಿಲ್ಲದಂತೆ ಸಾಗಿದ ಕೃತ್ಯ ಅದು.

ಸೇರಿದ ತಾಣ ಯಾವುದೆಂದು ಅರಿವಾಗಲು ಅರೆ ನಿಮಿಷ ಹಿಡಿಯಿತು. ಉಸಿರು ಕಟ್ಟಿ, ಕೈ ಕಾಲುಗಳು ಹುಚ್ಚು ಚಲನೆ ನಡೆಸಿದ್ದವು. ಶೀತಳ ಮಡುವಿನಲ್ಲಿ ಶರೀರ ಇಳಿದು ತಲೆಯ ಮೇಲೆ ನೀರು ಕವಿದಿತ್ತು. ಮೇಲೆ ಬಂದಾಗ ಏದುಬ್ಬಸದಲ್ಲಿ ಕೈ ಬಡಿಯುತ್ತಿದ್ದಳು. ಓವರ್ ಕೋಟಿನ ಭಾರ ಅವಳನ್ನು ಕೆಳಕ್ಕೆ ಎಳೆಯುತ್ತಿತ್ತು. ಕಾಲುಗಳು ತಳಕ್ಕಾಗಿ ತಡಕಾಡಿದವು. ಆಳ ತಿಳಿಯದು ದಡ ಕಾಣದು. ಚಪ್ಪಲಿಗಳು ಪಾದಗಳಿಂದ ಜಾರಿ ಹೋದವು.

ಗಾಬರಿಯ ಕೈ ಬಡಿತ ಏನೂ ಕಾಣದಂತೆ ಮಾಡಿತ್ತು. ಮುಖ ಎತ್ತಿದಾಗ ರಸ್ತೆಯ ಮೇಲೆ ಅಂಚಿನಲ್ಲಿ ನೆರಳಿನಂತಹ ವ್ಯಕ್ತಿ ನಿಂತುದು ಕಾಣಿಸಿತು!

“ಇದು ಹಿಡಕೊ...”

ಮೇಲಿನಿಂದ ಬಂತು ಗಡಸು ಧ್ವನಿ.

"ನನಗೆ ಏನೂ ಕಾಣ್ತಾ ಇಲ್ಲ.."

ರಕ್ಷಣೆ ಪಡೆಯುವ ಆತುರದಲ್ಲಿ ನೀರು ಕುಡಿದ ಕಂಠ ತಡೆಯಲ್ಲಿ ನಿಂತು ಬಂತು.

ಯಾವುದೊ ವಸ್ತು ಮೊನಚಾಗಿ ಭುಜ ತಿವಿಯಿತು. ಮೇಲೆ ನಿಂತಿದ್ದ ವ್ಯಕ್ತಿ ಸಲಾಕೆ ಹಿಡಿದಿತ್ತು. ಸಲಾಕೆಯ ತುದಿ ಓವರ್ ಕೋಟಿನ ಕಾಲರ್ ಬಳಿ ಎಡ ಬಲ ಒರಟಾಗಿ ಸವರುತ್ತಾ ಸರಿದಾಡಿತು. ಸೌಭಾಗ್ಯ ದೃಷ್ಟಿ ಕತ್ತಲಿನಲ್ಲಿ ಇಳಿಸಿದಳು! ಸಿಮೆಂಟ್ ವಸ್ತುಗಳನ್ನು ನೀರಿಗೆ ಮೀಟುವ ನೀಳ ಕಬ್ಬಿಣದ ಕಡೆ!

ಅರ್ಥವಾಗಲು ವೇಳೆ ಹಿಡಿಯಲಿಲ್ಲ. ಕಬ್ಬಿಣದ ಕವೆ ಸಹಾಯಕ್ಕೆ ಬದಲಾಗಿ ತನ್ನ ಕುತ್ತಿಗೆಯ ಹಿಡಿತಕ್ಕೆ ಸರಿದಾಡುತ್ತಿದೆ!

ಸೌಭಾಗ್ಯ ಮುಂದಕ್ಕೆ ಸರಿದು ನೀರಿನ ತುದಿ ಸೇರಿ ರಸ್ತೆಯಿಂದ ಅಡಿಯಷ್ಟು ಕೆಳಗೆ ಇದ್ದ ಸಿಮೆಂಟ್ ಚೌಕಟ್ಟಿನ ಅಂಚು ಹಿಡಿದು ನೀರಿನಲ್ಲಿ ತೂಗಾಡಿದಳು.

"ಕಾರ್ತೀಕ, ನೀವು!..... ಇಲ್ಲಿಗೆ ನನ್ನ ಕರೆಸಿ ಹೀಗೆ ವಂಚನೆ ಮಾಡ್ತೀರಾ?.."

ಉಮ್ಮಳಿಸಿದ ಆಯಾಸದಲ್ಲಿ ತಡೆ ತಡೆದು ಹೇಳಿದಳು.

ಮರು ಮಾತಿಗೆ ಬದಲು ಅವಳ ಭುಜಕ್ಕೆ ಕವೆಯ ಹೊಡೆತ ಬಿತ್ತು. ಒಂದು ಕೈ ಆಧಾರದಲ್ಲಿ ಓಲಾಡಿದ ಸೌಭಾಗ್ಯ ಮತ್ತೆ ನೀರಿನೊಳಕ್ಕೆ ಕುಸಿದು ಹೋದಳು.

ನೀರಿನಡಿಯಲ್ಲಿ ಭಯವನ್ನು ಮೀರಿಸಿತ್ತು ಅಚ್ಚರಿ! ನೀರಿನ ಮೇಲಕ್ಕೆ ಬರಲು ಉಸಿರು ಕಟ್ಟಿ ನಡೆಸಿದ ಸೆಣಸಾಟ ಏಕೊ ಸಾಗದು! ಹೇರಿದ ಅಗಾಧ ಭಾರ!

ಕುತ್ತಿಗೆ ಸವರಿದಳು. ಮೀಟು ಕವೆ ಅವಳನ್ನು ನೀರಿನೊಳಗೆ ಬಲವಾಗಿ ಒತ್ತುತ್ತಿತ್ತು! ಮುಳುಗಿಸಿ ಕೊಲ್ಲುವ ಯತ್ನ!

ಮೀಟುಗೋಲಿನ ಒತ್ತಡದಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಕವೆ ಓವರ್ ಕೋಟಿನ ಕಾಲರ್ ಹಿಡಿದು ನುಲಿಯುತ್ತಿತ್ತು. ನೀರು ಕುಡಿದು ಸಾಯುವ ಭೀಕರ ಸ್ಥಿತಿ!

ಕೋಟ್‌ನಿಂದ ಬಿಡುಗಡೆ ಹೊಂದುವುದೊಂದೇ ದಾರಿ. ನಡುವಿಗೆ ಬಿಗಿಸಿದ ಬೆಲ್ಟು ಅಡಿಯಾಗಿತ್ತು. ಬೆಲ್ಟಿನ ಉದ್ದಕ್ಕೂ ಕೈ ಹರಿದಾಡಿಸಿ ಶ್ರಮದಿಂದ ಸಡಿಲಿಸಿದಳು. ಮೃತ್ಯುರೂಪದ ಕವೆಯ ಹಿಡಿತ ತಪ್ಪಿ ಹೋಯಿತು. ಬಿಡುಗಡೆಯ ಹೋರಾಟದಲ್ಲಿ ಮೈ ತೊಡರಿದ ಸೆರಗು ಎಳೆದು ಬಿಗಿಸಿ ಗಾಳಿಗಾಗಿ ಹಾತೊರೆದು ಮೇಲೆದ್ದಳು!

ಕಣ್ಣುಗಳ ಜಲ ಪರದೆಯ ಮುಂದೆ ಮಾಸಲು ಆಕೃತಿ ಕಂಡಿತು.

"ಲೇಖನಿ ಹಿಡಿದ ನೀಚ!....ಧೂರ್ತ"

ಆರ್ತಳಂತೆ ಶಪಿಸಿದಳು. ವಿಕಟ ನಗೆ ಕಿವಿ ಇರಿಯಿತು.

ಶಕ್ತಿ ಉಡುಗುತ್ತಿತ್ತು. ಹೆಚ್ಚು ಹೊತ್ತು ತೇಲಾಡುವುದು ಸಾಧ್ಯವಿರಲಿಲ್ಲ.

ತಿರಸ್ಕಾರದ ನಗೆ ಬಂತು. ತಲೆ ಎತ್ತಿದಳು ಸೌಭಾಗ್ಯ. ಚಂದ್ರನ ಬೆಳಕಿನಲ್ಲಿ ಬೆಳ್ಳಿಯಂತೆ ಫಳಕ್ಕನೆ ಹೊಳೆಯಿತು. ಅದು ಬೆಳ್ಳಿಯಲ್ಲ, ಯಾವುದೊ ಗಟ್ಟಿ ಲೋಹದ ಆಯುಧ.

ಕ್ಷಣದ ಪ್ರೇರಣೆಯಿಂದ ನೀರಿನಲ್ಲಿ ಮುಳುಗಿ ಮತ್ತೆ ತಲೆ ಎತ್ತಿದಳು. ಕುಡುಗೋಲಿನ ಆಕಾರದ ವಸ್ತು ನೀರಿನ ಮೇಲೆ ರೊಯ್ಯನೆ ಹಾದು ಅವಳ ಬಲಪಕ್ಕದಲ್ಲಿ ಮಾಯವಾಗಿತ್ತು!

ಎಡ ಪಾರ್ಶ್ವದಿಂದ ಮತ್ತೊಂದು ಹೊಳಪಿನ ಲೋಹ ಹಾದುಬಂತು. ಹೊರ ಗಾಳಿ ಸೆಳೆದುಕೊಂಡವಳು ಮತ್ತೊಂದು ಮುಳುಗು ಹಾಕಿದಳು. ಶತ್ರುವಿನ ಹಿಡಿತಕ್ಕೆ ತುಸು ದೂರ ಸರಿದು ಹೋದಳು. ಪವಾಡ ಎಂಬಂತೆ ಬಡಿಯುತ್ತಿದ್ದ ಕಾಲಿಗೆ ಗಟ್ಟಿ ವಸ್ತು ಸೋಕಿತು. ಚಪ್ಪಟೆಯಾದ. ನುಣ್ಣನೆಯ ಸ್ಥಿರವಸ್ತು. ಪಾದಗಳನ್ನು ಅದರ ಮೇಲೆ ಹೊಂದಿಸಿ ಮೇಲೆದ್ದಳು. ನೀರಿನ ಮಟ್ಟದ ಮೇಲೆ ಭುಜ, ತಲೆ ಏರುವಷ್ಟು ಸಾಧ್ಯಗೊಳಿಸಿದ ಆಧಾರ. ನಿಂತ ನೀರಿನ ದೊಡ್ಡ ಹೊಂಡದಲ್ಲಿದ್ದ ಒರಟು ಕಲ್ಲು ಅದು. ಮೇಲಿನ ತುದಿ ಚಿಕ್ಕದಾಗಿತ್ತು. ಆಪತ್ಕಾಲಕ್ಕೆ ನಿಲುಕಿದ ನೀರಿನಡಿಯ ಅದ್ಭುತ ನಿಲ್ದಾಣ.

ನೋವಿನ ಆಗಸವಾಗಿದ್ದ ಶ್ವಾಸಕೋಶಗಳಲ್ಲಿ ಗಾಳಿ ಸುಳಿದಾಡಲು ತುಸು ಅವಕಾಶ ದೊರೆತಿತ್ತು. ಆತುರಿದಂದ ಗಾಢವಾಗಿ ಗಾಳಿ ತುಂಬಿಕೊಂಡಳು.

"ಕಾರ್ತೀಕ....."

ತಿರಸ್ಕಾರ, ನೋವು ಕೂಡಿದ ಆದಷ್ಟು ಕರೆಯ ಹೊರತಾಗಿ ಮುಂದಿನ ಪದ ಹೊರಬೀಳಲಿಲ್ಲ. ಚಳಿ ನೀರಿನಿಂದ ಶರೀರದ ನರಗಳು ಸುತ್ತಿದ್ದವು. ಶತ್ರುವಿನೊಂದಿಗೆ ಹೆಚ್ಚು ಹೋರಾಡಲು ಚೈತನ್ಯವಿರಲಿಲ್ಲ.

ಪಕಪಕ ನಗು ತರಂಗಗಳಲ್ಲಿ ಬಂತು. ಅದರ ಹಿಂದೆಯೇ ಗದರಿಕೆ.

"ಕಾರ್ತೀಕ?.... ಆ ಹೆಸರು ಹಿಡಿದು ಅರಚು! ಅವನು ಬರೋದಿಲ್ಲ"

ಸೌಭಾಗ್ಯ ತನ್ನ ಕಿವಿ ನಂಬದಾದಳು. ಆ ಕಂಠ ಅವಳ ರಕ್ತ ಹೆಪ್ಪುಗಟ್ಟಿಸಿ ಅಚ್ಚರಿಯ ಪರಮಾವಧಿಗೇರಿಸಿತು. ಸ್ತಂಭೀಭೂತಳನ್ನಾಗಿಸಿತು.

ರಸ್ತೆಯ ಮೇಲೆ ನಿಂತ ವ್ಯಕ್ತಿ ಕಾರ್ತೀಕ ಅಲ್ಲ!

"ಮೀನಾಕ್ಷಿ!..... ನೀನು?....."

ಹಲ್ಲು ಕಚ್ಚಿ ವಿಸ್ಮಯ ಬೆರೆತ ಭೀತಿಯಲ್ಲಿ ಉದ್ಗಾರ ಎತ್ತಿದಳು.

"ಹೌದು, ಮೀನಾಕ್ಷಿ ನಿನ್ನ ಮೃತ್ಯು! ನಿನ್ನ ಗಂಡನ ಹೆಸರಲ್ಲಿ ತುಂಡು ಕಾಗದ

ಹಾಕಿ ನಿನ್ನ ಇಲ್ಲಿಗೆ ಕರೆಸಿದೋಳು. ಆಗ ಶತ್ರುಘ್ನ ನೀರಿನಲ್ಲಿ ಮುಳುಗಿ ಸತ್ತ. ಈಗ ನಲವತ್ತು ಲಕ್ಷದ ಮಾಲೀಕಳ ಸಾವು!"

"ಸಂತುರಾಮ ಹಾಗೆ ನನ್ನ ಚಿಕ್ಕಪ್ಪನ ಸಾಯ್ಸಿದ್ರಲ್ಲಿ ತಪ್ಪಿಲ್ಲ."

ಅಂತಹ ಪರಿಸ್ಥಿತಿಯಲ್ಲೂ ತನ್ನ ಪಪ್ಪನ ಪರವಾಗಿ ಹೇಳಿದಳು.

"ನೀನೊಂದು ಬೆಪ್ಪು! ಶತ್ರುಘ್ನಬಾಬುನ ಸಾಯ್ಸಿಸ್ದೋನು ಸಂತುರಾಮ ಅಲ್ಲ. ಸಾವಿನ ಮುಂದೆ ನಿಂತಿರೊ ನಿನಗೆ ಈಗ ರಹಸ್ಯ ಬಿಚ್ಚಿದರೆ ನನಗೆ ಅಪಾಯ ಇಲ್ಲ... ಆ ರಾತ್ರಿ ಸಂತುರಾಮ ಶತ್ರುಘ್ನಬಾಬುನ ನೆಲ ಬಾವಿಗೆ ಎತ್ತಿ ಹಾಕ್ದ. ನೀರಲ್ಲಿ ಮುಳುಗುತ್ಲೇ ಅವನು ಸತ್ತ ಅಂತ ಭಾವಿಸಿ ಧಾವಿಸಿಬಿಟ್ಟ. ನಾನು ಬೆನ್ನಿಗೇ ಬಂದಿದ್ದೆ. ಶತ್ರುಘ್ನ ಕೂಪದಿಂದ ಮೇಲಕ್ಕೆ ಏರಿ ಬರ್ತಿದ್ದ. ನನ್ನ ಕೆಡಿಸೋದಿಕ್ಕೆ ಕಾಯ್ತಾ ಇದ್ದ ಕೆಟ್ಟ ಹುಳು! ನನ್ನ ಆ ಹೊತ್ನಲ್ಲಿ ಒಂಟಿಯಾಗಿ ನೋಡಿ ನಾಲಗೆ ಚಪ್ಪರಿಸಿದ ಕುಡುಕ..."

"ನೀನು ಅವನ್ನ ಮತ್ತೆ ನೀರಿಗೆ ತಳ್ಳಿಬಿಟ್ಟೆ?"

"ಕೂಪಕ್ಕೆ ತಳ್ಳಿಬಿಟ್ಟೆ! ಕಬ್ಬಿಣದ ಕವೆ ಅವನ ಕುತ್ತಿಗೆಗೆ ಒತ್ತಿಹಿಡಿದು ನೀರಿನಿಂದ ಮತ್ತೆ ಏಳದ ಹಾಗೆ ಬಲವಾಗಿ ಅದುಮಿಬಿಟ್ಟೆ. ಸಂತುರಾಮ ತಾನೇ ಕೊಲೆಗಾರ ಅಂತ ಜೀವ ಸವೆಸ್ದ. ನಾನು ಹಾಯಾಗಿ ಉಳಕೊಂಡೆ."

ಕಲ್ಲ ಮೇಲೆ ಕಾಲು ಹೊರಳುತ್ತಿತ್ತು. ಸ್ಥಿರವಾಗಿ ನಿಲ್ಲುವ ಸಾಹಸದಲ್ಲಿ ತೂಗಾಡಿದಳು.

"ಚೆಲುವಿನ ಮುಖದೋಳು ಕೊಲೆಗಾತಿ ಅಂತ ಸ್ವಪ್ನದಲ್ಲೂ ತಿಳಿದಿರಲಿಲ್ಲ. ನೆಲಮಾಳಿಗೆಯಲ್ಲಿ ಆ ಕಪಾಟು ನನ್ನ ಮೇಲೆ ಉರುಳಿಸೋದಿಕ್ಕೆ ನಿನ್ನದೆ ಸಂಚು!"

"ಬಹಳ ನಿಧಾನವಾಗಿ ಊಹಿಸ್ದೆ. ಶ್ರೀಮಂತೇನ ಕೊಲ್ಲೋದು, ಕಾರ್ತೀಕನ ಮೇಲೆ ಆ ಕೊಲೆ ಹೊರಿಸೋದು ಎರಡೂ ಸ್ವಲ್ಪದರಲ್ಲಿ ತಪ್ಪಿ ಹೋಯ್ತು... ಎಷ್ಟು ಹೊತ್ತು ಹಾಗೆ ನೀರಿನಲ್ಲಿ ನಿಂತಿರ್ತೀಯೊ ನೋಡ್ತೀನಿ. ಇನ್ನೆರಡು ನಿಮಿಷಕ್ಕಿಂತ ಹೆಚ್ಚಾಗಿ ಸಾವನ್ನ ದೂರ ಇಡಲಾರೆ!"

"ಸಾಯೋದು ನಿಶ್ಚಯ ಅಂತ ಗೊತ್ತಾಗಿದೆ. ಸಾಯೊ ಮೊದಲು ಸತ್ಯ ತಿಳಿದೆ. ನೆಮ್ಮದಿಯಿಂದ ಸಾಯ್ತೀನಿ. ಸಂತುರಾಮನಿಗೆ ಅನ್ಯಾಯ ಆಯ್ತು. ಕಾರ್ತೀಕನಿಗೂ ನನ್ನಿಂದ ಅನ್ಯಾಯ, ಮಾನಸಿಕ ಹಿಂಸೆ ಆಯ್ತು."

"ಲೇಖನಿ ಹಿಡಿದ ಕೃತ್ರಿಮಿ ಅವನು, ಕಾದಂಬರಿಯಲ್ಲಿ ನಿನ್ನ ಕೊಲ್ಲೋದಿಕ್ಕೆ ಹೊರಟವನ ಹಾಗೆ ಬರೆದಿದಾನೆ. ಕೋಣೆಯಲ್ಲೇ ಉಳಿದಿದಾನೆ. ಅದನ್ನ ನೋಡಿ ನಿನ್ನ ಇಲ್ಲಿಗೆ ಬರೊ ಹಾಗೆ ಮಾಡ್ದೆ. ನಾನು ಅವನ್ನ ಮದುವೆ ಆಗೊ ಆಸೆ ತೋರ್ಸಿ

ಅವನ ನಾಡಿ ಹಿಡಿದು ನೋಡ್ದೆ. ಮದುವೆಗೆ ಸಮ್ಮತಿ ಕೋಡೋಷ್ಟು ನಟನೆ ಮಾಡಿ ನನ್ನ ನಾಡಿ ಹಿಂಡಿಬಿಟ್ಟ! .... ನಿನಗೇ ಅಂಟಿಕೊಂಡ ಅಯೋಗ್ಯ."

"ಸುಧಾಕರನಿಗೆ ಪ್ರಚೋದನೆ ಮಾಡಿ ಅತ್ಯಾಚಾರಕ್ಕೆ ಕಳಿಸ್ದೆ...."

"ಉಯಿಲಿನಲ್ಲಿ ನನ್ನ ಪಾಲಿದೆ ಅನ್ನೊ ಭ್ರಮೆಯಲ್ಲಿ ಹಾಗೆ ಪ್ರಚೋದನೆ ಮಾಡಿದ್ದೆ. ಉಯಿಲೇ ಇಲ್ಲಾಂತ ಬೆಳಗ್ಗೆ ಗೊತ್ತಾಯ್ತು. ಆದರೂ ಕಳಿಸ್ದೆ ನಿನ್ನ ಮೇಲಿನ ಸೇಡಿಗೆ. ಅವನು ಸೋತ. ಕಾರ್ತೀಕ ನಿನ್ನ ಗಂಡ ಅನ್ನೊ ಸುಳಿವು ಮೊದಲೇ ಹತ್ತಿದ್ರೆ! .... ಓಹ್, ಮೋಸ ಹೋದೆ. ನನ್ನ ಗಂಡ ಕಮಲಹಾಸ ನಾನು ಬದುಕಿರುವಾಗಲೇ ನಿನ್ನ ಮದುವೆ ಆಗ್ತೀನಿ ಅಂತ ನನಗೆ ದ್ರೋಹ ಬಗೆಯೊ ಮಟ್ಟಕ್ಕೆ ಹೋದ. ನನ್ನ ಪಾಲಿಗೆ ಕವಡೆ ಆಸ್ತಿಯೂ ಬರಲಿಲ್ಲ. ಎಲ್ಲಾ ಕಡೆಯಿಂದಲೂ ವಂಚಿತೆ ಆದ ಮೇಲೆ ನನ್ನ ಗತಿ? ಇಷ್ಟೊಂದು ಜನ. ವ್ಯವಹಾರ ಕಂಡೋಳು ಏಕ್‌ದಂ ಏಕಾಂಗಿ ಆಗಿದ್ದೆ! ಬೆಟ್ಟದಷ್ಟು ನಿರಾಶೆ! ನಾನು ನಿಶ್ಚಿಂತೆಯಿಂದೆ ಸಾಯಬೇಕಾಗಿದ್ರೆ ನೀನು ಮೊದಲು ಸಾಯಬೇಕು. ನೀನೇ ನನ್ನ ಆಸೆ, ಆಕಾಂಕ್ಷೆಗಳಿಗೆ ಮೂಲ..."

ವಿಕೃತ ನಗೆ ಕಠೋರವಾಗಿತ್ತು. ಮೀನಾಕ್ಷಿ ಆ ನಗೆ ನಿಲ್ಲಿಸಿ ಸಂಶಯದಲ್ಲಿ ಕೇಳಿದಳು.

"ಏಯ್ ಬಚ್ಚಿ! ಅಷ್ಟು ಹೊತ್ತಿನಿಂದ ನೀನು ನೀರಲ್ಲಿ ತೇಲಾಡ್ತಾ ಹೋಗೋದು ಹೇಗೆ?"

"ಕಲ್ಲು ತುಂಡಿನ ಮೇಲೆ ಈ ಜೀವ ನಿಂತಿದೆ."

ಫೂತ್ಕರಿಸಿತು ನಾಗರ ಹೆಣ್ಣು. ಸೌಭಾಗ್ಯ ನೋಡುತ್ತಿದ್ದಂತೆಯೇ ಅವಳು ನೆಲಕ್ಕೆ ಬಾಗಿ ಏನನ್ನೋ ಎತ್ತಿ ತೂರಿದಳು.

ತಲೆಯ ಪಕ್ಕದಲ್ಲೇ ಘನವಾದ ಸಪ್ಪಳ ಕೇಳಿಸಿತು. ಥಪ್ಪನೆ ತುಳುಕಿದ ನೀರು ಮುಖ ಆವರಿಸಿತು. ದಿಂಡು ಕಲ್ಲು ನೀರಿಗೆ ಅಪ್ಪಳಿಸಿತ್ತು!

ಗಾಯಗೊಂಡ ಹೆಣ್ಣು ಹುಲಿ! ಕ್ರೋಧದ ಹೂಂಕಾರದಲ್ಲಿ ಸಾವಕಾಶವಾಗಿ ಆಟ ನಡೆಸಿತ್ತು. ಹಿಮಗಟ್ಟಿಸುವ ನೀರಿನಲ್ಲಿ ಸೌಭಾಗ್ಯಳ ಸಾವು ಖಚಿತವೆಂಬ ಧೂರ್ತ ವಿಶ್ವಾಸ.

ಮತ್ತೊಂದು ಕಲ್ಲು ಗಾಳಿಯನ್ನು ಸೀಳಿ ಬಂತು. ಅವಳು ತಲೆ ಸರಿಸುವ ಮೊದಲೇ ಮುಖದ ಮುಂದೆ ನೀರನ್ನು ಘರ್ಷಿಸಿತು.

ಮೀನಾಕ್ಷಿ ತರಾತುರಿಯಲ್ಲಿ ಮತ್ತೊಂದು ಕಲ್ಲಿಗೆ ಕೈ ಹಾಕಿದಳು... ಮತ್ತೂ ಒಂದು! ಎಸೆತದ ಗುರಿ ತಪ್ಪಿದುದರಿಂದ ರೊಚ್ಚಿಗೆದ್ದ ನಾಗಿಣಿ.

ನಾಲ್ಕಾರು ಕ್ಷಣಗಳ ನಿಶ್ಶಬ್ದತೆ...

ಮೀನಾಕ್ಷಿ ಬರಿಗೈಲಿ ನಿಂತು ತಲೆ ಪಕ್ಕಕ್ಕೆ ತಿರುಗಿಸಿ ಯಾವುದೊ ಶಬ್ದಕ್ಕೆ ಕಾದಳು. ಸೌಭಾಗ್ಯಳಿಗೆ ಚಳಿ. ಭಯದಲ್ಲಿ ಹೋರಾಡುವ ತನ್ನದೇ ಹಲ್ಲುಗಳ ಕಟಕಟ ರಾಗ.

ಮೃತ್ಯುವಿಗೆ ಕೆಲವೇ ಕ್ಷಣಗಳಷ್ಟು ಸಮೀಪ! ಸೌಭಾಗ್ಯಳ ಕಣ್ಣ ಮುಂದೆ ವಿಶಾಲ ಹೃದಯವೊಂದು ಹರಡಿ ನಿಂತಿತು. ಅದರ ಮುಂದೆ ಕಾರ್ತೀಕನ ಸೌಮ್ಯ ಮುಖ.

ಹೃದಯದಿಂದ ಕಹಿ ಕಲ್ಪನೆ ಬುಗ್ಗೆಯಾಗಿ ಎದ್ದಿತು.

ಶರ್ಮಿಳಾಳ ತೋಳಿಗೆ ಹಿಂತಿರುಗುವ ಭಗ್ನ ಪ್ರೇಮಿ... ಸುಧಾಕರನ ಸ್ನೇಹಕ್ಕೆ ಈರ್ಷ್ಯೆ ತೂರಿ ಬಿಡುಗಡೆಯ ಕಿಡಿಗಾರಿದ ಸಹನೆಗೇಡಿ... ಅಪಾರ ಆಸ್ತಿಗಾಗಿ ಪ್ರೀತಿಯ ಸೋಗು ಹಾಕಿದ ಕೃತ್ರಿಮಿ... ಮೀನಾಕ್ಷಿಯನ್ನು ಮದುವೆಯಾಗಲು ಸಮ್ಮತಿಸಿದ ನಯವಂಚಕ...

ಓಹ್, ತನ್ನ ತಪ್ಪು ಕಲ್ಪನೆಗಳನ್ನು ಅಳೆಯಲು ಮಾನದಂಡ ಸಿಗದು. ಪಶ್ಚಾತ್ತಾಪ ಸೂಚಿಸುವ ಸೂಕ್ತ ಬಗೆಯೆಂದರೆ ತನ್ನ ಸಾವು!

'ಕ್ಷಮಿಸಿ, ಕಾರ್ತೀಕ, ನೂರು ಬಾರಿ ಕ್ಷಮಿಸಿ."

ನೊಂದು ಹಣ್ಣಾದ ಮನ ಕೋರಿಕೆ ಸಲ್ಲಿಸಿತು.

ಮೀನಾಕ್ಷಿ ಭೀತಳಾಗಿದ್ದಳು. ಸದ್ದು ಕಿವಿ ಕಚ್ಚಿರಬೇಕು. ಸೌಭಾಗ್ಯಳ ಕ್ಷಿಪ್ರ ಮರಣಕ್ಕಾಗಿ ತಾಳ್ಮೆಗೆಟ್ಟಳು..... ದೊಡ್ಡದೊಂದು ದಿಂಡುಗಲ್ಲಿಗಾಗಿ ಕೈ ಹರಿದಾಡಿಸಿದಳು.

ಸೌಭಾಗ್ಯಳಿಗೆ ಈಗ ಕೇಳಿಸಿತು. ರಸ್ತೆಯ ಮೇಲೆ ಓಡಿ ಬರುವ ಹೆಜ್ಜೆಗಳ ಸಪ್ಪಳ!

"ಸೌಭಾಗ್ಯ...."

ಸಾಕಷ್ಟು ದೂರದಿಂದ ಬಂದ ಕರೆ ಹೃದಯ ಮುಟ್ಟಿತು. ಕಾರ್ತೀಕನ ಬೃಹತ್ ಆಶ್ವಾಸನೆಯ ಆತ್ಮೀಯ ಕರೆ!

ಮೀನಾಕ್ಷಿ ತನ್ನ ಶಕ್ತಿಗೂ ಮೀರಿದ ಕಡೆಯ ಕಲ್ಲು ಎತ್ತಿ ತೂಗಿದಳು.

ವಿಳಂಬ ಮಾಡುವಂತಿಲ್ಲ...

"ಕಾರ್ತೀಕ.. ನಾನು ಸೌಭಾಗ್ಯ.... ಇಲ್ಲಿ, ನೀರಿನಲ್ಲಿ........'

ದಿಂಡುಗಲ್ಲು ತಲೆ ಅಪ್ಪಳಿಸುವ ಮೊದಲೇ ಉಚ್ಚ ಕಂಠದಲ್ಲಿ ಅರಚಿ, ನಿಲುದಾಣದ ಕಲ್ಲಿನಿಂದ ಸರಿದು ಮುಳುಗಿದಳು.

ನೀರಿನ ಮೇಲೆ ತಲೆ ಎತ್ತಿದಾಗ ಮತ್ತೊಂದು ಶರೀರ ಥಪಾರನೆ ನೀರಿಗೆ ಬಿತ್ತು. ಬಲವಾದ ತೋಳುಗಳು ಅವಳನ್ನು ಹಿಡಿದೆತ್ತಿದವು. ಆವರೆಗೆ ಅನುಭವಿಸಿದ ಭಯಾನಕ ದೃಶ್ಯ ಸರಣಿಯನ್ನು ಮರೆಸುವಂತಹ ಹಿತವಾದ, ರಕ್ಷಣೆಯ ತೋಳುಗಳು!

ಕಾರ್ತೀಕ ನೀರಿನಿಂದ ರಸ್ತೆಗೇರಿ ಅವಳನ್ನು ಸೆಳೆದುಕೊಂಡ.

ಕಾರು ಯಂತ್ರದ ಮೊರೆತ ಕೇಳಿಸಿತು. ಪ್ರಜ್ವಲಿಸಿದ ದೀಪಗಳ ಬೆಳಕು ಪಕ್ಕಕ್ಕೆ ಬಿತ್ತು.

"ಮೀನಾಕ್ಷಿ ಹಾರಿ ಹೋಗ್ತಾ ಇದಾಳೆ."

ಕತ್ತಲೆಯ ದಿಕ್ಕಿಗೆ ಬೆರಳು ತೋರಿದಳು ಸೌಭಾಗ್ಯ.

ಕಾರ್ತೀಕ ಅತ್ತಲೇ ನೋಡುತ್ತಿದ್ದ. ಕಾರು ಕಿರು ರಸ್ತೆಯ ವಲಯ ದಾಟಿ ನೂರು ಗಜಗಳಷ್ಟು ಮುಂದಕ್ಕೆ ಚಿಮ್ಮುವಂತೆ ಧಾವಿಸಿತು. ಹಿಂದಕ್ಕೆ ತಿರುಗಿತು. ಅಬ್ಬರದೊಂದಿಗೆ ಬಾಣದಂತೆ ನುಗ್ಗಿ ಬಂತು.

ನೇರವಾಗಿ ರಸ್ತೆಯ ಮೇಲೆ ನಿಂತ ಅವರಿಬ್ಬರ ಮೇಲೆ! ದಿಕ್ಕೆಟ್ಟ, ಹತಾಶ ಛಲವಾದಿಗೆ ಇಬ್ಬರನ್ನೂ ಒಟ್ಟಾಗಿ ಕೊನೆಗಾಣಿಸುವ ಅಂತಿಮ ಯತ್ನ!

"ನಿಲ್ಸು....!"

ರಸ್ತೆಗೆ ಅಡ್ಡಲಾಗಿ ನಿಂತು ಕಂಠ ಹರಿಯುವಂತೆ ಕೂಗಿ ಕೈ ಬೀಸಿದ ಕಾರ್ತೀಕ, ಕಾರಿನ ವೇಗ ಸ್ವಲ್ಪವೂ ಕುಗ್ಗಲಿಲ್ಲ.

"ನೀರಿಗೆ.... ಹಾರ್ಬೇಕು..."

ಎಚ್ಚರಿಕೆಯ ಕೂಗು ಹಾಕಿ ಸೌಭಾಗ್ಯಳ ತೋಳು ಹಿಡಿದು ಪಕ್ಕದಪ್ಪು ನೀರಿಗೆ ಹಾರಿದ.

ಕಾರು ಚಾಲಕಿಗೆ ಅದು ಅನಿರೀಕ್ಷಿತ. ಕಡೆಯ ಘಳಿಗೆಯಲ್ಲಿ ಬ್ರೇಕ್ ಒತ್ತಿತು ಅಸಾಧ್ಯ ವೇಗದ ವಾಹನ ಒಮ್ಮೆಗೇ ತಟ್ಟಿದ ತಟೆಯಲ್ಲಿ ಎಡಬಲ ಹೊರಳಿತು. ಚಕ್ರಗಳು ಕರ್ಕಶ ಗೀರು ಸದ್ದು ಹರಿಸಿದವು. ರಸ್ತೆಯಿಂದ ಚಿಮ್ಮಿದ ಕಾರು ಅಂಚಿನ ಮೇಲೆ ಕೆಲವು ಕ್ಷಣ ತೂಗಾಡಿ ನೀರಿಗೆ ಉರುಳಿತು.

ನೀರಿಗೆ ಜಿಗಿದವರಿಬ್ಬರೂ ನೀರಿನಿಂದ ರಸ್ತೆಗೆ ಏರಿ ನಿಂತರು. ವಾಹನದ ಅಂತಿಮ ಗತಿ ಅವರಿಗೆ ಕಂಡಿತ್ತು.

"ಮೀನಾಕ್ಷಿ..."

ಸಹಸ್ರ ನೀರ್ಗುಳ್ಳೆಗಳು ಸಶಬ್ದವಾಗಿ ಏಳುತ್ತಿದ್ದ ಕಡೆಗೆ ಕೈ ತೋರಿ ಕಂಪಿಸಿದಳು ಸೌಭಾಗ್ಯ. ಭೀಕರ ಹೆಣ್ಣು ಆವರೆಗೆ ತೋರಿದ್ದ ಅಮಾನುಷ ವರ್ತನೆಯನ್ನು ಮರೆತಿದ್ದಳು.

ಕಾರ್ತೀಕ ಅವಳ ತಲೆ ಸವರಿ ಸೂಚನೆ ಕೊಡದೆ ನೀರಿಗೆ ಹಾರಿದ. ಮೇರೆ ಇಲ್ಲದ ನೀರಿನಲ್ಲಿ ಮುಳುಗಿ ಸುತ್ತಲೂ ಸುಳಿದಾಡಿದ. ಕಪ್ಪು ನೀರಿನ ಮೇಲೆ ಅವನ ತಲೆ ಕಂಡಾಗ ಸೌಭಾಗ್ಯ ಅತ್ತ ಸರಿದು ಬಂದಳು. ಕಾರ್ತೀಕ ಒಬ್ಬನೇ!

ಅವನು ಆಳವಾಗಿ ಗಾಳಿ ಸೆಳೆದುಕೊಂಡು ಮತ್ತೆ ನೀರಿನಲ್ಲಿ ಕಣ್ಮರೆಯಾದ. ಅವನು ಸರಿದ ರಭಸಕ್ಕೆ ಮೆಲ್ಲನೆ ಚೀರಿದಳು ಸೌಭಾಗ್ಯ.

ಅಲೆಗಳಿಂದ ತುಳುಕುತ್ತಿದ್ದ ನೀರಿನಲ್ಲಿ ತಲೆ ಎತ್ತಿದ ಕಾರ್ತೀಕ. ಅವನ ತೋಳುಗಳಲ್ಲಿ ನಿರ್ಜೀವ ದೇಹದ ಮೀನಾಕ್ಷಿ!

"ನಿರ್ಭಾಗ್ಯ ಹೋಗ್ಬಿಟ್ಟಿದಾಳೆ" ವಿಷಣ್ಣನಾಗಿ ಹೇಳಿದ.

ಚಂದ್ರನ ಬೆಳಕಿನಲ್ಲಿ ಅವಳ ಅರೆ ಮುಚ್ಚಿದ ಕಣ್ಣುಗಳು ಭ್ರಮೆ ಹುಟ್ಟಿಸುವಂತಿದ್ದವು. ಮೀನಾಕ್ಷಿ ಜೀವಂತವಾಗಿದ್ದಾಳೆ!

* * *

ಸೌಭಾಗ್ಯಳ ಭುಜ ತೋಳಿನಿಂದ ಬಳಸಿ, ಮುಖವೆಲ್ಲ ಆವರಿಸಿದ ಸೊಂಪು ಕೂದಲು ಒತ್ತಿ ಸವರಿ ನೀರು ಹರಿಸಿದ ಕಾರ್ತೀಕ. ಸ್ಪರ್ಶದಲ್ಲೂ ದುರಾಶೆ, ಸಂಚು, ಸ್ವಾರ್ಥ.... ಈ ಕೇಶ ಸಂಪತ್ತು ಸಂಪೂರ್ಣ ತನ್ನ ಸ್ವತ್ತು

"ಎಂತ ಹುಚ್ಚ ನಾನು! ನಿನ್ನ ಕೊಲೆಗೆ ಕೈ ಹಚ್ಚಿಬಿಟ್ಟಿದ್ದೆ...."

ಅವನ ತುಟಿಗೆ ಬೆರಳು ಒತ್ತಿದಳು.

"ಹಾಗೆಲ್ಲಾ ಹೀನ ಕಲ್ಪನೆ ಮಾಡಿಕೊಂಡಿದ್ದೆ. ಸಂಕುಚಿತ ಬುದ್ಧಿಯೋಳು."

"ನಿನ್ನ ಕಲ್ಪನೆ ಇರಲಿ. ಸ್ವಲ್ಪ ನನ್ನದು ಕೇಳು. ಕೊಲೆ ಮಾಡೊ ವಿಚಿತ್ರ ನಿರ್ಧಾರಕ್ಕೆ ನಿಜವಾಗಲೂ ಬಂದಿದ್ದೆ. 'ಮಣ್ಣಿನ ದೋಣಿ'ಯ ದುರಂತದ ಹುಚ್ಚು. ಅದಕ್ಕೆ ಹೆಂಡತಿ ಕೊಲೆ! ಬೂಟಿನ ಅಳತೆಗೆ ಪಾದ ಕತ್ತರಿಸಿಕೊಳ್ಳೊ ಹಾಗೆ..."

ಮೆದು ನಗೆಯಲ್ಲಿ ಅವಳ ಕೆನ್ನೆ ತಟ್ಟಿದ. ಅವಳಿಂದ ಹೊರಬರಲು ಕಾದಿದ್ದವು ಪಶ್ಚಾತ್ತಾಪದ ನೂರು ಮಾತುಗಳು. ಹೃದಯ ದ್ರವಿಸಿದ ಅಳು. ಅವಳ ಕಡೆ ಅಡ್ಡ ಬೆರಳು ತೋರಿ 'ಶ್!' ಎಂದು ತನ್ನ ಮಾತೇ ಮುಂದುವರಿಸಿದ.

"ಕಾದಂಬರಿಯ ಅಂತ್ಯದಲ್ಲೂ ಬರಹ ತಿರುಗು ಮುರುಗು ಆಯ್ತು. ದುರಂತ ಕಾಣೋಳು ಕಥಾನಾಯಕಿ ಅಂದಿದ್ದೆ. ಆದರೆ ಆ ಗತಿ ಬಂದಿದ್ದು ಮೀನಾಕ್ಷಿಗೆ. ನಗ್ತೀಯ ಕೇಳಿದ್ರೆ... ಭಾರಿ ಕೊಲೆ ಮಾಡೋಣ ಹಾಗೆ ತಲೆ ನರಕ ಮಾಡ್ಕೊಂಡು ಎದೆಗೆ ಕೈಯಿಟ್ಟು ತೋಟದ ಕಡೆ ಬಂದೆ. ಗಾಳಿ ಇಲ್ಲದ ನಿರ್ಜನ ಭಾಗದಲ್ಲಿ ನನ್ನ ತಲೆಯಲ್ಲಿ ಬಿರುಗಾಳಿಯೆಲ್ಲ ಸೋರಿಹೋಯ್ತು. ನಿನಗೆ ಬೇಸರ ಬಂದ್ರೂ ಸರಿ, ಅವೆಲ್ಲಾ ನಿನಗೆ ಆಗಲೇ ಹೇಳಿ ಬೈಸಿಕೊಂಡು ಬಿಡುವ ಅಂತ ನಿನ್ನ ಕೋಣೆಗೆ

ಬಂದೆ. ನೀನು ಇರ್ಲಿಲ್ಲ! ..... ಈ ಕಡೆ ಬಂದೆ. ನಸು ಬೆಳಕಿನಲ್ಲಿ ದೂರಕ್ಕೆ ರಸ್ತೆ ಮೇಲೆ ಯಾರೊ ನಿಂತ ಹಾಗೆ ಕಾಣಿಸ್ತು. ಹತ್ತಿರ ಬಂದಾಗ ರಸ್ತೆಯ ಮೇಲೊಂದು, ನೀರಿನಲ್ಲೊಂದು ವ್ಯಕ್ತಿಗಳಿರೋದು ಅರ್ಥ ಆಯ್ತು. ನೀರಿನ ಸಪ್ಪಳ, ಗಹಗಹ, ನಗೆ, ಅಸ್ಪಷ್ಟ ಮಾತುಗಳು... ಅಪಾಯದ ವಾಸನೆ ಬಂತು. ಆಮೇಲೆ ನಲವತ್ತು ಲಕ್ಷದ ಸಾಹುಕಾತಿನ ಉಳಿಸಿಕೊಳ್ಳದೆ ಹೋದ್ರೆ ನನ್ನ ಗತಿ?"

ಅವಳ ಮೂಗು ಅಲುಗಿಸಿ ತುಟಿಗೆ ಬೆರಳು ಸವರಿದ.

"ನಿಮ್ಮ ಹೃದಯ ಸಮುದ್ರ. ಅವರ ಮರಳು ದಂಡೆ ಮೇಲೆ ಆ ಸಂಪತ್ತು ನಲವತ್ತು ಲಕ್ಷ ಕಪ್ಪೆಚಿಪ್ಪುಗಳ ಹಾಗೆ. ಮಣ್ಣಿನ ದೋಣಿ ನೀರಿಲ್ಲಿ ಕರಗದೆ ಉಳಿದಿದ್ದು ನನ್ನ ಪುಣ್ಯ."

ಸಂತಸದ ಉದ್ವೇಗ ಮುಂದೆ ಹೇಳಗೊಡಲಿಲ್ಲ.

"ಮಣ್ಣಿನ ದೋಣಿ ಇಳಿದಿದ್ದು ನೀರಿಗಲ್ಲ. ಆ ಹೊಳೆ ಪೂರ್ತಿ ಮಣ್ಣಿನ ಮಯ. ಮಣ್ಣಿನ ಸಂತುಷ್ಟ ದ್ರಾವಣದಲ್ಲಿ ಸಾಗಿದ ಮಣ್ಣಿನ ದೋಣಿ ಕರಗೋದು ಹೇಗೆ?"

ಅವನ ಎದೆಗೆ ಮುಖ ಒತ್ತಿ ಕುಸು ಕುಸು ಅಳು ತೆಗೆದಳು.

"ಉಯಿಲು ಹಗರಣ ಇಷ್ಟೊಂದು ನಡೆದ್ರೂ ಗಟ್ಟಿಯಾಗಿ ನಿಂತಿದ್ದು ನಿಮ್ಮ ಪ್ರೀತಿಯೊಂದೇ. ಅದಕ್ಕೆ ನಾನು ಅರ್ಹಳಲ್ಲ. ನೀವು ಅವತ್ತು ಹೇಳಿದ್ದು ನನ್ನಲ್ಲಿ ಆಗೋದಿಕ್ಕೆ ಇಷ್ಟು ತಡ ಆಯ್ತು. ಕಣ್ಣಿಗೆ ಬೇರೆಯೋರು ತೊಡಿಸಿದ ಬಣ್ಣದ ಗಾಜು ಈಗ ಬಿದ್ದು ಹೋಗಿದೆ. ಕಣ್ಣಿನ ಪೊರೆ ಕಳಚಿ ಹೋಯ್ತು. ಕಾಣ್ತಾ ಇರೋರು ನೀವೊಬ್ಬರೆ...."

ಕಣ್ಣು ಮುಚ್ಚಿ ಅವನನ್ನು ನೋಡುತ್ತಿದ್ದಳು. ಕಾರ್ತೀಕ ಆ ಕಣ್ಣುಗಳಿಗೆ ತುಟಿ ಒತ್ತಿದ.

ನಲವತ್ತರ ಯುವಕ!.........ಹದಿನಾರರ ಪ್ರೌಢೆ!

ವಿಪರ್ಯಾಸದ ಕಂದರ ಮುಚ್ಚಿ ಹೋಗಿತ್ತು. ಅದರ ಮೇಲೆ ಕಹಿ ನೆನಪು, ದುಃಸ್ವಪ್ನಗಳ ಸಮಾಧಿ.

ಬತ್ತಲಿದ್ದ ಪ್ರೇಮದ ಸೆಲೆ ಚಿಲುಮೆಯಾಗಿ ಚಿಮ್ಮಿತು.

* * *